# ಭೀಷ್ಮ ಚರಿತೆ



ಚ. ವಾಸುದೇವಯ್ಯನವರಿಂದ

ರಚಿತವಾದುದು





ಪ್ರಥಮ ಮುದ್ರಣ ೨,೦೦೦ ಪ್ರತಿಗಳು



ಬೆಂಗಳೂರು ಸಿಟಿ:

ಬೆಂಗಳೂರು ಪ್ರೆಸ್, ಮೈಸೂರು ರೋಡು

೧೯೨೭

ಬೆಲೆ ರೂ. 3-8-0



# ವಿಜ್ಞಾಪನೆ

ಶ್ರೀಯುತ ರಜನೀಕಾಂತಗುಪ್ತರಿಂದ ವಂಗ ಭಾಷೆಯಲ್ಲಿ ರಚಿತವಾದ ಭೀಷ್ಮ ಚರಿತೆಯನ್ನು ನಾನು ಇಂದಿಗೆ ಬಹು ವರ್ಷಗಳ ಹಿಂದೆ ಓದಿ ಅದನ್ನು ಕನ್ನಡಿಸಿ 'ಆರ್ಯಕೀರ್ತಿ'ಯ ಪ್ರಥಮ ಭಾಗವನ್ನು ಪ್ರಕಟಿಸಿದೊಡನೆಯೇ ಅಚ್ಚು ಹಾಕಿಸಬೇಕೆಂದಿದ್ದೆನು; ಆದರೆ ಆ ಆಲೋಚನೆಯು ಸಾಗಲಿಲ್ಲ. ಈಚೆಗೆ ಅದನ್ನು ಅಚ್ಚು ಹಾಕಿಸಬೇಕೆಂದೆಣಿಸಿ, ಮೂಲದಲ್ಲಿ ಪ್ರಾಸಂಗಿಕವಾಗಿ ಸೂಚಿಸಿರುವ ಕೆಲವು ಸಂಗತಿಗಳನ್ನು ಮಹಾಭಾರತದಲ್ಲಿ ಹೇಳಿರುವಂತೆ ಸ್ವಲ್ಪಮಟ್ಟಿಗೆ ವಿವರಿಸಿ, ಮತ್ತೆ ಕೆಲವು ಹೆಚ್ಚು ಸಂಗತಿಗಳನ್ನು ಸೇರಿಸಿ, ಭೀಷ್ಮನ ಪರಿಸ್ಥಿತಿಯೂ ಅವನ ಅಸಾಮಾನ್ಯ ಪಿತೃಭಕ್ತಿ, ಅಪೂರ್ವ ಸತ್ಯಪರಾಯಣತೆ, ಅನನ್ಯ ಪರಾರ್ಥಪರತೆ, ಧರ್ಮಶೀಲತೆ, ಆತ್ಮಸಂಯಮತೆ, ವೀರ್ಯ ಶೌರ್ಯಾದಿ ಸದ್ಗುಣಗಳೂ ವಿಶದವಾಗುವಂತೆ ಕಥೆಯನ್ನು ಸ್ವಲ್ಪ ವಿಸ್ತರಿಸಿ ಬರೆದಿದ್ದೇನೆ. ಆದರೂ, ಇಷ್ಟು ಸಣ್ಣ ಸಂಪುಟದಲ್ಲಿ ಕುರುಕುಲ ಪ್ರತಿಷ್ಠಾಪನಾಚಾರ್ಯನ ಅದ್ಭುತ ಮಾಹಾತ್ಮ್ಯವು ಅಡಕವಾಗುವುದೂ ಅಲ್ಲ, ನನ್ನಂತಹ ಅಲ್ಪ ಶಕ್ತನಿಗೆ ನಿಲುಕುವುದೂ ಅಲ್ಲ ಎಂದು ತಿಳಿದು ಇಷ್ಟರಲ್ಲಿಯೇ ವಿರಮಿಸಿರುವೆನು.

ಈ ಕಥೆಯನ್ನು ಬರೆಯುವುದರಲ್ಲಿ, ಪ್ರತಾಪಚಂದ್ರರಾಯ್ ಅವರು ಇಂಗ್ಲೀಯ ಭಾಷೆಗೆ ಪರಿವರ್ತಿಸಿರುವ ಮಹಾಭಾರತದಿಂದ ನನಗೆ ವಿಶೇಷ ಸಾಹಾಯ್ಯವಾಯಿತು. ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಮ|| ರಾ|| ಶ್ರೀ ಎಂ. ಶಾಮರಾವ್, ಎಂ.ಎ. ಅವರು ನಾನು ಬರೆದಿರುವ ಪುಸ್ತಕವನ್ನು ನೋಡಿ, ಅದು ಪ್ರಕಟಿಸಲು ಅರ್ಹವಾಗಿದೆ ಎಂದು ಹೇಳಿ ನನ್ನನ್ನು ಪ್ರೋತ್ಸಾಹಗೊಳಿಸಿದುದಕ್ಕಾಗಿ ಆ ಮಹನೀಯರನ್ನು ವಂದಿಸುತ್ತೇನೆ.

ನನ್ನ ಮಿತ್ರರಾದ ಮ॥ ರಾ॥ ಶ್ರೀ ಮ. ಆ. ತಿರುಮಲಾಚಾರ್ಯ, ಬಿ.ಎ. ಅವರು ನಾನು ಬರೆದ ಪ್ರತಿಯಲ್ಲಿದ್ದ ಅಕ್ಷರ ಸ್ಖಾಲಿತ್ಯ ಪುನರುಕ್ತಿಗಳಿಗೆ ಎಡೆಗೊಡದೆ, ಅಚ್ಚುಹಾಕಿಸುವುದಕ್ಕೆ ತಕ್ಕಂತೆ ಮುಕ್ತಾಫಲದಂತಿರುವ ತಮ್ಮ ಅಕ್ಷರದಲ್ಲಿ, ಒಂದು ಶುದ್ಧ ಪ್ರತಿಯನ್ನು ಬರೆದುಕೊಟ್ಟರು. ಆ ಉಪಕಾರಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ.

ಮ॥ ರಾ॥ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರು ಅಡಿಗಡಿಗೆ ನಾನು ಕೊಡುತ್ತಿರುವ ತೊಂದರೆಗೆ ಬೇಸರದೆ, ಪುಸ್ತಕದಲ್ಲಿದ್ದ ನನ್ನ ಭ್ರಮ ಪ್ರಮಾದಗಳನ್ನು ತಿದ್ದಿ ಮುದ್ರಾಂಕನದ ತಪ್ಪುಗಳನ್ನು ಸಾವಧಾನವಾಗಿ ಶೋಧನೆ ಮಾಡುವ ಶ್ರಮವನ್ನು ವಹಿಸಿದುದಕ್ಕಾಗಿ ನಾನು ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಬೆಂಗಳೂರು ಪ್ರೆಸ್ಸಿನವರು ಈ ಪುಸ್ತಕವನ್ನು ಸಕಾಲಕ್ಕೆ ಅಚ್ಚುಹಾಕಿಕೊಟ್ಟುದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು,<br>೧ನೆಯ ಜೂಲೈ ೧೯೨೭.

ಚ. ವಾಸುದೇವಯ್ಯ.

# ವಿಷಯಾನುಕ್ರಮಣಿಕೆ

"'ಗೆಲಲು ಬೇಹುದು ಮೊದಲು ತನ್ನನ।

ಬಳಿಕ ಹಗೆಗಳ ಗೆಲಲು ಬೇಕ!

ಗ್ಗಳಸಿದಿಂದ್ರಿಯ ಜಯವ ಗೆಲುವುದೆ ತನ್ನ ಗೆದ್ದುದದು ॥"

“ಘನ ವಿವೇಕಿ ದೃಢಾತ್ಮ ಸದಯನು।
ವನಜನಾಭನಿಗಿಷ್ಟಭಕ್ತನು।
ವಿನಯಪರನಭಿಮಾನಿ ಕಾರ್ಯಾಕಾರ್ಯ ಸಂವೇದೀ॥
ವಿನುತ ದೇವಜ್ಞನು ಸದಾ ಶಾಂ।
ತನು ಚರಿತ ನಿಸ್ಪೃಹನು ಶೂರನು।
ನೆನೆದಡಾತನ ಗುಣವಗಣ್ಯಗಳೆನ್ನ ನಂದನನಾ॥”

# ಭೀಷ್ಮ ಚರಿತೆ

## ಮೊದಲನೆಯ ಅಧ್ಯಾಯ

### ಭೀಷ್ಮನ ಪ್ರತಿಜ್ಞೆ.

ಸುಪ್ರಸಿದ್ಧ ಕುರುವಂಶದಲ್ಲಿ ಶಂತನುವೆಂಬ ನರಪತಿಯೊಬ್ಬನು ಜನ್ಮವೆತ್ತಿದನು. ಅವನು ಸರ್ವ ಗುಣಕ್ಕೂ ಆಧಾರನಾಗಿ ಸರ್ವ ಸಂಪತ್ತಿಗೂ ಅಧಿಕಾರಿಯಾಗಿ ಹಸ್ತಿನಾಪುರದಲ್ಲಿ ಸುನಿಯಮದಿಂದ ರಾಜ್ಯ ವನ್ನಾಳುತ್ತ ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತಿದ್ದನು. ಅವನ ರಾಜ್ಯ ಶಾಸನದ ಪ್ರಭಾವದಿಂದ ಸಮಗ್ರ ರಾಜ್ಯವೂ ಸಿರಿಯನ್ನೈದಿತು. ಸರ್ವತ್ರ ಧರ್ಮ ಸನ್ಮಾನವೂ ಸುಖ ಸಮೃದ್ಧಿಯೂ ಕಣ್ಗೊಳಿಸು ತ್ತಿದ್ದುವು. ಪ್ರಜೆಗಳು ಸದಾಚಾರವನ್ನು ಅಣುಮಾತ್ರವೂ ಬಿಟ್ಟು ಹೋಗುತ್ತಿರಲಿಲ್ಲ. ಆದುದರಿಂದ ಸಮಸ್ತ ರಾಷ್ಟ್ರವೂ ಶಾಂತಿ ಪೂರ್ಣವಾಗಿದ್ದಿತು. ಶಂತನುವು ಇಂತಹ ಸುಖ ಪೂರ್ಣವೂ ಶಾಂತಿ ಪೂರ್ಣವೂ ಆದ ರಾಜ್ಯಕ್ಕೊಡೆಯನಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದನು.

ಮಹಾರಾಜನಿಗೆ ದೇವವ್ರತನೆಂಬೊಬ್ಬ ಮಗನಿದ್ದನು. ಅವನು ಯೌವನದಶೆಗೆ ಬರುತಲೆ ಅವನ ಪ್ರಶಸ್ತ ಲಲಾಟವನ್ನೂ, ವಿಶಾಲವಾದ ವಕ್ಷಸ್ಸ್ಥಲವನ್ನೂ, ಆಜಾನುಬಾಹುಗಳನ್ನೂ, ಸ್ಥೂಲವೂ ಉನ್ನತವೂ ಆದ ಕಾಯವನ್ನೂ ಮೆಚ್ಚಿ ಸರ್ವರೂ ಅವನನ್ನು ಪ್ರೀತಿಸುತ್ತಿದ್ದರು. ಕಾಲಕ್ರಮದಲ್ಲಿ ರಾಜಕುಮಾರನು ಸರ್ವ ಶಾಸ್ತ್ರಗಳಲ್ಲಿಯೂ ಸುಪಂಡಿತ

ನಾದನು. ಅವನು ಬುದ್ಧಿಯಲ್ಲಿ ಅಸಾಧಾರಣನೂ, ಬಲದಲ್ಲಿ ನಿಸ್ಸೀಮನೂ, ಅಧ್ಯವಸಾಯದಲ್ಲಿ ನಿಶ್ಚಲನೂ ಆಗಿದ್ದನು. ಅವನು ಶಾಸ್ತ್ರ ಜ್ಞಾನ, ಶಸ್ತ್ರ ಪ್ರಯೋಗ, ವಿಚಾರ ಶಕ್ತಿ—ಇವುಗಳಲ್ಲಿ ತಂದೆಗೂ ಅಧಿಕನೆನಿಸಿಕೊಂಡನು.

ಮಗನು ಯೌವನಾವಸ್ಥೆಗೆ ಬಂದು ಸರ್ವ ಗುಣ ಸಂಪನ್ನನಾಗಿರುವುದನ್ನು ಶಂತನುವು ನೋಡಿ ಹರ್ಷಗೊಂಡು ರಾಷ್ಟ್ರ ಪುರವಾಸಿಗಳಲ್ಲಿ ಪ್ರಮುಖರಾದವರನ್ನು ಕರೆಯಿಸಿ ಅವರ ಸಮಕ್ಷದಲ್ಲಿ ಮಗನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಯುವರಾಜನು ಪ್ರವರ್ಧಮಾನನಾಗಿ ಸತ್ಕಾರ್ಯಗಳಿಂದ ಸಕಲ ಜನ ರಂಜಕನಾದನು. ಅವನ ಪಿತೃ ಭಕ್ತಿ ಲೋಕವಿಸ್ಮಯಕರವಾದುದು; ಅವನ ಆತ್ಮ ಸಂಯಮನವು ಅಸ್ಸಾಧ್ಯವಾದುದು; ಅವನ ಪ್ರಜಾನುರಾಗವು ಅಪೂರ್ವವಾದುದು. ಅವನು ಪ್ರಜೆಗಳ ಹಿತವನ್ನೇ ಸಾಧಿಸುತ್ತಿರುವನು; ವಯೋವೃದ್ಧರನ್ನು ಉಚಿತ ರೀತಿಯಲ್ಲಿ ಸನ್ಮಾನಿಸುವನು; ಸಮ ವಯಸ್ಕರನ್ನು ಸೌಜನ್ಯದಿಂದ ಸಂತೋಷಗೊಳಿಸುವನು. ಯುವರಾಜನಾದರೂ ಅವನು ಸುಖಕ್ಕೆಳಸಲಿಲ್ಲ; ಪರಾಕ್ರಮಶಾಲಿಯಾದರೂ ದಯಾ ದಾಕ್ಷಿಣ್ಯವನ್ನು ತೊರೆಯಲಿಲ್ಲ. ಶತ್ರುಗಳು ಅವನ ಶೌರ್ಯಕ್ಕಂಜುವರು; ಸ್ವಕೀಯರು ಅವನ ಸೌಮ್ಯತೆಗೆ ಸಂತೋಷಿಸುವರು; ಆರ್ತರು ಅವನ ಸಾಹಾಯ್ಯವನ್ನು ಬೇಡುವರು; ಪ್ರಜೆಗಳೆಲ್ಲರೂ ಧರ್ಮಕ್ಕೆ ಆಶ್ರಯನೆಂದು ಅವನನ್ನು ಕೊಂಡಾಡುವರು. ಇಂತು ಮಗನ ಗುಣಕೀರ್ತನವನ್ನು ಕೇಳಿ ಶಂತನುವು ತಾನು ಕೃತಾರ್ಥನೆಂದೆಣಿಸಿದನು; ಇಂದಿನ ವರೆಗೆ ದುರ್ವಹವಾಗಿದ್ದ ರಾಜ್ಯಭಾರವು ಹಗುರವಾಯಿತೆಂದು ಭಾವಿಸಿದನು. ಅವನು ರಾಜಕೀಯ ಕಾರ್ಯಭಾರವನ್ನು ಮಗನಿಗೊಪ್ಪಿಸಿ, ಮಗನ ಶುಶ್ರೂಷೆಯಿಂದ ಸಂತುಷ್ಟನಾಗಿ ನಿಶ್ಚಿಂತನಾಗಿದ್ದನು.

ಈ ತೆರದಲ್ಲಿ ನಾಲ್ಕು ವರ್ಷಗಳು ಕಳೆಯಲು ಶಂತನುವು ಒಂದು ದಿನ ತನ್ನ ಪರಿಜನರೊಡಗೂಡಿ ಬೇಟೆಯಾಡುವುದಕ್ಕೆ ಯಮುನಾ ತೀರಕ್ಕೆ ಹೋದನು. ರಾಜನು ತಡಿಯ ಬಳಿ ಇದ್ದ ಅಡವಿಯಲ್ಲಿ

ಸಂಚರಿಸುತ್ತಿರುವಲ್ಲಿ ಒಂದು ವಿಧ ಪರಿಮಳವನ್ನು ಆಘ್ರಾಣಿಸಿದನು. ಆ ಸುಗಂಧವು ಎತ್ತಣಿಂದ ಬಂದು ಅರಣ್ಯದಲ್ಲಿ ಆಮೋದವನ್ನುಂಟು ಮಾಡಿತೊ ಅರಿಯಬೇಕೆಂದು ಇತ್ತಿತ್ತ ನೋಡುತ್ತಿರುವಲ್ಲಿ ದೇವತಾ ಸ್ತ್ರೀಯನ್ನು ಹೋಲುವ ರೂಪಲಾವಣ್ಯವತಿಯಾದ ಕನ್ಯೆಯೊಬ್ಬಳು ದೃಷ್ಟಿಗೆ ಬಿದ್ದಳು. ಆ ಚೆಲುವೆಯ ದೇಹ ಪರಿಮಳವೇ ತಂಗಾಳಿಯಲ್ಲಿ ಬೆರೆತು ಅರಣ್ಯವೆಲ್ಲವನ್ನು ಸುರಭಿಮಯವಾಗಿ ಮಾಡಿದುದು. ಶಂತನುವು ಆ ಕನ್ಯೆಯು ನಿರ್ಜನ ವನಕ್ಕೆ ಬಂದುದನ್ನು ಕಂಡು ಕುತೂಹಲಯುತನಾಗಿ—"ನೀನಾರು? ಆವ ಬಗೆಯವಳು? ಈ ಅರಣ್ಯಕ್ಕೆ ಒಬ್ಬಳೇ ಏಕೆ ಬಂದಿರುತ್ತೀಯೆ? ನನ್ನನ್ನು ಮದುವೆಯಾಗುವೆಯಾ?" ಎಂದು ಅವಳನ್ನು ಕೇಳಿದನು. ಅದಕ್ಕಾ ಕನ್ಯೆಯು, "ಮಹಾಶಯನೆ! ನಾನು ದಾಶರಾಜನ ಮಗಳು; ಕುಲದಲ್ಲಿ ನಾವು ಬೆಸ್ತರು; ನಾನು ತಂದೆಯ ಅಧೀನಳು; ಆತನು ಆಗಲೆಂದರೆ ತಾವು ನನ್ನನ್ನು ಮದುವೆ ಯಾಗಬಹುದು" ಎಂದಳು. ಆ ಮಾತಿಗೊಪ್ಪಿ ಶಂತನುವು ದಾಶರಾಜ ನಲ್ಲಿಗೆ ಹೋಗಿ, ಮಗಳನ್ನು ತನಗೆ ಕೊಡೆಂದು ಕೇಳಲು, ಅವನು, "ಮಹಾರಾಜನೆ! ನಾನು ಅಂಬಿಗನು; ಕೀಳು ಜಾತಿಯವನು; ನೀನು ಭುವನ ವಿಖ್ಯಾತ ಕುರುಕುಲದಲ್ಲಿ ಹುಟ್ಟಿದವನು; ಧನಸಂಪತ್ತಿ ಪೂರ್ಣ ವಾದ ವಿಶಾಲ ರಾಜ್ಯಕ್ಕೊಡೆಯನು; ನಿನ್ನಂತಹ ಶಾಸ್ತ್ರಜ್ಞನೂ ಶಸ್ತ್ರ ವಿದ್ಯಾವಿಶಾರದನೂ ಆದ ಅರಸನನ್ನು ಎಲ್ಲಿಯೂ ಕಾಣೆನು; ನಿನ್ನ ಸಾಮರ್ಥ್ಯವು ಅನುಪಮವಾದುದು, ರೂಪು ಸುರಮ್ಯವಾದುದು, ದೇಹ ಕಾಂತಿಯು ಮನೋಹರವಾದುದು. ನಿನ್ನಂತಹ ಸತ್ಪಾತ್ರನು ನನಗೆ ಎಲ್ಲಿಯೂ ದೊರೆಯನು. ನಾನು ಕನ್ಯಾಪಿತೃವು; ಕನ್ಯೆಯನ್ನು ಸತ್ಪಾತ್ರ ನಿಗೆ ಕೊಡುವುದು ನನ್ನ ಕರ್ತವ್ಯವು. ಆದರೆ ನೀನು ಕ್ಷತ್ರಿಯ ಕುಲದವನು; ಅಲ್ಲದೆ, ಪುತ್ರವಂತನು. ನನ್ನ ಮಗಳನ್ನು ನಿನಗೆ ಕೊಟ್ಟರೆ ಅವಳ ಹೊಟ್ಟೆಯಲ್ಲಿ ಹುಟ್ಟುವವರು ನಿನ್ನ ಮಗನಿಗೆ ಆಳುಗಳಾಗುವರೇ ಹೊರತು ಅರಸರಾಗರು. ಆದುದರಿಂದ, ನನ್ನ ಪ್ರಾರ್ಥನೆಯೊಂದಿದೆ, ಲಾಲಿಸು; ನಿನ್ನ ತರುವಾಯ, ನನ್ನ ಮಗಳ ಮಗನಿಗೆ ನಿನ್ನ ರಾಜ್ಯ ವನ್ನು ಕೊಡುವುದಾದರೆ ಅವಳನ್ನು ನಿನಗೆ ಕೊಡುವೆನು" ಎಂದನು.

ಶಂತನುವು ದಾಶರಾಜನ ಪ್ರಾರ್ಥನೆಯನ್ನು ಕೇಳುತ್ತಲೇ ಕಳವಳ
ಗೊಂಡನು. ಪುರವಾಸಿಗಳೂ ದೇಶವಾಸಿಗಳೂ ಪ್ರಬುದ್ಧನಾದ ದೇವ
ವ್ರತನ ಗುಣಾತಿಶಯವನ್ನು ಅನುಕ್ಷಣವೂ ಹೊಗಳುತ್ತಿದ್ದರು; ಧರ್ಮ
ಪರಾಯಣರು ಅವನ ಶಾಸ್ತ್ರಜ್ಞಾನವನ್ನೂ ಸತ್ಕಾರ್ಯಗಳನ್ನೂ
ಪ್ರಶಂಸಿಸುತ್ತಿದ್ದರು; ವೀರ ಪುರುಷರು ಅವನ ಅಮಿತ ವಿಕ್ರಮವನ್ನು
ಸ್ತುತಿಸುತ್ತಿದ್ದರು. ಅಂತಹ ಗುಣಾಢ್ಯನೂ ಪ್ರಾಣಾಧಿಕನೂ ಆದ
ಮಗನನ್ನು ವಂಚಿಸಿ ರಾಜ್ಯವನ್ನು ಅನ್ಯನಿಗೆ ಕೊಡುವುದು ದೂಷ್ಯವೆಂ
ದೆಣಿಸಿ ಶಂತನುವು ವಿಮನಸ್ಕನಾಗಿ ದಾಶರಾಜನ ಮಾತಿಗೊಡಂಬಡದೆ
ನಿರಾಶೆಯಿಂದ ರಾಜಧಾನಿಗೆ ಹಿಂದಿರುಗಿ ಹೋದನು. ಆದರೆ ಅವನ
ಮನಸ್ಸು ಮಾತ್ರ ಆ ಕನ್ಯೆಯಲ್ಲಿಯೇ ನಿಂತಿತು.

ಮಹಾರಾಜನು ಹಸ್ತಿನಾಪುರಕ್ಕೆ ಬಂದು ತನ್ನ ಅಭೀಷ್ಟವು
ಕೈಗೂಡಲಿಲ್ಲವೆಂದು ಕೊರಗುತ್ತ ಅನ್ನೋದಕಗಳನ್ನು ಬಿಟ್ಟು ಬಡ
ವಾದನು. ದೇವವ್ರತನು ತಂದೆಯ ಮಲಿನ ಮುಖವನ್ನು ಕಂಡು ಕಾರಣ
ವರಿಯದೆ ಚಿಂತಿಸುತ್ತ, ಒಂದು ದಿನ ಆತನ ಬಳಿಗೆ ಹೋಗಿ ವಿನಯ
ಪೂರ್ವಕವಾಗಿ ನಮಸ್ಕಾರಮಾಡಿ ಇಂತೆಂದನು:—"ಆರ್ಯರೆ! ರಾಜ್ಯ
ದೊಳಗೆಲ್ಲಿಯೂ ಅಮಂಗಳ ಚಿಹ್ನೆಗಳು ಕಾಣವು; ಸಾಮಂತ ರಾಜರು
ವಿಧೇಯರಾಗಿರುವರು; ಪ್ರಜೆಗಳು ಕ್ಷೇಮವಾಗಿರುವರು; ಎಲ್ಲಿ ನೋಡಿ
ದರೂ ಸುಖವೂ ಶಾಂತಿಯೂ ಪುಷ್ಟಿಯೂ ತುಷ್ಟಿಯೂ ಕಣ್ಗೊಳಿಸು
ತ್ತಿರುವುವು. ಆದರೂ ಯಾವ ಕಾರಣದಿಂದಲೋ ತಮ್ಮ ಮುಖದಲ್ಲಿ
ವ್ಯಾಕುಲತೆಯು ತೋರುತ್ತಿರುವುದು; ತಾವು ಖಿನ್ನ ಹೃದಯರಾಗಿರು
ವಿರಿ; ಎಂದಿನಂತೆ ಸಂತೋಷ ಚಿತ್ತರಾಗಿ ಪುತ್ರವಾತ್ಸಲ್ಯದಿಂದ
ನನ್ನೊಡನೆ ಮಾತನಾಡುವುದಿಲ್ಲ; ಕುದುರೆಯ ಸವಾರಿ ಹೋಗುವುದಿಲ್ಲ;
ದಿನ ದಿನಕ್ಕೆ ತಮ್ಮ ಶರೀರವು ಕೃಶವಾಗುತ್ತಿರುವುದು; ಮುಖವು
ಬೆಳ್ಳಗಾಗುತ್ತಿರುವುದು; ಯಾವ ವ್ಯಾಧಿಯಿಂದ ಈ ವಿಕಾರಗಳು
ಹುಟ್ಟಿವೆಯೋ ಅಪ್ಪಣೆಯಾದರೆ ಅದರ ನಿವಾರಣಕ್ಕೆ ತಕ್ಕ ಉಪಾಯ
ವನ್ನು ಮಾಡಲು ಯತ್ನಿಸುವೆನು."

ಶಂತನುವು ದೇವವ್ರತನ ಮಾತನ್ನು ಕೇಳಿ ದಾಶರಾಜನ ಮಗಳಲ್ಲಿ ತನಗೆ ಹುಟ್ಟಿದ್ದ ಅನುರಾಗವನ್ನು ಮಗನಿಗೆ ಹೇಳಲು ಸಂಕೋಚಪಟ್ಟು ಮರೆಸಿ ಇಂತೆಂದನು :—"ಮಗನೇ! ನಮ್ಮ ವಂಶಕ್ಕೆ ಇರುವ ಆಧಾರ ವೆಲ್ಲವೂ ನೀನೊಬ್ಬನೆ. ನೀನು ಶೂರನು, ಅಸ್ತ್ರವಿದ್ಯೆಯಲ್ಲಿ ಸುದಕ್ಷನು, ಯಾವಾಗಲೂ ಯುದ್ಧ ಸನ್ನಾಹದಲ್ಲಿಯೇ ಇರುತ್ತೀಯೆ. ಜಗತ್ತಿನಲ್ಲಿ ಯಾವುದೂ ಸ್ಥಿರವಲ್ಲ; ಮನುಷ್ಯದೇಹವು ಅನಿತ್ಯವಾದುದು; ಯಾವ ಸಮಯದಲ್ಲಿ ನಿನಗೇನಾಗುವುದೋ, ಏನು ವಿಪತ್ತು ಬರುವುದೋ ತಿಳಿಯದು. ನಿನಗೇನಾದರೂ ಅಪಾಯವು ಪ್ರಾಪ್ತವಾದರೆ ನಮ್ಮ ಪವಿತ್ರ ಕುಲವು ನಿಸ್ಸಂತತಿಯಾಗುವುದು. ಯಾವನಿಗೆ ಒಬ್ಬನೇ ಮಗನೋ ಅವನನ್ನು ಧರ್ಮವಾದಿಗಳು ಅಪುತ್ರನೆಂದೇ ಭಾವಿಸುವರು. ಅವರು ಹೇಳುವಂತೆ ಒಬ್ಬ ಮಗನು ಮಗನಲ್ಲ, ಒಂದು ಕಣ್ಣು ಕಣ್ಣಲ್ಲ. ನಾನು ಪ್ರತಿಕ್ಷಣದಲ್ಲಿಯೂ ಸರ್ವಶಕ್ತನಾದ ಈಶ್ವರನ ಸನ್ನಿಧಿಯಲ್ಲಿ ನಿನ್ನ ಕುಶಲವನ್ನೇ ಪ್ರಾರ್ಥಿಸುತ್ತಿರುವೆನು. ನೀನು ಕ್ಷೇಮವಾಗಿರು. ಆದರೆ ನೀನು ನಿರಂತರವಾಗಿ ಶೌರ್ಯವನ್ನು ತೋರುವುದರಲ್ಲಿಯೇ ನಿರತನಾಗಿರುತ್ತೀಯೆ; ನಿನ್ನ ಪರಾಕ್ರಮವನ್ನೂ ಧನುರ್ವಿದ್ಯೆಯಲ್ಲಿ ನಿನ್ನ ದಕ್ಷತೆಯನ್ನೂ ನೋಡಿದರೆ ರಣರಂಗದಲ್ಲಿಯೇ ನಿನಗೆ ಸಾವೆಂದು ತೋರುವುದು. ಮಗನೇ! ನೀನು ನನಗೆ ಪ್ರಾಣಾಧಿಕನು; ನನಗೆ ಸರ್ವಸ್ವವೂ ನೀನೆ. ನೀನೇನಾಗುವೆಯೋ ಎಂದು ನನಗೆ ಅಪಾರವಾದ ಚಿಂತೆ ಹುಟ್ಟಿರುವುದು. ಶಾಂತಿಯಿಲ್ಲದ ಕಾರಣ ಮನಸ್ಸು ಸುಸ್ಥಿರವಾಗಿ ನಿಲ್ಲದು."

ದೇವವ್ರತನು ತಂದೆಯ ಮಾತನ್ನು ಕೇಳಿ ಕೊಂಚ ಹೊತ್ತು ತಲೆ ಬಾಗಿ ಚಿಂತಿಸಿದನು. ತರುವಾಯ, ಯಮುನಾ ತೀರಕ್ಕೆ ತಂದೆಯೊಡನೆ ಹೋಗಿದ್ದ ಸಾರಥಿಯನ್ನು ಕರೆದು ತಂದೆ ಬೇಟೆಗೆ ಹೋಗಿದ್ದ ಸಮಯ ದಲ್ಲಿ ನಡೆದುದೆಲ್ಲವನ್ನೂ ಹೇಳೆಂದನು. ಸಾರಥಿಯು, ಶಂತನುವು ದಾಶ ರಾಜನ ಮಗಳನ್ನು ಕೇಳಿದುದು, ಶಂತನುವಿನ ತರುವಾಯ ತನ್ನ ಮಗಳ ಮಗನು ರಾಜನಾಗಬಹುದೆಂದರೆ ಅವಳನ್ನು ದಾಶರಾಜನು ಕೊಡ ಲೊಪ್ಪಿದುದು, ಸತ್ಯವ್ರತನ ಮೇಲಣ ಪ್ರೀತಿಯಿಂದ ಶಂತನುವು

ಅದಕ್ಕೊಡಂಬಡದೆ ಹಿಂದಿರುಗಿದುದು, ಇತ್ಯಾದಿ ಸಂಗತಿಗಳೆಲ್ಲವನ್ನೂ ಆನುಪೂರ್ವಿಯಾಗಿ ಸತ್ಯವ್ರತನಿಗೆ ತಿಳಿಸಿದನು. ದೇವವ್ರತನು ಸಾರಥಿಯ ಮಾತನ್ನು ಕೇಳಿ ತಂದೆಯ ಅಭೀಷ್ಟವನ್ನು ಸಲ್ಲಿಸಲು ಯತ್ನಶೀಲನಾದನು. ತಂದೆಯ ಇಷ್ಟಸಾಧನೆಯೂ ಶುಶ್ರೂಷೆಯೂ ತನ್ನ ಕರ್ತವ್ಯಗಳೆಂದೆಣಿಸಿ ದೇವವ್ರತನು ಕಾಲವಿಳಂಬವನ್ನು ಮಾಡದೆ ವಯೋವೃದ್ಧರಾದ ಕ್ಷತ್ರಿಯರನ್ನೊಡಗೊಂಡು ದಾಶರಾಜನ ಬಳಿಗೆ ಹೋಗಿ ಸತ್ಯವತಿಯೆಂಬ ಅವನ ಮಗಳನ್ನು ತನ್ನ ತಂದೆಗೆ ಮದುವೆ ಮಾಡಿಕೊಡೆಂದು ಕೇಳಿದನು.

ದಾಶರಾಜನು ಕೌರವಶ್ರೇಷ್ಠನನ್ನು ಗೌರವದಿಂದ ಆದರಿಸಿ ಉಚಿತಾಸನವನ್ನು ಕೊಟ್ಟು ಕುಳ್ಳಿರಿಸಿದನು. ದೇವವ್ರತನೂ ಅವನೊಡನೆ ಹೋಗಿದ್ದ ವೃದ್ಧಕ್ಷತ್ರಿಯರೂ ಕುಳಿತ ತರುವಾಯ ದಾಶರಾಜನು ದೇವವ್ರತನಿಗೆ ಇಂತೆಂದನು:—"ಯುವರಾಜನೇ! ನೀನು ಶಂತನುವಿನ ವಂಶವರ್ಧನನು; ಸರ್ವಾಂಶದಲ್ಲಿಯೂ ಯೋಗ್ಯನಾದ ನಿನ್ನಂತಹ ಪುತ್ರನನ್ನು ನಾನೆಲ್ಲಿಯೂ ಕಾಣೆನು. ನಿನ್ನ ತಂದೆಗೆ ನಿನ್ನಂತಹ ಮಗನಿರುವಲ್ಲಿ ಅವನಿಗೆ ನನ್ನ ಮಗಳನ್ನು ಕೊಡುವುದು ಹೇಗೆ? ಇಂತಹ ಶ್ಲಾಘ್ಯವಾದ ಸಂಬಂಧವು ಅಪೇಕ್ಷಿಸತಕ್ಕುದೇ ಸರಿ; ಸಾಕ್ಷಾತ್ ಇಂದ್ರನಾದರೂ ಇಂತಹ ಸಂಬಂಧವನ್ನು ಬಿಡನು. ಆದರೆ ನಾನು ಕನ್ಯಾಪಿತೃವು; ನಿನಗೊಂದು ಮಾತನ್ನು ಹೇಳದೆ ತೀರದು; ಮಲಮಗನಿರುವಲ್ಲಿ ನನ್ನ ಮಗಳನ್ನು ಹೇಗೆ ಕೊಡಲಿ? ನಿಮಗೆ ಪರಸ್ಪರ ಶತ್ರುತ್ವವು ಪ್ರಾಪ್ತವಾಗದೆ ತಪ್ಪದು. ನೀನು ಪರಾಕ್ರಮಶಾಲಿ; ನಿನ್ನ ವೈರಕ್ಕೆ ಗುರಿಯಾಗುವರು ಎಂತಹವರೇ ಆಗಲಿ ಬಹುದಿವಸ ಬಾಳಲಾರರು; ನೀನು ಕೋಪಗೊಂಡರೆ ಯಾರು ತಾನೆ ಉಳಿಯಬಲ್ಲರು? ಪ್ರಸಕ್ತವಿಷಯದಲ್ಲಿ ಇದೊಂದು ದೋಷವು ಕಾಣಬರುವುದು, ಬೇರೊಂದೂ ಇಲ್ಲ."

ಪಿತೃಭಕ್ತನಾದ ದೇವವ್ರತನು ದಾಶರಾಜನ ಅಭಿಪ್ರಾಯವನ್ನು ಅರಿತನು. ಆದರೆ ಅವನು ಅಣುಮಾತ್ರವೂ ಚಿಂತಿಸಲಿಲ್ಲ. ದಾಶರಾಜನ ಮಾತಿನಿಂದ ಅವನ ಎದೆ ಕುಂದಲಿಲ್ಲ, ಮುಖವು ಕೆಡಲಿಲ್ಲ, ಪಿತೃಭಕ್ತಿ

ಉಡುಗಲಿಲ್ಲ. ಅವನು ಪ್ರಾಣಪರ್ಯಂತ ಸರ್ವಸ್ವವನ್ನೂ ತೆತ್ತು ತಂದೆಯ ಇಷ್ಟಾರ್ಥವನ್ನು ಸಲಿಸುವೆನೆಂದು ನಿಶ್ಚೈಸಿದನು. ಅವನ ಪಿತೃಭಕ್ತಿಯಿಂದ ಸ್ವಾರ್ಥಚಿಂತೆಯೂ ಭೋಗಾಭಿಲಾಷೆಯೂ ದೂರವಾದುವು. ಅವನು ಜಗತ್ತಿಗೆ ದೃಷ್ಟಾಂತಯೋಗ್ಯವಾದ ಸ್ವಾರ್ಥ ತ್ಯಾಗವನ್ನೂ ವಿಷಯನಿಸ್ಪೃಹತೆಯನ್ನೂ ತೋರಿದನು. ಸತ್ಯವ್ರತನು ಅಲ್ಲಿ ನೆರೆದಿದ್ದ ಕ್ಷತ್ರಿಯರ ಸಮಕ್ಷದಲ್ಲಿ ಶಾಂತಚಿತ್ತತೆಯಿಂದ ಪ್ರಸನ್ನ ವದನನಾಗಿ ನಿಂತು—"ಸೌಮ್ಯನೆ, ನನ್ನ ಸತ್ಯ ಪ್ರತಿಜ್ಞೆಯನ್ನು ಆಲಿಸು; ನಿಶ್ಚಯವನ್ನು ಹೇಳುವೆನು ಕೇಳು; ಯಾವನು ಈ ಕನ್ಯೆಯ ಹೊಟ್ಟೆ ಯಲ್ಲಿ ಹುಟ್ಟುವನೋ ಅವನೇ ನಮ್ಮ ತಂದೆಯ ತರುವಾಯ ರಾಜ ನಾಗಲಿ; ಅವನನ್ನೇ ಕುರುರಾಜ್ಯಾಧಿಪತಿಯೆಂದು ನಾನು ಅಂಗೀ ಕರಿಸುವೆನು" ಎಂದನು.

ಆ ಮಾತನ್ನು ಕೇಳಿ ದಾಶರಾಜನು—"ಸತ್ಯವ್ರತನೆ! ನಾನು ಹೇಳ ತಕ್ಕುದು ಇನ್ನೊಂದು ಮಾತಿದೆ; ಅದನ್ನೂ ನೀನು ಆಲೋಚಿಸು. ನಾನು ಮಗಳ ಮೇಲಣ ಪ್ರೀತಿಯಿಂದ ಒಂದು ಮಾತನ್ನು ಆಡಿಯೇ ತೀರುವೆನು. ಹೆಣ್ಣುಮಕ್ಕಳಲ್ಲಿ ಮಮತೆಯುಳ್ಳವರಾರೂ ಈ ಮಾತನ್ನಾಡದಿರುವುದ ಕ್ಕಾಗದು. ಕೇಳು, ಸತ್ಯವಾದಿಯೆ! ಸತ್ಯವತಿಯ ಸಂತಾನದ ವಿಷಯದಲ್ಲಿ ನೀನು ಮಾಡಿದ ಪ್ರತಿಜ್ಞೆಯು ನಿನ್ನ ಸಚ್ಚರಿತೆಗೆ ಅನುಗುಣವಾದುದೇ ಸರಿ. ನೀನು ಮಹಾನುಭಾವನು; ಆಡಿದ ಮಾತಿಗೆ ಎಂದೂ ತಪ್ಪುವವನಲ್ಲ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ. ಆದರೆ ಮುಂದೆ ನಿನಗಾಗುವ ಮಕ್ಕಳ ವಿಷಯದಲ್ಲಿ ನನಗೆ ಸಂಶಯವು ತೋರುವುದು" ಎಂದನು.

ದೇವವ್ರತನು ದಾಶರಾಜನ ಮಾತನ್ನು ಕೇಳಿ ಚಿತ್ತವೈಕಲ್ಯವನ್ನು ಹೊಂದಲಿಲ್ಲ; ಎಂದಿನಂತೆ ಸ್ಥಿರಮನಸ್ಕನಾಗಿ ಇಂತೆಂದು ಪ್ರತಿಜ್ಞೆ ಮಾಡಿದನು:—"ನಾನು ರಾಜ್ಯವನ್ನು ತ್ಯಜಿಸಿದೆನು; ನನ್ನ ಮಕ್ಕಳ ದೆಸೆ ಯಿಂದ ನಿನಗೆ ಭಯವು ತೋರುವುದಷ್ಟೆ? ಈ ವಿಷಯದಲ್ಲಿ ಇಲ್ಲಿ ನೆರೆದಿರುವ ಶಾಸ್ತ್ರಜ್ಞರಾದ ಕ್ಷತ್ರಿಯರ ಸಾಕ್ಷಿಯಾಗಿ ಇನ್ನೊಂದು ಪ್ರತಿಜ್ಞೆಯನ್ನು ಮಾಡುವೆನು ಕೇಳು:—"ನಾನೆಂದಿಗೂ ಮದುವೆ

ಯಾಗೆನು; ನಾನು ಇಂದು ಮೊದಲ್ಗೊಂಡು ಯಾವಜ್ಜೀವವೂ ಬ್ರಹ್ಮ
ಚಾರಿಯಾಗಿಯೇ ಇರುವೆನು. ತಂದೆಯೇ ಪರಮ ಗುರು; ತಂದೆಯೇ
ಪರಮ ಧರ್ಮವು; ತಂದೆಯೇ ಪರಮ ತಪಸ್ಸು; ತಂದೆ ಪ್ರೀತನಾದರೆ
ಸಮಸ್ತ ದೇವತೆಗಳೂ ಪ್ರೀತರಾಗುವರು; ಪರಮ ಗುರುವಾದ
ತಂದೆಯ ಪ್ರೀತ್ಯರ್ಥವಾಗಿ ಈ ಪ್ರತಿಜ್ಞೆಯನ್ನು ಮಾಡಿರುವೆನು. ಅಪುತ್ರ
ನಾದರೂ ನನಗೆ ಗತಿಯುಂಟು. ಪ್ರಳಯವೇ ಆಗಲಿ, ಈ ಜಗತ್ತು
ಮುಳುಗಿಹೋಗಲಿ, ಸೂರ್ಯ ಗ್ರಹ ನಕ್ಷತ್ರಾದಿಗಳು ಮುರಿದು
ಬೀಳಲಿ, ನಾನಂತೂ ಮಾಡಿದ ಪ್ರತಿಜ್ಞೆಯನ್ನು ಬಿಡೆನು.''

ದಾಶರಾಜನು ಈ ಭೀಷಣ ಪ್ರತಿಜ್ಞೆಯನ್ನು ಕೇಳಿ ಬೆರಗಾಗಿ,
''ನನ್ನ ಮಗಳನ್ನು ಕೊಟ್ಟೆನು '' ಎಂದನು.

ಅಲ್ಲಿ ನೆರೆದಿದ್ದವರೆಲ್ಲರೂ ದೇವವ್ರತನ ಲೋಕೋತ್ತರವಾದ ಪಿತೃ
ಭಕ್ತಿಯನ್ನೂ ಸ್ವಾರ್ಥ ತ್ಯಾಗವನ್ನೂ ನೋಡಿ ವಿಸ್ಮಿತರಾಗಿ ಅವನನ್ನು
ಕೊಂಡಾಡಿದರು. ಈ ಭೀಷಣ ಪ್ರತಿಜ್ಞೆಯ ದೆಸೆಯಿಂದ ದೇವವ್ರತನು
ಭೀಷ್ಮನೆಂದು ಖ್ಯಾತನಾದನು.

ದಾಶರಾಜನು ಕನ್ಯಾಪ್ರದಾನಕ್ಕೆ ಸಮ್ಮತಿಸುತ್ತಲೇ ಭೀಷ್ಮನು
ಸತ್ಯವತಿಯನ್ನು ಕುರಿತು, ''ತಾಯೇ! ರಥವು ಸಿದ್ಧವಾಗಿರುವುದು;
ನಮ್ಮ ಮನೆಗೆ ಹೋಗೋಣ, ರಥವನ್ನೇರು'' ಎಂದನು.

ಸತ್ಯವತಿಯು ರಥದಲ್ಲಿ ಕುಳಿತಳು. ಭೀಷ್ಮನು ಸತ್ಯವತಿಯೊಡನೆ
ತಂದೆಯ ಬಳಿಗೆ ಹೋಗಿ ನಡೆದ ಸಂಗತಿಗಳೆಲ್ಲವನ್ನೂ ವಿನಯ ಪೂರ್ವಕ
ವಾಗಿ ನಿವೇದನಮಾಡಿದನು. ಇತ್ತ, ಅವನೊಡನೆ ಹೋಗಿದ್ದವರೆಲ್ಲರೂ
ಹಸ್ತಿನಾಪುರವನ್ನು ಸೇರಿ ದೇವವ್ರತನ ದುಷ್ಕರ ಪ್ರತಿಜ್ಞೆಯನ್ನು
ಹೊಗಳುತ್ತ ಅವನು ಮಾಡಿದ ದುಷ್ಕರ ಕಾರ್ಯದಿಂದ ಅವನು ಭೀಷ್ಮ
ನೆನಿಸಿಕೊಂಡನೆಂದು ಕಂಡಕಂಡವರಿಗೆಲ್ಲ ಹೇಳತೊಡಗಲು, ಎಲ್ಲರೂ
ಅವನನ್ನು ಭೀಷ್ಮನೆಂದು ಕರೆಯಲಾರಂಭಿಸಿದರು. ಮಹಾರಾಜ
ಶಂತನುವು ಮಗನ ಅಸಾಧಾರಣ ಸಾಮರ್ಥ್ಯವನ್ನೂ ಧೈರ್ಯ
ಸ್ಥೈರ್ಯಗಳನ್ನೂ ದುಷ್ಕರ ಕಾರ್ಯಗಳನ್ನು ಸಾಧಿಸುವುದರಲ್ಲಿ

ಅವನಿಗಿದ್ದ ಅಧ್ಯವಸಾಯವನ್ನೂ ಮೆಚ್ಚಿ ಅವನ ದೆಸೆಯಿಂದ ತನ್ನ ಅಭೀಷ್ಟವು ಪೂರ್ತಿಯಾಯಿತೆಂದು ಸುಪ್ರೀತನಾಗಿ—"ಮಗನೇ! ನಿನಗೆ ಸ್ವೇಚ್ಛಾಮರಣವಾಗಲಿ; ನಿನ್ನಾಜ್ಞೆಯಾದಾಗ ನಿನಗೆ ಮೃತ್ಯುವು ಬರಲಿ; ನೀನು ಕೋರದಿದ್ದರೆ ಮರಣವು ಬಾರದಿರಲಿ" ಎಂದು ವರವನ್ನು ಕೊಟ್ಟನು.

---

## ಎರಡನೆಯ ಅಧ್ಯಾಯ

---

### ಚಿತ್ರಾಂಗದ ವಿಚಿತ್ರವೀರ್ಯರು.

ಶಂತನು ಮಹಾರಾಜನು ಚೆಲುವೆಯಾದ ಸತ್ಯವತಿಯನ್ನು ಶಾಸ್ತ್ರೋಕ್ತವಾಗಿ ಪತ್ನಿಯನ್ನಾಗಿ ಕೈಹಿಡಿದು ಸುಖದಿಂದಿರುತ್ತಿದ್ದನು. ಮಹಾಮತಿಯಾದ ಭೀಷ್ಮನು ಅನನ್ಯಮನಸ್ಕನಾಗಿ ಅನುದಿನವೂ ಅವರ ಶುಶ್ರೂಷೆಯನ್ನು ಮಾಡುತ್ತಿದ್ದನು. ಅವನು ತಂದೆಯ ಇಷ್ಟವನ್ನು ನೆರವೇರಿಸುವುದರಲ್ಲಿ ಯತ್ನಶೀಲನೂ ಶ್ರದ್ಧಾಳುವೂ ಆಗಿದ್ದಂತೆಯೇ ತಾಯಿಯ ಇಷ್ಟವನ್ನು ಸಲಿಸುವುದರಲ್ಲಿಯೂ ಏಕಮಾನಸನಾಗಿದ್ದನು. ಸತ್ಯವತಿಯು ಭೀಷ್ಮನ ಪರಿಚರ್ಯೆಯಿಂದಲೂ ಸದಾಚರಣೆಯಿಂದಲೂ ಪರಿತುಷ್ಟೆಯಾಗಿ ಸುಖವಾಗಿರುತ್ತಿದ್ದಳು.

ದಿನಕ್ರಮದಲ್ಲಿ ಸತ್ಯವತಿ ಸುಂದರನಾದ ಒಬ್ಬ ಕುಮಾರನನ್ನು ಪಡೆದಳು. ಪುತ್ರನ ಮುಖದರ್ಶನದಿಂದ ಶಂತನುವಿನ ಆನಂದಕ್ಕೆ ಪಾರವಿಲ್ಲದಂತಾಯಿತು. ರಾಜ್ಯದಲ್ಲಿ ವಿವಿಧವಾದ ಉತ್ಸವಗಳು ನಡೆದುವು. ಶಂತನುವು ಕೂಸಿಗೆ ಚಿತ್ರಾಂಗದನೆಂದು ನಾಮಕರಣ ಮಾಡಿದನು. ತಕ್ಕ ವಯಸ್ಸಾಗುತ್ತಲೆ ಚಿತ್ರಾಂಗದನು ಪ್ರಾಜ್ಞನಾದ ಭೀಷ್ಮನ ಇಷ್ಟಾನುವರ್ತಿಯಾಗಿ ನಡೆಯುತ್ತ ಸಕಲ ಶಾಸ್ತ್ರಗಳಲ್ಲಿಯೂ ಕೋವಿದನಾದನು ; ಮುಖ್ಯವಾಗಿ, ಅಸ್ತ್ರ ಶಸ್ತ್ರ ವಿದ್ಯೆಗಳನ್ನು ಚೆನ್ನಾಗಿ ಕಲಿತನು. ಈ ವಿದ್ಯೆಗಳಲ್ಲಿ ಮಗನ ಜಾಣ್ಮೆಯನ್ನು ನೋಡಿ ನೋಡಿ ಶಂತನುವು ಆಹ್ಲಾದಪಡುತ್ತಿದ್ದನು.

ಕೆಲವು ವರ್ಷಗಳ ತರುವಾಯ ಸತ್ಯವತಿಯ ಗರ್ಭದಲ್ಲಿ ಮತ್ತೊಬ್ಬ ಮಗನು ಹುಟ್ಟಿದನು. ಈ ಕಿರಿಯನಿಗೆ ವಿಚಿತ್ರವೀರ್ಯನೆಂದು ಹೆಸರಾಯಿತು. ವಿಚಿತ್ರವೀರ್ಯನು ವಯಃಪ್ರಾಪ್ತನಾಗುವುದರೊಳಗಾಗಿಯೇ ಶಂತನು ಮಹಾರಾಜನು ಪರಲೋಕ ಯಾತ್ರೆಯನ್ನು ಮಾಡಿದನು. ಭೀಷ್ಮನು ಪಿತೃವಿಯೋಗದಿಂದ ಶೋಕಾಕುಲನಾದನು. ಅವನು

ತಂದೆಯಲ್ಲಿ ಪರಿಪೂರ್ಣ ಭಕ್ತಿಯನ್ನಿಟ್ಟು ಪಿತೃಸೇವೆ ಮಾಡುವುದರಲ್ಲಿ ಸುಖಪಡುತ್ತಿದ್ದನು; ತಂದೆಗೆ ಪ್ರಿಯವಾದ ಕಾರ್ಯವನ್ನು ಮಾಡಿ ತಾನು ಕೃತಾರ್ಥನಾದೆನೆಂದು ಎಣಿಸುತ್ತಿದ್ದನು; ತಂದೆಯು ಹರ್ಷ ಚಿತ್ತನಾಗಿರುವುದನ್ನು ಕಂಡು ತಾನು ನರಲೋಕವಾಸಿಯಾದರೂ ಸುರಲೋಕವಾಸಿಯೆಂದು ಭಾವಿಸುತ್ತಿದ್ದನು. ಹೀಗೆ ತನ್ನ ಭಕ್ತಿ ವಿಶ್ವಾಸಕ್ಕೆ ಪಾತ್ರನಾದ ತಂದೆಯು ಕಾಲಧರ್ಮವನ್ನೈದಲು, ಅವನೆದೆ ಯಲ್ಲಿ ಶೋಕ ಶಲ್ಯವು ನಾಟಿತು. ಅವನು ಮಹಾ ತೇಜಸ್ವಿ, ಅಸಾಧಾರಣ ಕ್ಷಮಾಶಾಲಿ; ಆದರೂ ತರಂಗಮಾಲಾ ಪರಿವೃತ ಜಲಧಿ ಯಲ್ಲಿ ತರಣಿಯಿಲ್ಲದವನಂತೆ ಪಿತೃವಿಯೋಗದ ದೆಸೆಯಿಂದ ಈ ಸಂಸಾರ ಸಾಗರದಲ್ಲಿ ತಾನು ಸಹಾಯ ಹೀನನೂ ಅವಲಂಬನ ಹೀನನೂ ಆದೆ ನೆಂದು ಭಾವಿಸುತ್ತ ದಿಙ್ಮೂಢನಾದನು. ಶೋಕದಿಂದ ಮನಸ್ಸು ತಾರಿದರೂ ಅವನು ಕರ್ತವ್ಯವನ್ನು ಬಿಟ್ಟು ಕದಲಲಿಲ್ಲ. ತನ್ನ ದುಸ್ಸಹ ವಾದ ಶೋಕವನ್ನು ತಾಳಿಕೊಂಡು ಭೀಷ್ಮನು ತಂದೆಯ ಉತ್ತರ ಕ್ರಿಯೆಗಳನ್ನು ಸಾಂಗವಾಗಿ ನೆರವೇರಿಸಿದನು.

ತರುವಾಯ, ಕಾಲವಿಳಂಬ ಮಾಡದೆ ಭೀಷ್ಮನು ಸತ್ಯವತಿಯ ಬಳಿಗೆ ಹೋಗಿ—"ತಾಯೇ! ಚಿತ್ರಾಂಗದನು ಸರ್ವಾಂಶದಲ್ಲಿಯೂ ರಾಜಪದವಿಗೆ ತಕ್ಕವನಾಗಿರುವನು. ಅವನು ಬುದ್ಧಿವಂತನು, ಪರಾಕ್ರಮಶಾಲಿ; ಈ ವಿಶಾಲ ರಾಜ್ಯವನ್ನಾಳುವುದಕ್ಕೆ, ಮುಖ್ಯ ವಾಗಿ ಪ್ರಜೆಗಳನ್ನು ಪಾಲಿಸುವುದಕ್ಕೆ, ಸಮರ್ಥನಾಗಿರುವನು. ನಿನ್ನ ಅನುಮತಿಯಾದರೆ ಪುರಜನವನ್ನೂ ರಾಷ್ಟ್ರಜನವನ್ನೂ ಕರೆಯಿಸಿ ಅವರ ಸಮ್ಮುಖದಲ್ಲಿ ಚಿತ್ರಾಂಗದನಿಗೆ ಪಟ್ಟಾಭಿಷೇಕವನ್ನು ಮಾಡ ಲಾಗುವುದು" ಎಂದನು.

ಸತ್ಯವತಿಯು ಭೀಷ್ಮನ ಅಭೀಷ್ಟವನ್ನು ಅನುಮೋದಿಸಿದಳು. ಆಕೆಯ ಅನುಮತಿಯನ್ನು ಹೊಂದಿ ಭೀಷ್ಮನು ಚಿತ್ರಾಂಗದನನ್ನು ಕುರಿತು—"ವತ್ಸನೇ! ಪಿತೃದೇವನು ಸ್ವರ್ಗವನ್ನೈದಿದನು. ಈಗ ಈ ಅಖಂಡ ರಾಜ್ಯಕ್ಕೆ ನೀನೇ ಅಧಿಕಾರಿ. ಶಾಸ್ತ್ರಾನುಶೀಲನದಿಂದ

ಸಂಯುತ ಚಿತ್ತನಾಗಿಯೂ, ಶಸ್ತ್ರ ವಿದ್ಯಾಭ್ಯಾಸದಿಂದ ಶೂರನಾಗಿಯೂ
ರಣನಿಪುಣನಾಗಿಯೂ ಇದ್ದೀಯೆ. ಅಲ್ಲದೆ, ರಾಜನೀತಿಯಲ್ಲಿ ನೀನು
ಪಾರಂಗತನು. ಆದುದರಿಂದ, ಈಗ ನೀನು ರಾಜ್ಯಭಾರವನ್ನು ವಹಿಸಿ
ವಿವೇಕದಿಂದ ರಾಜ್ಯವನ್ನಾಳುತ್ತ ಮಕ್ಕಳಂತೆ ಪ್ರಜೆಗಳನ್ನು
ಪಾಲಿಸು. ನಾನು ಸಿಂಹಾಸನದ ಮೇಲೆ ಎಂದಿಗೂ ಕುಳಿತುಕೊಳ್ಳೆನು,
ರಾಜದಂಡವನ್ನೆಂದಿಗೂ ಹಿಡಿಯೆನು ಎಂದು ಪ್ರತಿಜ್ಞೆ ಮಾಡಿರುವೆನು.
ಆದುದರಿಂದ, ನೀನು ಸಿಂಹಾಸನದಲ್ಲಿ ಕುಳಿತು ರಾಜಕಾರ್ಯ ತತ್ಪರ
ನಾಗು. ರಣದಲ್ಲಿ ಪರಾಕ್ರಮವೂ, ರಾಜ್ಯ ಶಾಸನದಲ್ಲಿ ಪ್ರಜಾರಂಜ
ನವೂ ನಮ್ಮ ಕುಲಕ್ಕೆ ಬಂದ ಧರ್ಮವಾಗಿರುವುವು; ಈ ಧರ್ಮ
ವನ್ನು ನೀನು ಬಿಡದೆ ಸಲಹು. ಅನ್ನವಿಲ್ಲದವರಿಗೆ ಅನ್ನವನ್ನೂ, ಆಶ್ರಯ
ವಿಲ್ಲದವರಿಗೆ ಆಶ್ರಯವನ್ನೂ, ಅರ್ಥಹೀನರಿಗೆ ಅರ್ಥವನ್ನೂ ಕೊಡು;
ದೇವ ಬ್ರಾಹ್ಮಣರಲ್ಲಿ ಶ್ರದ್ಧಾಭಕ್ತಿಯನ್ನಿಡು; ವೃದ್ಧರಿಗೆ ಯಥೋಚಿತ
ಸನ್ಮಾನವನ್ನು ಮಾಡು; ಪ್ರಜೆಗಳನ್ನು ಮಕ್ಕಳೆಂದೆಣಿಸಿ ಅವರ
ಹಿತವನ್ನಾಚರಿಸು. ನೀನು ಶೂರನೂ ಅಹುದು; ಕೋಮಲ ಹೃದ
ಯನೂ ಅಹುದು; ಶೌರ್ಯವನ್ನೂ ಕೋಮಲತೆಯನ್ನೂ ಸಮಯ
ವರಿತು ಆಯಾ ಸಮಯದಲ್ಲಿ ತೋರಿಸು. ಶತ್ರುಗಳು ರಣರಂಗದಲ್ಲಿ
ನಿನ್ನ ಪ್ರತಾಪವನ್ನು ಕಂಡು ಅಂಜುವಂತೆಯೇ ಪ್ರಜೆಗಳು ನಿನ್ನ
ಉದಾರ ಭಾವವನ್ನೂ ಶಾಂತ ಪ್ರಕೃತಿಯನ್ನೂ ಸದಯ ವ್ಯವಹಾರವನ್ನೂ
ನೋಡಿ ಪ್ರೀತರಾಗಲಿ. ಜಿಗೀಷುಗಳಾದ ವೈರಿಗಳ ಮುಂದೆ ನಿನ್ನ
ಪ್ರತಾಪವನ್ನು ತೋರಿಸು; ಆಶ್ರಿತರ ಮುಂದೆಯೂ ಅನುಗತರ
ಮುಂದೆಯೂ ನಿನ್ನ ಸೌಮ್ಯತೆಯನ್ನು ತೋರಿಸು" ಎಂದು ಹಿತೋಪ
ದೇಶವನ್ನು ಮಾಡಿದನು.

ಭೀಷ್ಮನು ಈ ತೆರದಲ್ಲಿ ಚಿತ್ರಾಂಗದನಿಗೆ ರಾಜನೀತಿಯನ್ನು
ಬೋಧಿಸಿ ಯಥಾವಿಧಾನದಿಂದ ಪಟ್ಟಾಭಿಷೇಕವನ್ನು ಮಾಡಿದನು.
ಚಿತ್ರಾಂಗದನು ಶೌರ್ಯದಲ್ಲಿ ತನ್ನ ಸಮಾನರಾರೂ ಇಲ್ಲವೆಂದು
ಯಾರನ್ನೂ ಲಕ್ಷ್ಯಮಾಡದಿದ್ದನು. ಅವನು ರಾಜಪದವಿಯಲ್ಲಿ ಪ್ರತಿಷ್ಠಿತ
ನಾಗುತ್ತಲೆ ಪರಾಕ್ರಮ ಪ್ರದರ್ಶನವೂ ಶತ್ರು ಸಂಹಾರವೂ ತನ್ನ

ಮುಖ್ಯ ಕರ್ತವ್ಯಗಳೆಂದೆಣಿಸಿದನು. ಅನೇಕ ರಾಜರು ಅವನಿಂದ ಪರಾಜಿತರಾದರು. ಆದರೆ ಚಿತ್ರಾಂಗದನೆಂಬೊಬ್ಬ ಗಂಧರ್ವರಾಜನ ಮೇಲೆ ಅವನ ಕೈ ನಡೆಯುಲಿಲ್ಲ. ಕುರುಕ್ಷೇತ್ರದಲ್ಲಿ, ಸರಸ್ವತೀ ತೀರದಲ್ಲಿ, ಅವರಿಬ್ಬರಿಗೂ ಆದ ಯುದ್ಧದಲ್ಲಿ ಕುರುರಾಜ ಚಿತ್ರಾಂಗದನು ಹತನಾದನು.

ಚಿತ್ರಾಂಗದನು ಸತ್ತ ವೃತ್ತಾಂತವನ್ನು ಕೇಳಿ ಭೀಷ್ಮನು ಬಹಳವಾಗಿ ದುಃಖಿಸಿದನು. ಆದರೆ ತಡಮಾಡದೆ ಅವನು ಸತ್ಯವತಿಯ ಇಷ್ಟಾನುಸಾರವಾಗಿ ವಿಚಿತ್ರವೀರ್ಯನಿಗೆ ಪಟ್ಟವನ್ನು ಕಟ್ಟಿದನು. ಆಗ ವಿಚಿತ್ರವೀರ್ಯನಿಗೆ ಬಾಲ್ಯದಶೆಯಾಗಿದ್ದಿತು. ಭೀಷ್ಮನು ಅನನ್ಯಮನಸ್ಕನಾಗಿ ಅವನನ್ನು ಪಾಲಿಸುತ್ತಿದ್ದನು. ಅಪ್ರಾಪ್ತ ವಯಸ್ಕನೂ ಅಪರಿಣತ ಬುದ್ಧಿಯೂ ಆದ ಆ ರಾಜಕುಮಾರನು ಭೀಷ್ಮನಲ್ಲಿ ರಾಜನೀತಿಯನ್ನು ಕಲಿಯುತ್ತ ಅವನಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟು ಅವನಿಗೆ ತಕ್ಕ ಸನ್ಮಾನವನ್ನು ತೋರಿಸುತ್ತಿದ್ದನು. ಅವನು ಅಪ್ರಾಪ್ತ ವಯಸ್ಕನಾಗಿಯೂ ರಾಜಕಾರ್ಯಗಳನ್ನರಿಯದವನಾಗಿಯೂ ಇದ್ದಷ್ಟು ಕಾಲವೂ ಭೀಷ್ಮನ ಬುದ್ಧಿವಾದಕ್ಕನುಸಾರವಾಗಿ ನಡೆಯುತ್ತಿದ್ದನು. ಭೀಷ್ಮನೂ ರಾಜಕುಮಾರನ ಅಭ್ಯುದಯಕ್ಕನುಗುಣವಾದ ವಿದ್ಯಾಬುದ್ಧಿಯನ್ನು ಕಲಿಸುವುದರಲ್ಲಿ ಯತ್ನಶೀಲನಾಗಿದ್ದನು. ಮಹಾಮತಿ ಭೀಷ್ಮನ ಉಪದೇಶ ಪ್ರಭಾವದಿಂದ ವಿಚಿತ್ರವೀರ್ಯನು ನಾನಾ ವಿಷಯಗಳಲ್ಲಿ ಸುಶಿಕ್ಷಿತನಾದನು.

ಕಾಲಕ್ರಮದಲ್ಲಿ ವಿಚಿತ್ರವೀರ್ಯನು-ಬಾಲ್ಯಾವಸ್ಥೆಯನ್ನು ಕಳೆದು ಯೌವನ ದಶೆಗೆ ಬಂದನು. ಅವನು ತರುಣ ವಯಸ್ಕನಾಗುತ್ತಲೆ ಭೀಷ್ಮನು ಅವನಿಗೆ ಮದುವೆ ಮಾಡುವ ಆಲೋಚನೆಯನ್ನು ಮಾಡತೊಡಗಿದನು. ಆ ಸಮಯಕ್ಕೆ ಸರಿಯಾಗಿ ಕಾಶೀರಾಜನ ಮೂವರು ಕನ್ಯೆಯರಿಗೆ ಸ್ವಯಂವರವೆಂದು ಭೀಷ್ಮನಿಗೆ ಶ್ರುತಿಗೋಚರವಾಯಿತು. ಕನ್ಯೆಯರು ರೂಪವತಿಯರಾಗಿದ್ದಂತೆಯೇ ಕುಲವತಿಯರಾಗಿಯೂ ಇದ್ದರು. ಆದುದರಿಂದ ಭೀಷ್ಮನು ಆ ಕನ್ಯೆಯರನ್ನು ತಂದುಕೊಂಡು ವಿಚಿತ್ರವೀರ್ಯನಿಗೆ ವಿವಾಹಮಾಡಲಿಚ್ಛಿಸಿ ಸತ್ಯವತಿಯ ಅನುಜ್ಞೆಯನ್ನು

ಪಡೆದು ಸೇನೆಯನ್ನೂ ಸಾಮಂತರನ್ನೂ ಕೂಡಿ ರಥವನ್ನೇರಿ ಕಾಶಿಗೆ ಪಯಣಮಾಡಿದನು. ಕಟ್ಟಿದ್ದ ಮುಹೂರ್ತದಲ್ಲಿ ಸ್ವಯಂವರೋತ್ಸವವು ನಡೆಯಲು ಎಲ್ಲವೂ ಅಣಿಯಾಗಿದ್ದಿತು. ಭೀಷ್ಮನು ಕಾಶಿಯನ್ನು ಸೇರಿ ಸಕಾಲಕ್ಕೆ ಸಭಾಮಂಟಪವನ್ನು ಹೊಕ್ಕನು. ಮಂಟಪದ ನಾಲ್ಕು ಕಡೆಯಲ್ಲಿಯೂ ರತ್ನ ಸಿಂಹಾಸನಗಳು ಕಣ್ಗೊಳಿಸುತ್ತಿದ್ದುವು. ಆ ಸಿಂಹಾಸನಗಳನ್ನು ದೇಶದೇಶಗಳಿಂದ ಬಂದ ಸರ್ವಾಲಂಕಾರ ಭೂಷಿತರಾದ ರಾಜರು ಅಲಂಕರಿಸಿದ್ದರು. ಅಗರು ಧೂಪದಿಂದ ನಾಲ್ಕು ದಿಕ್ಕುಗಳೂ ಪರಿಮಳವಾಗಿದ್ದುವು. ನಡುವೆ ನಡುವೆ ಮಂಗಳವಾದ್ಯವಾಗುತ್ತಿದ್ದಿತು. ಹೀಗಿರುವಲ್ಲಿ, ಕನ್ಯೆಯರು ಸ್ವಯಂವರೋಚಿತವಾದ ವಸ್ತ್ರಭೂಷಣಗಳನ್ನು ಧರಿಸಿ ಸಭಾಮಂಟಪವನ್ನು ಪ್ರವೇಶಮಾಡಿ ನೆರೆದಿದ್ದ ರಾಜಮಂಡಲಿಯ ಮಧ್ಯದಲ್ಲಿ ಹಸೆಯ ಮೇಲೆ ಕುಳಿತರು.

ಅನಂತರ, ವಂದಿಗಳು, ನೆರೆದಿದ್ದ ರಾಜರ ಕುಲಗಳನ್ನು ವರ್ಣಿಸ ತೊಡಗಿದರು. ಆಗ ರಾಜಕುಮಾರಿಯರು ಭೀಷ್ಮನನ್ನು ನೋಡಿ ವೃದ್ಧನೆಂದು ಚಿಂತಿಸಿ ಹೊರಗೆ ಹೋಗಲು, ಅರಸರೆಲ್ಲರೂ ಭೀಷ್ಮನ ವಿಷಯವಾಗಿ—“ಇವನು ವೃದ್ಧನು, ಪರಮ ಧರ್ಮಾತ್ಮನು, ಇಲ್ಲೇಕೆ ಬಂದಿದ್ದಾನೆ? ನಾಚಿಕೆ ಇಲ್ಲವೆ? ಅಂತಹ ಪ್ರತಿಜ್ಞೆಯನ್ನೇಕೆ ಮಾಡಿದನು? ಬ್ರಹ್ಮಚಾರಿಯೆಂಬ ಖ್ಯಾತಿಯು ವ್ಯರ್ಥವಾಯಿತಲ್ಲವೆ?” ಎಂದು ಆಡಿಕೊಳ್ಳುತ್ತಿದ್ದರು.

ಭೀಷ್ಮನು ಎದ್ದುನಿಂತು ಗಂಭೀರಸ್ವರದಿಂದ—“ನಾನು ಸ್ತ್ರೀ ಪರಿಗ್ರಹಮಾಡೆನೆಂದು ಪ್ರತಿಜ್ಞೆ ಮಾಡಿರುವೆನು; ಯಾವಜ್ಜೀವವೂ ಬ್ರಹ್ಮಚಾರಿಯಾಗಿಯೇ ಇರುವೆನು; ಈ ಪ್ರತಿಜ್ಞೆಯನ್ನು ಎಂದಿಗೂ ಮೀರುವನಲ್ಲ; ನಾನು ಈ ಕನ್ಯೆಯರ ಪಾಣಿಗ್ರಹಣಕ್ಕಾಗಿ ಬಂದವನಲ್ಲ; ನನ್ನ ತಮ್ಮನಾದ ವಿಚಿತ್ರವೀರ್ಯನು ಅಖಂಡಿತ ಕುರುರಾಜ್ಯಕ್ಕೊಡೆಯನಾಗಿರುವನು; ಅವನಿಗೆ ಯೌವನದಶೆ ಪ್ರಾಪ್ತವಾಗಿರುವುದು; ಅವನ ರೂಪ ಗುಣಗಳು ವಿಕಾಸವಾಗಿರುವುವು; ಈ ಕನ್ಯಾತ್ರಯ

ವನ್ನು ಕರೆದುಕೊಂಡು ಹೋಗಿ ಆ ರೂಪ ಗುಣಸಂಪನ್ನನಾದ ಕುರು ರಾಜನಿಗೆ ಮದುವೆಮಾಡಲಿಚ್ಛಿಸಿ ಬಂದಿರುವೆನು '' ಎಂದನು.

ಒಡನೆಯೇ ಭೀಷ್ಮನು ಕನ್ಯೆಯರನ್ನು ಆದರ ಪೂರ್ವಕವಾಗಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ರಾಜರನ್ನು ಸಂಬೋಧಿಸಿ ಮತ್ತೆ ಇಂತೆಂದನು :—''ಕನ್ಯೆಯರ ಪಾಣಿಗ್ರಹಣಾರ್ಥಿಗಳಾಗಿ ಬಂದಿರುವ ತಾವುಗಳು ಇಷ್ಟವಿದ್ದರೆ ಯುದ್ಧಮಾಡಿ ನನ್ನನ್ನು ಗೆದ್ದು ಕನ್ಯೆಯ ರನ್ನು ವಶಮಾಡಿಕೊಳ್ಳಬಹುದು ; ಯುದ್ಧಕ್ಕೆ ಸಿದ್ಧವಾಗಿರುವೆನು.'' ಹೀಗೆಂದು ಹೇಳಿ ಭೀಷ್ಮನು ಆ ರಾಜಕುಮಾರಿಯರೊಂದಿಗೆ ರಥದಲ್ಲಿ ಕುಳಿತು ಪ್ರಯಾಣ ಸನ್ನದ್ಧನಾದನು.

ಭೀಷ್ಮನ ಈ ಅತರ್ಕಿತ ಕಾರ್ಯದಿಂದ, ಸೆರೆದಿದ್ದ ರಾಜರೊಳಗೆ ಗದ್ದಲವುಂಟಾಯಿತು. ಅವರು ರೋಷವೇರಿ ಸ್ವಯಂವರೋಚಿತ ವೇಷ ಭೂಷಣಗಳನ್ನು ಕಳೆದು ರಣದುಡಿಗೆ ತೊಡಿಗೆಗಳನ್ನು ಹಾಕಿಕೊಂಡರು. ಸಭಾಮಂಟಪದ ನಾಲ್ಕು ದೆಸೆಗಳೂ ಅಸ್ತ್ರಶಬ್ದದಿಂದ ಆಕುಲವಾಯಿತು. ಕ್ಷಣಕ್ಕೆ ಮುಂಚೆ ಎಲ್ಲಿ ವಿವಾಹ ಸಮಯೋಚಿತವಾದ ಶಾಂತಿಯು ಇದ್ದಿತೋ, ಎಲ್ಲಿ ಮಂಗಳ ಶಂಖಧ್ವನಿ ಪರಿಪೂರ್ಣವಾಗಿದ್ದಿತೋ, ಅಲ್ಲಿ ಈಗ ರಥಗಳ ಚೀತ್ಕಾರವೂ ಅಶ್ವಗಳ ಹೇಷಾ ರವವೂ ಯುದ್ಧ ಯಾತ್ರೆ ಹೊರಟ ರಾಜನ್ಯರ ಭೈರವ ರವವೂ ಭೀತಿಯನ್ನುಂಟುಮಾಡು ತ್ತಿದ್ದುವು. ಸ್ವಯಂವರಕ್ಕಾಗಿ ಬಂದಿದ್ದ ವೀರ ಪುರುಷರೆಲ್ಲರೂ ಅಸ್ತ್ರ ಧಾರಿಗಳಾಗಿ ಕೋಪದಿಂದ ತರ್ಜನೆ ಮಾಡುತ್ತ, ಕನ್ಯೆಯರನ್ನು ಕರೆದುಕೊಂಡು ಹೋಗುತ್ತಿದ್ದ ಭೀಷ್ಮನನ್ನು ಬೆನ್ನಹತ್ತಿದರು. ಪರಂತು, ಯುದ್ಧದಲ್ಲಿ ಅವರಿಗೆ ಜಯವಾಗಲಿಲ್ಲ. ಅವರೆಲ್ಲರೂ ಭೀಷ್ಮನಿಗೆ ಸೋತು ತಂತಮ್ಮ ರಾಜ್ಯಗಳಿಗೆ ತೆರಳಿದರು. ವಿಜಯಿಯಾದ ಭೀಷ್ಮನು ಕನ್ಯೆಯರೊಡನೆ ಹಸ್ತಿನಾಪುರಕ್ಕೆ ಹೋಗುತ್ತಿರಲು, ಸಾಲ್ವರಾಜನು ಭೀಷ್ಮನನ್ನು ಅಟ್ಟಿಸಿಕೊಂಡು ಬಂದು, ''ಎಲೈ, ಸ್ತ್ರೀ ಕಾಮುಕನೇ ! ನಿಲ್ಲು, ನಿಲ್ಲು'' ಎಂದು ಜಗಳಕ್ಕೆ ನಿಂತನು. ಈ ಪರಾಕ್ರಮಿಗಳಿಬ್ಬ ರಿಗೂ ಘೋರ ಯುದ್ಧವು ನಡೆಯಿತು. ಭೀಷ್ಮನು ಬಂಡ ವೈರಿಯನ್ನು ನಿಗ್ರಹಿಸಿ ಮುಂದಕ್ಕೆ ಹೊರಟನು.

ಈ ರೀತಿಯಲ್ಲಿ ಭೀಷ್ಮನು ಉದ್ದಿಷ್ಟ ಕಾರ್ಯವನ್ನು ಸಾಧಿಸಿ ಹಸ್ತಿನಾಪುರವನ್ನು ಸೇರುತ್ತಲೆ ಸತ್ಯವತಿಯೊಡನೆ ಆಲೋಚನೆಮಾಡಿ ತಮ್ಮನ ಮದುವೆಯ ಪ್ರಯತ್ನವನ್ನು ಮಾಡತೊಡಗಿದನು. ಈ ನಡುವೆ, ಕಾಶೀರಾಜನ ಜ್ಯೇಷ್ಠ ಪುತ್ರಿಯಾದ ಅಂಬೆಯು ಭೀಷ್ಮನನ್ನು ಕುರಿತು ವಿನಮ್ರತೆಯಿಂದ—"ನಾನು ಇದಕ್ಕೆ ಮುಂಚೆಯೇ ಸಾಲ್ವ ರಾಜನನ್ನು ಪತಿಯಾಗಿ ಮನಸ್ಸಿನಲ್ಲಿ ವರಿಸಿದ್ದೆನು; ಸಾಲ್ವರಾಜನೂ ನನ್ನನ್ನು ಕೋರಿರುವನು; ಈ ವಿಷಯದಲ್ಲಿ ನಮ್ಮ ತಂದೆಯೂ ಸಂಪೂರ್ಣಾಭಿಮತನಾಗಿರುವನು; ಈಗ ತಮಗೆ ಯಾವುದು ನ್ಯಾಯ ವಾಗಿಯೂ ಧರ್ಮವಾಗಿಯೂ ಕಾಣುವುದೋ ಅದನ್ನು ಮಾಡ ಬಹುದು" ಎಂದಳು.

ಭೀಷ್ಮನು ಅಂಬೆಯ ಮಾತನ್ನು ಕೇಳಿ, ವೇದಜ್ಞರಾದ ಬ್ರಾಹ್ಮಣ ರೊಡನೆ ಆಲೋಚಿಸಿ ಇಂತೆಂದನು:—"ಭದ್ರೇ! ನೀನು ಮನಸ್ಸಿನಲ್ಲಿ ಯಾವನಿಗೆ ಆತ್ಮಸಮರ್ಪಣೆ ಮಾಡಿಕೊಂಡಿರುವೆಯೋ ಅವನೇ ನಿನ್ನ ಪತಿ. ನಾನು ನಿನ್ನಿಚ್ಛೆಗೆ ವಿರೋಧವಾಗಿ ಯಾವ ಕಾರ್ಯವನ್ನೂ ಮಾಡೆನು. ನಿನ್ನನ್ನು ಬಲಾತ್ಕರಿಸಿ ಇಲ್ಲಿಟ್ಟುಕೊಳ್ಳಲು ನನಗಿಷ್ಟವಿಲ್ಲ. ಹಾಗೆ ಮಾಡುವುದು ನಿಂದನೀಯವು, ಅವಮಾನಕರವು. ಸಾಲ್ವ ರಾಜನು ಸ್ವಯಂವರ ಸಭೆಗೆ ಬಂದು ನನ್ನ ಸಂಗಡ ಯುದ್ಧಮಾಡಿ ದನು; ಅವನನ್ನು ಗೆದ್ದು ನಿನ್ನನ್ನು ಕರೆತಂದೆನು. ಆದರೂ ನೀನು ಅವನನ್ನು ಮನಸ್ಸಿನಲ್ಲಿ ವರಿಸಿದೆಯಾದ ಕಾರಣ ಅವನ ಸಹಧರ್ಮಿಣಿ ಯಾಗಿ ಸುಖದಿಂದಿರು. ದಯಾಧರ್ಮವನ್ನು ತೊರೆದು ಶಕ್ತಿಯನ್ನು ತೋರಿಸಲು ನನಗಿಷ್ಟವಿಲ್ಲ; ನಾರಿಯರ ಧರ್ಮವನ್ನು ಕೆಡಿಸುವುದು ಹಂದೆಯರ ಕೆಲಸವು. ಅಂತಹ ಕೆಲಸವನ್ನು ಮಾಡಿ ನಾನು ಜೀವಿ ಸುವನಲ್ಲ."

ಇಂತೆಂದು ಹೇಳಿ, ಅಂಬೆಯು ಅವಳ ಇಷ್ಟಾನುಸಾರವಾಗಿ ಹೋಗಬಹುದೆಂದು ಭೀಷ್ಮನು ಆದರಪುರಸ್ಸರವಾಗಿ ಅನುಮತಿ ಯನ್ನು ಕೊಟ್ಟು ಅನಂತರ ಕಾಶೀರಾಜನ ಉಳಿದಿಬ್ಬರು ಕುಮಾರಿಯ

ರಾದ ಅಂಬಿಕೆ ಅಂಬಾಲಿಕೆಯರನ್ನು ವಿಚಿತ್ರವೀರ್ಯನಿಗೆ ಅತಿ ಸಂಭ್ರಮ ದಿಂದ ಮದುವೆಮಾಡಿದನು. ಮಗನಿಗೆ ಅನುರೂಪೆಯರಾದ ಪತ್ನಿ ಯರು ಘಟಿಸಿದರೆಂದು ಸತ್ಯವತಿಯೂ ಸಂತೋಷಪಟ್ಟಳು. ಪುರ ವಾಸಿಗಳು ರಾಜಯೋಗ್ಯ ರಮಣಿಯರನ್ನು ನೋಡಿ ಆನಂದಪಟ್ಟರು. ಕೆಲವು ದಿನಗಳು ಕುರುರಾಜ್ಯದಲ್ಲೆಲ್ಲ ನಿರಂತರವಾಗಿ ಉತ್ಸವವು ನಡೆಯುತ್ತಿದ್ದಿತು.

---

# ಮೂರನೆಯ ಅಧ್ಯಾಯ

## ಅಂಬೆಯ ಛಲ, ಪರಶುರಾಮ ಭೀಷ್ಮರ ಯುದ್ಧ.

ಇತ್ತ, ಅಂಬೆ ಕೆಲವರು ವೃದ್ಧಬ್ರಾಹ್ಮಣರೊಡನೆ ತನ್ನ ಧಾತ್ರಿಯ ಕೂಡೆ ಹಸ್ತಿನಾಪುರದಿಂದ ಹೊರಟು ಸಾಲ್ವನ ಪಟ್ಟಣವನ್ನು ಹೊಕ್ಕಳು. ಆ ರಾಜನ ಬಳಿ ಹೋಗಿ ಅವಳು—"ಮಹಾ ಬಾಹುವೇ! ನಾನು ನಿನ್ನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ನಿನ್ನ ಆಶ್ರಯವನ್ನು ಬೇಡ ಬಂದಿರುವೆನು" ಎಂದಳು.

ಸಾಲ್ವ.—ಇನ್ನೊಬ್ಬನಿಗೆ ನಿಶ್ಚಿತವಾಗಿದ್ದ ನಿನ್ನನ್ನು ನಾನು ಮದುವೆಯಾಗೆನು. ಭೀಷ್ಮನು ನಿನ್ನನ್ನು ಅಪಹರಿಸಿ, ನೆರೆದಿದ್ದ ಅರಸ ರೆಲ್ಲರನ್ನೂ ಸೋಲಿಸಿ ನಿನ್ನನ್ನು ಸಾಗಿಸಿಕೊಂಡು ಹೋದನು. ಸಕಲ ಶಾಸ್ತ್ರಗಳನ್ನೂ ಬಲ್ಲವನಾಗಿ, ಪ್ರಜೆಗಳಿಗೆ ಧರ್ಮವನ್ನು ವಿಧಿಸತಕ್ಕವ ನಾಗಿ, ವೀರನಾಗಿ, ಅನ್ಯನು ಗೆದ್ದ ಹೆಣ್ಣನ್ನು ನಾನು ಅಂಗೀಕರಿಸೆನು. ಭದ್ರೆ! ನೀನು ಬೇರೆ ಎಲ್ಲಿಯಾದರೂ ಮನಸ್ಸು ಬಂದ ಕಡೆಗೆ ಹೋಗು.

ಅಂಬೆ.—"ಮಹೀಪಾಲನೆ! ಹಾಗೆನ್ನಬೇಡ; ನಾನು ಇಷ್ಟಪಟ್ಟು ಹೋದವಳಲ್ಲ; ಭೀಷ್ಮನು ನಾನು ಅಳುತ್ತಿದ್ದರೂ ಬಿಡದೆ ನನ್ನನ್ನು ಬಲಾತ್ಕಾರದಿಂದ ಒಯ್ದನು. ನಾನು ಬಾಲೆ, ಅಬಲೆ, ನಿರಪರಾಧಿ, ನಿನ್ನ ಅನನ್ಯ ಭಕ್ತೆ; ನನ್ನನ್ನು ತ್ಯಜಿಸುವುದು ನಿನಗೆ ಧರ್ಮವಲ್ಲ. ಭೀಷ್ಮನ ಅನುಜ್ಞೆಯನ್ನು ಪಡೆದೇ ನಾನು ನಿನ್ನ ಹತ್ತಿರ ಬಂದಿರುವೆನು. ಅವನು ನನ್ನನ್ನು ಒಲ್ಲನು; ನನ್ನ ತಂಗಿಯರನ್ನು ಅವನ ತಮ್ಮನಿಗೆ ತಂದುಕೊಂಡಿದ್ದಾನೆ. ಪುರುಷ ವ್ಯಾಘ್ರನೆ! ನಿನ್ನನ್ನು ಬಿಟ್ಟು ನಾನು ಇನ್ನಾರನ್ನೂ ವರಿಸಿದವಳಲ್ಲ; ಬೇರೆ ಯಾರಿಗೆ ಕೊಡಬೇಕೆಂದೂ ಯಾರೂ ಯೋಚಿಸಿಲ್ಲ; ನಾನಾಗಿ ನಿನ್ನ ಶರಣಹೊಕ್ಕಿರುವೆನು" ಎಂದು ಮೊರೆಯಿಡುತ್ತ ಅವನ ಕಾಲಿಗೆ ಬಿದ್ದಳು.

ಸಾಲ್ವನು ಅವಳನ್ನು ಮದುವೆಯಾಗಲೊಡಂಬಡಲಿಲ್ಲ. ಅವಳು ಕೋಪಾವಿಷ್ಟಳಾಗಿ ಕಂಬನಿಗಳಿಂದ ತೊಯ್ದು—"ನೀನು ನನ್ನನ್ನು

ಒಲ್ಲೆನೆಂದರೆ, ಲೋಕದಲ್ಲಿ ಇನ್ನು ಧರ್ಮಾತ್ಮರೇ ಇಲ್ಲವೆ? ಅವರು ನನ್ನನ್ನು ಸಲಹರೆ? ಧರ್ಮವು ಎಂದಿಗೂ ಕೆಡದು'' ಎಂದಳು.

ಸಾಲ್ವ.—ನೀನು ಭೀಷ್ಮನ ಕೈಸೇರಿದವಳು. ನಾನು ಭೀಷ್ಮನಿಗೆ ಅಂಜಿ ನಡೆಯತಕ್ಕವನು. ನೀನು ನಡೆ; ಇಲ್ಲಿರಬೇಡ.

ಅಲ್ಲಿಂದ ಹೊರಟು ಅಂಬೆಯು, ''ಲೋಕದಲ್ಲಿ ನನ್ನ ಹಾಗೆ ಸಂಕಟ ಪಡುವ ನಿರ್ಭಾಗ್ಯೆ ಯಾರೂ ಇಲ್ಲ. ಸಾಲ್ವನು ನನ್ನನ್ನು ಕೈಬಿಟ್ಟನು; ನಾನು ಅವನ ಮಾತಿಗೆ ಮರುಳಾದೆನು. ನನಗೆ ದಿಕ್ಕಿಲ್ಲ. ಮರಳಿ ಹಸ್ತಿನಾ ಪುರಕ್ಕೆ ಹೋಗುವೆನೆಂದರೆ, ಭೀಷ್ಮನು ನನ್ನನ್ನು ಅಲ್ಲಿಂದ ಹೊರಡಿಸಿ ಬಿಟ್ಟನು. ಇದು ಯಾರ ದೋಷವೆಂದು ಹೇಳಲಿ? ನನ್ನದೆ? ಅಜೇಯ ನಾದ ಭೀಷ್ಮನದೆ? ಸ್ವಯಂವರವನ್ನು ಪರಾಜಯಿಸಿ ವೀರ್ಯಶುಲ್ಕೆಯೆಂದು ಹೆಸರಿಟ್ಟು ನನ್ನನ್ನು ಅಂಗಡಿಯಲ್ಲಿಟ್ಟ ನಮ್ಮಪ್ಪನದೆ? ನನ್ನನ್ನು ನಿರ್ಮಿಸಿದ ವಿಧಾತನದೆ?'' ಎಂದು ಈ ಬಗೆಯಲ್ಲಿ ತೊಳಲುತ್ತ ಯುದ್ಧ ದಿಂದಲೋ ತಪಸ್ಸಿನಿಂದಲೋ ಭೀಷ್ಮನಿಗೆ ತಕ್ಕ ಶಾಸ್ತಿ ಮಾಡುವೆ ನೆಂದು ನಿಶ್ಚಯಿಸಿ, ನಗರದ ಬಹಿರ್ಭಾಗದಲ್ಲಿದ್ದ ಒಂದು ತಪೋವನವನ್ನು ಹೊಕ್ಕಳು. ಅಲ್ಲಿ ಪುಣ್ಯಶೀಲರಾದ ತಾಪಸರ ಸಂಗಡ ತನ್ನ ದುಃಖವನ್ನು ಹೇಳಿಕೊಳ್ಳುತ್ತಿರುವ ಸಮಯಕ್ಕೆ ಮಹೇಂದ್ರ ಪರ್ವತದಿಂದ ಪರಶು ರಾಮನು ಆ ಆಶ್ರಮದಲ್ಲಿ ಬಂದಿಳಿದನು. ಆಶ್ರಮವಾಸಿಗಳು ಆ ಭೃಗುಕುಲೋತ್ತಮನನ್ನು ಸತ್ಕರಿಸಿ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತು ಕೊಳ್ಳುತ್ತಲೆ ಅಂಬೆ ತನ್ನ ವೃತ್ತಾಂತವೆಲ್ಲವನ್ನೂ ತಿಳಿಸಿ, ಕಡೆಗೆ— ''ಭೃಗುನಂದನನೇ! ನನ್ನ ಸಂಕಟಕ್ಕೆ ಭೀಷ್ಮನೇ ಮೂಲ. ಅವನು ಲುಬ್ಧನು, ನೀಚನು, ಜಯೋನ್ಮತ್ತನು. ನೀನು ಅವನ ಸೊಕ್ಕು ಮುರಿ. ಅವನನ್ನು ಕೊಲ್ಲಿಸಬೇಕೆಂಬುದೇ ನನ್ನ ಸಂಕಲ್ಪ. ರಾಮ! ಈ ನನ್ನ ಅಭೀಷ್ಟವನ್ನು ತೀರಿಸು'' ಎಂದಳು.

ರಾಮ.—ಎಲೌ ಕನ್ಯೆಯೇ! ವೇದಜ್ಞರಾದ ಬ್ರಾಹ್ಮಣರನ್ನು ಸಲಹಲು ಹೊರತು ನಾನು ಆಯುಧವನ್ನು ಹಿಡಿಯೆನು. ಆ ಮಾತನ್ನು ಬಿಟ್ಟು ನನ್ನಿಂದೇನಾಗಬೇಕು ಹೇಳು.

ಅಂಬೆ.—ಮಹಾತ್ಮನೇ! ಹೇಗಾದರೂ ನನ್ನ ದುಃಖವನ್ನು ಪರಿಹರಿಸು; ನನ್ನ ದುಃಖವಂತೂ ಭೀಷ್ಮನಿಂದಾದುದು.

ರಾಮ.—ಎಲೌ ಕಾಶೀ ಕನ್ಯೆಯೇ! ಭೀಷ್ಮನು ನಿನಗೆ ಪೂಜ್ಯನು; ಆದರೂ, ನಾನು ಹೇಳಿದರೆ ನಿನ್ನ ಪಾದಗಳೆರಡನ್ನೂ ತನ್ನ ತಲೆಯ ಮೇಲಿಟ್ಟುಕೊಳ್ಳುವನು; ಅವನು ನನ್ನ ಮಾತನ್ನು ಕಳೆಯನು.

ತರುವಾಯ, ಪರಶುರಾಮನು ಕಾಶೀರಾಜನ ಮಗಳನ್ನೊಡಗೊಂಡು ಬ್ರಾಹ್ಮಣರ ಸಮೇತನಾಗಿ ಕುರುಕ್ಷೇತ್ರಕ್ಕೆ ಪಯಣಮಾಡಿದನು. ಅವನ ಬರವನ್ನು ಭೀಷ್ಮನು ಕೇಳಿ ಗೋವನ್ನು ಮುಂದುಮಾಡಿಕೊಂಡು ಬ್ರಾಹ್ಮಣರು, ಋತ್ವಿಜರು, ಪುರೋಹಿತರು ಮೊದಲಾದವರೊಡನೆ ಹೋಗಿ ಪ್ರತಾಪಶಾಲಿಯಾದ ಆ ಜಾಮದಗ್ನ್ಯನನ್ನು ಅರ್ಚನಾಪೂರ್ವಕವಾಗಿ ಸತ್ಕರಿಸಿದನು.

ಸ್ವಾಗತ ಸಂಭಾಷಣಾದಿಗಳು ಆದ ಬಳಿಕ ಪರಶುರಾಮನು— "ಭೀಷ್ಮ! ನೀನು ಕಾಮಕ್ರೋಧಗಳನ್ನು ಬಿಟ್ಟವನಾದರೂ ಸ್ವಯಂವರ ಸಭೆಯನ್ನು ಪ್ರವೇಶಿಸಿ ಕಾಶೀರಾಜನ ಮಗಳನ್ನು ಹಿಡಿದುಕೊಂಡು ಹೋಗಿ, ತರುವಾಯ ಅವಳನ್ನು ಅಟ್ಟಿಬಿಟ್ಟೆ; ಇದು ನ್ಯಾಯವೆ? ನೀನು ಮುಟ್ಟಿದ ಹೆಣ್ಣನ್ನು ಇನ್ನಾರು ತಾನೆ ಪುರಸ್ಕರಿಸುವರು? ನೀನೆಳೆದುಕೊಂಡು ಹೋದೆಯೆಂದೇ ಸಾಲ್ವನು ಈ ಯಶಸ್ವಿನಿಯನ್ನು ತ್ಯಜಿಸಿದನು. ಭಾರತನೇ! ಈ ರಾಜಪುತ್ರಿಯನ್ನು ನೀನೇ ಪ್ರತಿಗ್ರಹಿಸು. ಅವಳನ್ನು ಅಪಮಾನಕ್ಕೂ ಕಷ್ಟಕ್ಕೂ ಈಡುಮಾಡುವುದು ಧರ್ಮವಲ್ಲ" ಎಂದನು.

ಭೀಷ್ಮ.—ಎಲೈ ಬ್ರಾಹ್ಮಣೋತ್ತಮನೇ! ನಾನು ನನ್ನ ತಮ್ಮನಿಗೆ ಈ ಹೆಣ್ಣನ್ನು ತೆಗೆದುಕೊಳ್ಳೆನು. ತಾನು ಸಾಲ್ವನವಳೆಂದು ಹೇಳಿ, ಹೋಗಬಿಡೆಂದು ತಾನೇ ಕೇಳಿಕೊಂಡಮೇಲೆ ಅವಳನ್ನು ಹೋಗೆಂದು ಕಳುಹಿಸಿಬಿಟ್ಟೆನು. ನಾನಾದರೋ ಭಯದಿಂದಾಗಲಿ, ಕನಿಕರದಿಂದಾಗಲಿ, ಅರ್ಥಲೋಭದಿಂದಾಗಲಿ, ವಿಷಯಾಸಕ್ತಿಯಿಂದಾಗಲಿ ಕ್ಷಾತ್ರಧರ್ಮವನ್ನು ತೊರೆಯೆನು, ಬ್ರಹ್ಮಚರ್ಯವನ್ನು ಬಿಡೆನು.

ರಾಮ.—ಎಲೈ ನರಪುಂಗವನೇ ! ನೀನು ನನ್ನ ಮಾತನ್ನು ಕೇಳ ದಿದ್ದರೆ ನಿನ್ನನ್ನೂ ನಿನ್ನ ಅಮಾತ್ಯರನ್ನೂ ಕೊಂದುಬಿಡುವೆನು.

ಭೀಷ್ಮ.—ನಾನು ನಮಸ್ಕಾರಮಾಡಿ ಬೇಡುತ್ತೇನೆ, ಶಾಂತ ರಾಗಿರಿ. ನನ್ನ ಬಾಲ್ಯದಲ್ಲಿ ತಾವು ನನಗೆ ಅಸ್ತ್ರ ವಿದ್ಯೆಯನ್ನು ಕಲಿಸಿ ದಿರಿ. ನಾನು ತಮ್ಮ ಶಿಷ್ಯ. ನನ್ನ ಮೇಲೆ ತಾವು ಯುದ್ಧಕ್ಕೆ ಬರಬಹುದೆ ?

ರಾಮ.—ನಾನು ನಿನ್ನ ಗುರುವಾಗಿದ್ದು, ನನ್ನ ಪ್ರಿಯಾರ್ಥವಾಗಿ ಈ ರಾಜಕುಮಾರಿಯನ್ನು ಮದುವೆಯಾಗೆಂದು ಹೇಳುತ್ತಿರುವಲ್ಲಿ, ಒಲ್ಲೆ ನೆನ್ನುತ್ತೀಯೆ. ಕುರುನಂದನಾ! ನೀನು ನನ್ನನ್ನು ಗುರುವೆಂದೆಣಿಸುವ ಪಕ್ಷಕ್ಕೆ ಈ ಹೆಣ್ಣನ್ನು ತೆಗೆದುಕೊ ; ನಿನ್ನ ಕುಲವನ್ನು ರಕ್ಷಿಸಿಕೊ.

ಭೀಷ್ಮ.—ಬ್ರಹ್ಮರ್ಷಿಗಳೇ ! ಹಾಗಲ್ಲ. ಯಥಾರ್ಥವಾಗಿಯೂ ಗುರುಗಳೆಂದು ಭಾವಿಸಿಯೇ ತಮ್ಮನ್ನು ಸಂತೈಸಲು ಪ್ರಯಾಸ ಪಡುತ್ತಿದ್ದೇನೆ. ಅನರ್ಥ ಹೇತುವಾದ ಸ್ತ್ರೀಯರ ದೋಷವನ್ನು ತಿಳಿದು ತಿಳಿದು, ಅನ್ಯ ಪುರುಷನ ಮೇಲೆ ಮನಸ್ಸುಳ್ಳ ಹೆಣ್ಣನ್ನು ಯಾರು ತಾನೆ ಮನೆಗೆ ಕೂಡುವರು ? ನಾನು ದೇವೇಂದ್ರನಿಗೂ ಹೆದರುವನಲ್ಲ, ಧರ್ಮ ಭ್ರಷ್ಟನಾಗುವನಲ್ಲ, ಪ್ರಸನ್ನರಾಗಿರಿ. ಗುರುವು ಕುಪಥ ಗಾಮಿಯೂ ಅಹಂಕಾರಿಯೂ ಆದಲ್ಲಿ ಅಂತಹ ಗುರುವನ್ನು ತ್ಯಜಿಸು ವುದು ಶಾಸ್ತ್ರಸಮ್ಮತವು. ನಾನು ಗುರುವನ್ನು, ವಿಶೇಷತಃ ಬ್ರಾಹ್ಮಣ ನನ್ನು, ಅದರ ಮೇಲೆ ತಪೋವೃದ್ಧನನ್ನು ಸಮರದಲ್ಲಿ ಕೊಲ್ಲೆನು. ಈಗಲೂ ತಮ್ಮನ್ನು ಕ್ಷಮಿಸಲು ಸಿದ್ಧನಾಗಿರುವೆನು. ಆದರೆ ತಾವು ಗುರುವೃತ್ತಿಯನ್ನರಿಯರಿ. ಯಾವ ಬ್ರಾಹ್ಮಣನು ಕ್ಷತ್ರಿಯ ಬಂಧು ವಾಗಿ, ಅಸ್ತ್ರವನ್ನೆತ್ತಿ ರಣದಲ್ಲಿ ನಿಂತು ಯುದ್ಧಮಾಡುವನೊ ಅವನನ್ನು ಸಮರದಲ್ಲಿ ಕೊಲ್ಲುವುದು ಬ್ರಹ್ಮಹತ್ಯವೆನಿಸದು. ತಪೋಧನರೇ ! ನಾನು ಕ್ಷತ್ರಿಯ, ಕ್ಷತ್ರಿಯ ಧರ್ಮದಲ್ಲಿರುತ್ತೇನೆ. ತಾವು ಅನ್ಯಾಯವಾಗಿ ನನ್ನ ಸಂಗಡ ಯುದ್ಧಕ್ಕೆ ಬಂದಿರುತ್ತೀರಿ. ತಮ್ಮ ಸಂಗಡ ಕಾದು ವುದರಿಂದ ನಾನು ಯಾವ ಪಾಪವನ್ನೂ ಮಾಡಿದಂತಾಗುವುದಿಲ್ಲ,

ಅಶ್ರೇಯಸ್ಸನ್ನು ಹೊಂದುವ ಸಂಭವವೂ ಇಲ್ಲ. ತಪೋಧನರೇ! ತಪಸ್ಸಿನಿಂದ ತಾವು ಸಂಪಾದಿಸಿರುವ ಲೋಕವನ್ನು ತಮಗೆ ನನ್ನ ಅಸ್ತ್ರದಿಂದಲೇ ಪ್ರಾಪ್ತವಾಗುವಂತೆ ಮಾಡುವೆನು; ಕುರುಕ್ಷೇತ್ರಕ್ಕೆ ಬನ್ನಿರಿ; ನನ್ನ ಬಲ ವಿಕ್ರಮವನ್ನು ನೋಡುವಿರಿ. ಪೂರ್ವದಲ್ಲಿ ಕ್ಷತ್ರಿಯರ ರಕ್ತದಿಂದ ನಿಮ್ಮ ಪಿತೃಗಳಿಗೆ ನೀವು ತರ್ಪಣವನ್ನು ಕೊಟ್ಟಂತೆಯೇ ಈಗ ನಾನು ನಿಮ್ಮನ್ನು ಕೊಂದು ನಿಮ್ಮ ರಕ್ತದಿಂದ ಆ ಕ್ಷತ್ರಿಯರಿಗೆ ತರ್ಪಣವನ್ನು ಕೊಡುವೆನು; ಬ್ರಾಹ್ಮಣರು ಹೊಗಳುತ್ತಿರುವ ನಿಮ್ಮ ಪುರಾತನ ದರ್ಪವನ್ನು ಮುರಿಯುವೆನು.

ರಾಮ.—ಕುರುಪುಂಗವನೇ! ನಾನೊಬ್ಬನೇ ನಿಂತು ಎಷ್ಟೋ ಬಾರಿ ಲೋಕವನ್ನು ನಿಃಕ್ಷತ್ರಿಯವನ್ನಾಗಿ ಮಾಡಿದುದನ್ನು ನೀನರಿಯೆಯಾ?

ಭೀಷ್ಮ.—ಅದಕ್ಕೆ ಕಾರಣವನ್ನು ನೀವರಿಯರಾ? ಆಗ ಭೀಷ್ಮನಾಗಲಿ ಭೀಷ್ಮನಂತಹ ಕ್ಷತ್ರಿಯ ವೀರನಾಗಲಿ ಹುಟ್ಟಿರಲಿಲ್ಲ. ಅಲ್ಲಿಂದೀಚೆಗೆ ತೇಜೋವಂತರಾದ ಕ್ಷತ್ರಿಯರು ಹುಟ್ಟಿದರು. ತಾವು ನಾಶ ಮಾಡಿದ ಕ್ಷತ್ರಿಯರು ತೃಣಮಾತ್ರದವರು. ತಮ್ಮ ಅಹಂಕಾರವನ್ನು ಮುರಿಯಬಲ್ಲವನು ಈಚೆಗೆ ಹುಟ್ಟಿದನು. ಅವನಾರು ಬಲ್ಲಿರಾ? ಬೇರೆ ಯಾರೂ ಅಲ್ಲ, ನಾನು, ಭೀಷ್ಮ, ಪರಪುರಂಜಯ!

ರಾಮ.—ಹಾಗಾದರೆ ನಡೆ, ರಣರಂಗಕ್ಕೆ ಹೋಗೋಣ.

ಒಡನೆಯೇ ಈ ಪ್ರಚಂಡ ಧನುರ್ಧಾರಿಗಳಿಬ್ಬರೂ ಕುರುಕ್ಷೇತ್ರದಲ್ಲಿ ದ್ವಂದ್ವ ಯುದ್ಧಕ್ಕೆ ನಿಂತರು.

ಭೀಷ್ಮ.—ಮಹಾ ಭುಜರೇ! ತಾವು ನೆಲದ ಮೇಲೆ ನಿಂತಿರುವಲ್ಲಿ, ನಾನು ರಥದ ಮೇಲೆ ಕುಳಿತು ತಮ್ಮ ಸಂಗಡ ಯುದ್ಧಮಾಡೆನು; ಕವಚವನ್ನು ತೊಟ್ಟು ತಾವೂ ರಥವನ್ನೇರಿರಿ.

ರಾಮನು ಮಂದಸ್ಮಿತನಾಗಿ, "ಮೇದಿನಿ ನನ್ನ ರಥ, ವೇದಗಳು ನನ್ನ ಅಶ್ವಗಳು, ಮಾತರಿಶ್ವನು ನನ್ನ ಸೂತ, ಗಾಯತ್ರಿ ಸಾವಿತ್ರಿ

ಸರಸ್ವತಿಗಳು ನನ್ನ ಕವಚ'' ಎಂದು ನುಡಿದು, ಒಡನೆಯೇ ಸರ್ವಾಯುಧ ಸಂಪನ್ನನಾಗಿ ಕದನವನ್ನಾರಂಭಿಸಿದನು.

ಆಗ ಭೀಷ್ಮನು ರಥವನ್ನಿಳಿದು ಧನುಸ್ಸನ್ನು ಒತ್ತಟ್ಟಿಗಿಟ್ಟು, ಪಾದಚಾರಿಯಾಗಿ ಹೋಗಿ ವಿಧಿವತ್ತಾಗಿ ಆ ಋಷಿಶ್ರೇಷ್ಠನನ್ನು ಅಭಿವಂದಿಸಿ—''ವೀರವರ್ಯರೇ! ನಾನು ತಮಗೆ ಸಮನೊ ಅಧಿಕನೊ, ಹೇಗಾದರೂ ಆಗಲಿ; ಧರ್ಮಶೀಲರೂ ಗುರುಗಳೂ ಆದ ತಮ್ಮ ಸಂಗಡ ಯುದ್ಧಮಾಡಲಿಚ್ಛಿಸುತ್ತೇನೆ; ನನಗೆ ಜಯವಾಗಲೆಂದು ಹರಸಿರಿ'' ಎಂದನು.

ರಾಮ.—ಕುರುಶ್ರೇಷ್ಠನೇ! ಅಭ್ಯುದಯವನ್ನು ಬಯಸುವರು ಹೀಗೆಯೇ ನಡೆಯಬೇಕು. ಬಲಾಧಿಕರೂ ಹಿರಿಯರೂ ಆದವರ ಸಂಗಡ ಯುದ್ಧಮಾಡುವವರಿಗೆ ಇದು ಕರ್ತವ್ಯ. ನನ್ನ ಬಳಿಗೆ ನೀನು ಬಾರದೆಹೋಗಿದ್ದರೆ ನಿನ್ನನ್ನು ಶಪಿಸುತ್ತಿದ್ದೆನು. ನಾನು ನಿನ್ನ ನಡತೆಯನ್ನು ಮೆಚ್ಚಿದೆನು. ಕೌರವನೇ! ಹೋಗು, ಧೈರ್ಯವನ್ನವಲಂಬಿಸಿ ಧರ್ಮದಿಂದ ಯುದ್ಧಮಾಡು. ನಾನು ನಿನ್ನನ್ನು ಜಯಿಸಬಂದಿರುವಲ್ಲಿ ನಿನಗೆ ಜಯವಾಗಲೆಂದು ಹರಸುವುದು ಹೇಗೆ?

ಭೀಷ್ಮನು ಗುರುವನ್ನು ಅಭಿವಂದಿಸಿ, ರಥವನ್ನೇರಿ ಶಂಖವನ್ನು ಪೂರಯಿಸಿದನು. ಯುದ್ಧವಾರಂಭವಾಯಿತು. ರಾಮನೇ ಮೊದಲು ಭೀಷ್ಮನ ಮೇಲೆ ಶರವೃಷ್ಟಿಯನ್ನು ಕರೆದನು. ಆದರೂ ಭೀಷ್ಮನು ಸುಮ್ಮನಿದ್ದು ದೇವ ಬ್ರಾಹ್ಮಣರಿಗೆ ನಮಸ್ಕಾರಮಾಡಿ, ನಸುನಗುತ್ತ ರಾಮನನ್ನು ಕುರಿತು—''ಬ್ರಾಹ್ಮಣೋತ್ತಮರೆ! ನನ್ನನ್ನು ತಾವು ನಿರ್ಲಕ್ಷ್ಯ ಮಾಡಿದರೂ ನಾನು ತಮ್ಮ ಆಚಾರ್ಯತ್ವವನ್ನು ಗೌರವಿಸಿದೆನು. ಇನ್ನೂ ಕೇಳಿರಿ; ನಾನು ತಮ್ಮ ವೇದಜ್ಞತೆಯನ್ನಾಗಲಿ, ತಮ್ಮ ಬ್ರಾಹ್ಮಣ್ಯದ ಮಹತ್ತನ್ನಾಗಲಿ, ತಮ್ಮ ಉಗ್ರ ತಪೋಬಲವನ್ನಾಗಲಿ ಭಂಗಪಡಿಸೆನು. ತಾವು ಆಶ್ರಯಿಸಿರುವ ಕ್ಷಾತ್ರಧರ್ಮವನ್ನು ಮಾತ್ರ ಬಿಡದೆ ಬಡಿದುಹಾಕುವೆನು. ಬ್ರಾಹ್ಮಣನು ಅಸ್ತ್ರಶಸ್ತ್ರಗಳನ್ನು ಹಿಡಿಯುತ್ತಲೆ ಅವನಿಗೆ ಕ್ಷತ್ರಿಯತ್ವವು

ಬರುವುದು. ನನ್ನ ಧನುಸ್ಸಿನ ವೀರ್ಯವನ್ನು ನೋಡಿರಿ" ಎಂದು ಪರಶುರಾಮನ ಮೇಲೆ ನಿಲುವಿಲ್ಲದೆ ಬಾಣಗಳನ್ನು ಬಿಟ್ಟನು. ಪರಶುರಾಮನು ಮೂರ್ಛೆಗೊಳಗಾದನು.

ಅದನ್ನು ಕಂಡು ಭೀಷ್ಮನು ಕೃಪಾವಿಷ್ಟನಾಗಿ, "ಯುದ್ಧವು ಬೆಂದುಹೋಗಲಿ! ಕ್ಷತ್ರಿಯ ವೃತ್ತಿಗೆ ಬೆಂಕಿ ಬೀಳಲಿ! ಕ್ಷತ್ರಿಯ ಧರ್ಮವನ್ನವಲಂಬಿಸಿ ಎಂತಹ ಪಾಪವನ್ನು ಮಾಡಿದೆನು? ಬ್ರಾಹ್ಮಣನನ್ನು, ಧರ್ಮಾತ್ಮನನ್ನು, ಮೇಲೂ ಗುರುವನ್ನು ಬಾಣದಿಂದ ಹೊಡೆದೆನಲ್ಲಾ!" ಎಂದು ತನ್ನನ್ನು ತಾನೇ ಹಳಿಯುತ್ತ ಪ್ರಲಾಪಿಸಿದನು.

ಆ ವೇಳೆಗೆ ಸೂರ್ಯಾಸ್ತಮಯವಾಯಿತು. ರಾಮನೂ ಮೂರ್ಛೆಯಿಂದೆಚ್ಚತ್ತನು. ಈ ರೀತಿ ಈ ಪ್ರಚಂಡ ಧನುರ್ಧಾರಿಗಳು ಸೂರ್ಯೋದಯದಿಂದ ಸೂರ್ಯಾಸ್ತದ ವರೆಗೆ ಪ್ರತಿ ದಿನವೂ ಒಬ್ಬರನ್ನೊಬ್ಬರು ಬಾಣಗಳಿಂದ ಹೊಡೆಯುತ್ತ ಇಪ್ಪತ್ತು ದಿನಗಳು ಛಲದಿಂದ ಹೋರಾಡಿದರು. ಇಬ್ಬರೂ ಸಮ ಧೀರರು, ಒಬ್ಬರೂ ಸೋಲುವರಲ್ಲ, ಬಾಣಕ್ಕೆ ಬೆನ್ನ ಕೊಟ್ಟು ರಣದಿಂದ ಹಿಮ್ಮೆಟ್ಟುವರಲ್ಲ. ಅಲ್ಲಿ ನೆರೆದಿದ್ದವರೆಲ್ಲರೂ—"ಭೀಷ್ಮ! ಯುದ್ಧವನ್ನು ಬಿಡು; ಆ ದ್ವಿಜೋತ್ತಮನಿಗೆ ಮಾನವನ್ನು ಕೊಡು" ಎಂದು ಹಲವು ಬಗೆಯಲ್ಲಿ ಹೇಳಿದರು.

ಭೀಷ್ಮನು, "ನಾನೆಂದಿಗೂ ಅಡಿಯ ಹಿಂದಿಡೆನು; ಲೋಭದಿಂದಾಗಲಿ ಧನಾಕಾಂಕ್ಷೆಯಿಂದಾಗಲಿ ಭಯದಿಂದಾಗಲಿ ನನ್ನ ಧರ್ಮವನ್ನು ಬಿಡೆನು" ಎಂದನು.

ಆಗ ಅವರು ರಾಮನನ್ನು ಸಂಬೋಧಿಸಿ—"ಭಾರ್ಗವನೇ! ಬ್ರಾಹ್ಮಣರ ಹೃದಯವು ಬೆಣ್ಣೆಗೆ ಸಮಾನವಾದುದು; ಶಾಂತನಾಗು. ನೀನು ಭೀಷ್ಮನನ್ನು ಕೊಲ್ಲಲಾರೆ. ಭೀಷ್ಮನು ನಿನ್ನನ್ನು ಕೊಲ್ಲಲಾರನು" ಎಂದು ಹೇಳಿ ಲೋಕ ಹಿತಾರ್ಥವಾಗಿ ಶಸ್ತ್ರಗಳನ್ನು ಕೆಳಗೆ ಇಡಿಸಿದರು.

ಭೀಷ್ಮನು ಕ್ಷತವಿಕ್ಷತನಾಗಿದ್ದರೂ ಒಡನೆಯೇ ಹೋಗಿ ರಾಮನ ಪಾದಕ್ಕೆ ಬಿದ್ದನು.

ಆಗ ಮಹಾ ತಪಸ್ವಿಯಾದ ಭಾರ್ಗವನು ನಸುನಗುತ್ತ ಪ್ರೇಮದಿಂದ—"ಭೀಷ್ಮ! ಇನ್ನು ಹೋಗು; ಲೋಕದಲ್ಲಿ ನಿನ್ನ ಸಮಾನ ಕ್ಷತ್ರಿಯನಿಲ್ಲ; ನಿನ್ನನ್ನು ಮೆಚ್ಚಿದೆನು; ನಿನ್ನ ಪ್ರತಾಪವನ್ನು ನೋಡಿ ಸಂತೋಷಪಟ್ಟೆನು" ಎಂದು ಹರ್ಷದಿಂದುಬ್ಬಿ ಶಿಷ್ಯನ ದುರ್ಧರ ಬಾಹುಬಲವನ್ನು ಕೊಂಡಾಡಿದನು.

ತರುವಾಯ, ರಾಮನು ಅಂಬೆಯನ್ನು ಕರೆದು—"ಎಲೌ ಭಾಮಿನಿ! ಇವರೆಲ್ಲರೂ ಕಂಡಂತೆ ನನ್ನ ಶಕ್ತಿಯೆಲ್ಲವನ್ನೂ ವಿನಿಯೋಗಿಸಿದರೂ ಆ ಪ್ರಚಂಡನ ಮೇಲೆ ನನ್ನ ಕೈ ಸಾಗಲಿಲ್ಲ; ಇಷ್ಟೇ ನನ್ನ ಪರಮ ಶಕ್ತಿ; ಇನ್ನು ಭೀಷ್ಮನ ಮರೆಬೀಳು, ಬೇರೆ ಗತಿಯಿಲ್ಲ" ಎಂದು ಹೇಳಿ ಮಹೇಂದ್ರ ಪರ್ವತಕ್ಕೆ ಹೊರಟು ಹೋದನು.

ತರುವಾಯ, ಕ್ರೋಧ ಪರವಶಳಾದ ಆ ರಾಜಪುತ್ರಿಯು ಭೀಷ್ಮನನ್ನು ಕೊಲ್ಲದೆ ಬಿಡೆನೆಂದು ನಿಶ್ಚಯಿಸಿ, ಮಹೇಶ್ವರನನ್ನು ಕುರಿತು ತಪಸ್ಸುಮಾಡಿ, ತನ್ನ ಇಷ್ಟಸಿದ್ಧಿಗೆ ತಕ್ಕ ವರವನ್ನು ಪಡೆದು ಅಗ್ನಿ ಪ್ರವೇಶಮಾಡಿ, ತರುವಾಯ ದ್ರುಪದರಾಯನ ಹೊಟ್ಟೆಯಲ್ಲಿ ಹುಟ್ಟಿ ಶಿಖಂಡಿಯೆಂಬ ಹೆಸರಿನಿಂದ ಪಾಂಡವ ಕೌರವರ ಯುದ್ಧದಲ್ಲಿ ಕಾಣಿಸಿಕೊಂಡಳು.

---

# ನಾಲ್ಕನೆಯ ಅಧ್ಯಾಯ

## ಅರಾಜಕತೆಯ ಶಂಕೆ.

ವಿಚಿತ್ರವೀರ್ಯನು ಇಬ್ಬರು ಹೆಂಡಿರೊಡನೆ ಸುಖದಿಂದ ಕಾಲ ಯಾಪನೆ ಮಾಡತೊಡಗಿದನು. ರಾಜಮಹಿಷಿಯರಿಬ್ಬರೂ, ದೇವ ಸೇನಾನಿಯಂತಹ ರೂಪವಂತನೂ ದೇವ ರಾಜನಂತಹ ಪರಾಕ್ರಮ ಶಾಲಿಯೂ ದೇವ ಗುರುವಿನಂತಹ ಸರ್ವ ಗುಣ ಸಂಪನ್ನನೂ ಆದ ಗಂಡ ನನ್ನು ಪಡೆದು ಚರಿತಾರ್ಥರಾದೆವೆಂದರು. ಅವರು ತಾವು ಸೌಭಾಗ್ಯ ವತಿಗಳೆಂದು ಭಾವಿಸಿಕೊಂಡು ಹರ್ಷಚಿತ್ತರಾಗಿ ಪತಿಸೇವೆಯನ್ನು ಮಾಡುತ್ತಿದ್ದರು. ಆದರೆ ಈ ದಾಂಪತ್ಯ ಸುಖವು ಚಿರಕಾಲವಿರಲಿಲ್ಲ. ವಿಚಿತ್ರವೀರ್ಯನಿಗೆ ಯೌವನ ದಶೆಯಲ್ಲಿಯೇ ಪ್ರಬಲ ರೋಗವು ಪ್ರಾಪ್ತ ವಾಯಿತು. ಭೀಷ್ಮನು ತಮ್ಮನ ರೋಗ ನಿವಾರಣೆಗಾಗಿ ತಕ್ಕ ಚಿಕಿತ್ಸೆಗಳನ್ನು ಮಾಡಿಸಿದನು. ವಿಚಕ್ಷಣರಾದ ವೈದ್ಯರು ತಮ್ಮ ಬುದ್ಧಿಯೆಲ್ಲವನ್ನೂ ವೆಚ್ಚಮಾಡಿ ಅನೇಕ ಪ್ರತೀಕಾರಗಳನ್ನು ಮಾಡಿ ದರು. ಆದರೂ ರೋಗವು ವಾಸಿಯಾಗಲಿಲ್ಲ. ವಿಚಿತ್ರವೀರ್ಯನು ದಿನ ದಿನಕ್ಕೆ ಸವೆಯುತ್ತ ಹೋದನು.

ವಿಚಿತ್ರವೀರ್ಯನು ವ್ಯಾಧಿಗ್ರಸ್ತನಾಗಿಯೂ, ಭೀಷ್ಮನು ನಿತ್ಯ ಬ್ರಹ್ಮಚಾರಿಯಾಗಿಯೂ ಇದ್ದುದರಿಂದ ಕುರುವಂಶಕ್ಕೆ ದುರ್ದಶೆಯು ಬಂದೊದಗಿತು. ನಿಪುಣರಾದ ವೈದ್ಯರ ಪ್ರಯತ್ನಗಳೆಲ್ಲವೂ ವಿಫಲ ವಾದುವು; ವಿಚಿತ್ರವೀರ್ಯನು ತರುಣ ವಯಸ್ಸಿನಲ್ಲಿಯೇ ಕಾಲಗ್ರಸ್ತ ನಾದನು. ಸತ್ಯವತಿಯು ಪುತ್ರಶೋಕದಿಂದ ಧೈರ್ಯಗೆಟ್ಟು ಪರಿತಾಪ ವಿಲಾಪಗಳಲ್ಲಿ ಮಗ್ನಳಾದಳು; ಅಂಬಿಕಾ ಅಂಬಾಲಿಕೆಯರು ಪತಿ ವಿಯೋಗದಿಂದ ಅನುಕ್ಷಣವೂ ಮರುಗುತ್ತಿದ್ದರು; ಭೀಷ್ಮನು ಭ್ರಾತೃ ಶೋಕದಿಂದ ಕಾತರನಾಗಿ ಕಣ್ಣೀರ ಸುರಿಸುತ್ತಿದ್ದನು. ಆಹ್ಲಾದ ದಿಂದಲೂ ಉತ್ಸವದಿಂದಲೂ ಮೆರೆಯುತ್ತಿದ್ದ ರಾಜ ಭವನಕ್ಕೆ ಈಗ ಶೋಕಾಂಧಕಾರವು ಕವಿಯಿತು.

ಸತ್ಯವತಿಯು ತನ್ನ ದುಸ್ಸಹ ವ್ಯಸನವನ್ನು ಕೂಡಿದ ವರೆಗೆ ಅಡಗಿಸಿಕೊಂಡು ಭೀಷ್ಮನ ಬಳಿಗೆ ಹೋಗಿ—" ವತ್ಸ! ಪಿಂಡೋದಕಗಳನ್ನು ಕೊಟ್ಟು ನಿಮ್ಮ ಪಿತೃ ದೇವತೆಗಳನ್ನು ತೃಪ್ತಿಗೊಳಿಸತಕ್ಕವರು ಸದ್ಯದಲ್ಲಿ ನಿನ್ನ ಹೊರತು ಯಾರೂ ಇಲ್ಲ. ಸೊಸೆಯರಿಗೆ ಸಂತಾನವಾಗುವ ಸಂಭವವೇನೋ ಇದೆ; ಆದರೆ ಗಂಡಾಗುವುದೋ ಹೆಣ್ಣಾಗುವುದೋ ಹೇಳಲಾಗದು. ಹೀಗಿರುವಲ್ಲಿ, ನೀನು ರಾಜ ಪದವಿಯನ್ನು ಸ್ವೀಕರಿಸುವುದು ನಿನ್ನ ಕರ್ತವ್ಯವಾಗಿರುವುದು. ನೀನು ಧರ್ಮ ತತ್ತ್ವದಲ್ಲಿ ಅಭಿಜ್ಞನು, ವೇದ ವೇದಾಂಗಗಳಲ್ಲಿ ಪಾರದರ್ಶಿ, ರಾಜನೀತಿಯಲ್ಲಿ ಕುಶಲನು, ನಿನಗೆ ಧರ್ಮದಲ್ಲಿ ನಿಷ್ಠೆಯು ಬಲವತ್ತಾಗಿರುವಂತೆಯೇ ಕುಲಾಚಾರದಲ್ಲಿ ಅಭಿಜ್ಞತೆಯೂ ದುಷ್ಕರ ಕಾರ್ಯಸಾಧನೆಯಲ್ಲಿ ಸಹಿಷ್ಣುತೆಯೂ ಇರುವುವು. ನೀನು ಮದುವೆ ಮಾಡಿಕೊಂಡು ಪಟ್ಟಾಭಿಷಿಕ್ತನಾಗು; ಇದು ನನ್ನ ಅಭೀಷ್ಟವು" ಎಂದಳು.

ಸತ್ಯವತಿಯ ಮಾತನ್ನು ಕೇಳಿ ಭೀಷ್ಮನು ಇಂತೆಂದನು :— "ತಾಯೇ! ನಾನು ರಾಜದಂಡವನ್ನು ಹಿಡಿಯೆನು, ಹೆಣ್ಣನ್ನು ಪರಿಗ್ರಹಿಸೆನು ಎಂದು ಮಾಡಿರುವ ಪ್ರತಿಜ್ಞೆಯನ್ನು ನೀನು ಕಾಣೆಯಾ? ನನ್ನ ಪೂರ್ವೋತ್ತರವನ್ನು ನೀನು ಬಲ್ಲೆ; ನಾನು ಮಾಡಿದ ಪ್ರತಿಜ್ಞೆಯನ್ನು ಜಡದೆ ಮನೋವಾಕ್ಕಾಯದಿಂದ ಪಾಲಿಸುವೆನು. ಪಿತೃದೇವನು ಸ್ವರ್ಗಾರೋಹಣ ಮಾಡುತ್ತಲೆ ನಿನ್ನ ಅನುಮತಿಯನ್ನು ಪಡೆದು ಚಿತ್ರಾಂಗದನಿಗೆ ಪಟ್ಟವನ್ನು ಕಟ್ಟಿದೆನು. ಚಿತ್ರಾಂಗದನು ಗಂಧರ್ವ ಯುದ್ಧದಲ್ಲಿ ಹತನಾಗಲು, ಅಪ್ರಾಪ್ತ ವಯಸ್ಕನಾದ ವಿಚಿತ್ರವೀರ್ಯನಿಗೆ ರಾಜಪದವಿಯನ್ನು ಕೊಟ್ಟೆನು. ನಾನು ಆ ಪದವಿಗೆ ಆಸೆಪಡಲಿಲ್ಲ. ವಿಚಿತ್ರವೀರ್ಯನು ಯೌವನ ದಶೆಗೆ ಬರುತ್ತಲೆ ಕಾಶಿಗೆ ಹೋಗಿ ಸ್ವಯಂವರಕ್ಕಾಗಿ ಬಂದಿದ್ದ ರಾಜರನ್ನು ಗೆದ್ದು ಕಾಶೀರಾಜನ ಮೂವರು ಕುಮಾರಿಯರನ್ನೂ ಕರೆತಂದೆನು; ಜ್ಯೇಷ್ಠ ಕುಮಾರಿಯನ್ನು ಅವಳ ಇಷ್ಟಾನುಸಾರವಾಗಿ ಹೋಗೆಂದು ಬಿಟ್ಟು ಉಳಿದಿಬ್ಬರನ್ನು ವಿಚಿತ್ರವೀರ್ಯನಿಗೆ ಮದುವೆ ಮಾಡಿದೆನು. ನಾನು ಮದುವೆಗೆ ಆಸೆಪಡಲಿಲ್ಲ, ನುಡಿದ ಪ್ರತಿಜ್ಞೆಯನ್ನು ಬಿಡಲಿಲ್ಲ. ಪ್ರತಿಜ್ಞಾ ಭಂಗಮಾಡಿದರೆ ಇಹದಲ್ಲಿ ಧರ್ಮಭ್ರಷ್ಟನಾಗಿ

ಪರದಲ್ಲಿ ನರಕ ಭಾಗಿಯಾಗುವೆನು. ನಾನು ವಿಲಾಸಿಯಲ್ಲ ; ಅಕಿಂಚಿತ್ಕರ ವಾದ ವಿಷಯಭೋಗದ ನಿಮಿತ್ತವಾಗಿ ಧರ್ಮಬಾಹಿರನಾಗಿ ಬಾಳು ವುದು ನನ್ನ ಸ್ವಭಾವವಲ್ಲ. ನಾನೆಂದಿಗೂ ಅದಕ್ಕೊಡಂಬಡೆನು. ತಂದೆಯ ಪ್ರೀತ್ಯರ್ಥವಾಗಿ ಭೀಷಣ ಪ್ರತಿಜ್ಞೆಯನ್ನು ಮಾಡಿ ಲೋಕದಲ್ಲಿ ದೇವ ವ್ರತನೆಂಬ ಹೆಸರಿಗೆ ಪ್ರತಿಯಾಗಿ ಭೀಷ್ಮನೆಂಬ ಹೆಸರಿನಿಂದ ಖ್ಯಾತನಾ ಗಿರುವೆನು. ಈಗ ಅಂತಹ ಪ್ರತಿಜ್ಞೆಯನ್ನುಲ್ಲಂಘಿಸಿದಲ್ಲಿ ನನ್ನ ಹೆಸರಿಗೆ ಕಳಂಕವು ಸ್ಪರ್ಶವಾಗುವುದು ; ನನ್ನ ಸ್ಥೈರ್ಯಕ್ಕೆ ಅಪಮಾನ ಬರುವುದು ; ನನ್ನ ಪಿತೃ ಭಕ್ತಿಯು ಕೆಟ್ಟು ಅಪಯಶಸ್ಸಿಗೆ ಎಡೆಯಾಗು ವುದು. ತಾಯೇ! ನಾನು ಇನ್ನೇನ ಹೇಳಲಿ, ತ್ರೈಲೋಕ್ಯಾಧಿಪತ್ಯ ವನ್ನಾದರೂ ತ್ಯಜಿಸಬಲ್ಲೆನು; ಇದಕ್ಕೂ ಅತಿಶಯವಾದ ಅಭೀಷ್ಟ ವಾವುದಾದರೂ ನನಗೆ ಇದ್ದಿದ್ದಲ್ಲಿ ಅದನ್ನು ಕೂಡ ತ್ಯಜಿಸಲು ಹಿಂಜರಿ ಯುತ್ತಿರಲಿಲ್ಲ. ಆದರೆ ಸತ್ಯವನ್ನು ಮಾತ್ರ ಎಂದಿಗೂ ಬಿಡಲಾರೆನು. ಧರ್ಮರಾಜನೊಂದು ವೇಳೆ ಧರ್ಮವನ್ನು ಬಿಡಬಹುದು ; ದೇವರಾಜ ನೊಂದು ವೇಳೆ ಪರಾಕ್ರಮವನ್ನು ಬಿಡಬಹುದು ; ಸೂರ್ಯನೊಂದು ವೇಳೆ ತನ್ನ ಪ್ರತಾಪವನ್ನು ಬಿಡಬಹುದು ; ಚಂದ್ರನೊಂದು ವೇಳೆ ತನ್ನ ಶೈತ್ಯವನ್ನು ಬಿಡಬಹುದು ; ಭೀಷ್ಮನು ಮಾತ್ರ ತನ್ನ ಸತ್ಯವನ್ನೆಂದಿಗೂ ಬಿಡನು.''

ಸತ್ಯ ಪಾಲನೆಯಲ್ಲಿ ಭೀಷ್ಮನ ದೃಢತೆಯನ್ನೂ ಭೋಗ ಸುಖದಲ್ಲಿ ಅವನ ನಿಸ್ಪೃಹತೆಯನ್ನೂ ರಾಜ್ಯಕಾರ್ಯಗಳಲ್ಲಿ ಅವನ ಪರಾರ್ಥಪರತೆ ಯನ್ನೂ ನೋಡಿ ಸತ್ಯವತಿಯು ಮೃದು ಮಧುರ ವಚನದಿಂದ ಇಂತೆಂ ದಳು:— ''ವತ್ಸ! ನಿನ್ನ ಮಾತನ್ನು ಕೇಳುತ್ತಲೆ ಶರೀರವು ಆಪ್ಯಾಯಿತ ವಾಗುವುದು, ಹೃದಯವು ಧರ್ಮಭಾವದಿಂದ ತುಂಬುವುದು, ಇಂದ್ರಿಯಗಳು ಪವಿತ್ರವಾಗಿ ಆನಂದ ರಸದಲ್ಲಿ ಮಗ್ನವಾಗುವುವು, ಅಂತಃಕರಣವು ವಿಷಯ ವಾಸನೆಯನ್ನೂ ಸ್ವಾರ್ಥ ಪರತೆಯನ್ನೂ ತೊರೆದು ಭೋಗಾಭಿಲಾಷ ಶೂನ್ಯವಾಗಿ ಪರಹಿತ ಸಾಧನೆಯಲ್ಲಿ ಲೀನವಾಗುವುದು. ನಿನ್ನ ಪಿತೃ ಭಕ್ತಿಯೂ, ಪ್ರತಿಜ್ಞಾ ಪಾಲನೆಯಲ್ಲಿ ನ್ನ ದೃಢತೆಯೂ ಅಮರಲೋಕದಲ್ಲಿಯೂ ಸ್ತುತಿಸತಕ್ಕುವಾಗಿರು

ವು. ನಾನು ನಿನ್ನ ಸ್ವಭಾವವನ್ನು ಬಲ್ಲೆನು. ನೀನು ಸತ್ಯ ಸಂಕಲ್ಪನು, ನುಡಿಯುವಂತೆ ನಡೆಯುವವನು ಎಂಬುದು ನನಗೆ ತಿಳಿಯದೆ ಇಲ್ಲ. ಆದರೆ ನಾನು ರಾಜಸಿಂಹಾಸನವು ಶೂನ್ಯವಾಗಿರುವುದನ್ನು ನೋಡಿ ಕುರುವಂಶ ನಷ್ಟವಾಗುವ ಹಾಗೆ ಆಯಿತಲ್ಲಾ ಎಂದು ಮರುಗುತ್ತಲೂ ಪ್ರಾಣಾಧಿಕನಾದ ವಿಚಿತ್ರವೀರ್ಯನ ವಿಯೋಗದಿಂದ ಎದೆಗುಂದಿಯೂ ಪೂರ್ವಾಪರವನ್ನು ವಿವೇಚನೆಮಾಡಲರಿಯದೆ ಹಾಗೆ ಮಾತನಾಡಿದೆನು. ಚಿತ್ರಾಂಗದನು ಹೋದ ಮೇಲೆ ನಾನು ವಿಚಿತ್ರವೀರ್ಯನ ಮುಖವನ್ನು ನೋಡಿಕೊಂಡು ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳುತ್ತ ಇದ್ದೆನು. ವಿಚಿತ್ರವೀರ್ಯನು ದೀರ್ಘಕಾಲ ರಾಜ್ಯವನ್ನಾಳಿ, ಯೋಗ್ಯನಾದ ಮಗನನ್ನು ಪಡೆದು, ಅವನಿಗೆ ಯುವರಾಜ ಪಟ್ಟವನ್ನು ಕಟ್ಟುವನೆಂದು ಹಾರೈಸುತ್ತಿದ್ದೆನು. ನಾನು ಪುತ್ರಪೌತ್ರರ ಕಣ್ಣ ಮುಂದೆ ಹೋಗಬೇಕೆಂದು ಆಸೆ ಪಟ್ಟಿದ್ದೆನು. ವಿಧಾತನು ನನ್ನ ಹಣೆಯಲ್ಲಿ ಆ ಸುಖವನ್ನು ಬರೆಯಲಿಲ್ಲ. ದುಸ್ಸಹವಾದ ಪತಿವಿಯೋಗ ದುಃಖವನ್ನು ಬಹುಕಾಲ ಅನುಭವಿಸಿದೆನು; ಈಗ ಪುತ್ರ ಶೋಕವನ್ನೂ ಅನಾಯಾಸವಾಗಿ ಅನುಭವಿಸುತ್ತಿದ್ದೇನೆ. ನನ್ನ ಹೃದಯವು ಪಾಷಾಣ ನಿರ್ಮಿತವಾದುದು. ಸಂದೇಹವಿಲ್ಲ. ಅಯ್ಯೋ! ನಾನು ಹೇಗೆ ಪ್ರಾಣವನ್ನಿಟ್ಟುಕೊಂಡಿರಲಿ! ಸೊಸೆಯರ ವೈಧವ್ಯ ದುಃಖವನ್ನು ಹೇಗೆ ತಾನೆ ನೋಡಿ ಸಹಿಸಲಿ! ಪತಿವಿಹೀನರಾಗಿ ಬ್ರಹ್ಮಚರ್ಯದ ಉಡುಗೆಯನ್ನುಟ್ಟಿರುವ ಸೊಸೆಯರನ್ನಿಟ್ಟುಕೊಂಡು ಈ ಶೂನ್ಯ ರಾಜ ಭವನದಲ್ಲಿ ನಾನು ಹೇಗೆ ಬಾಳಲಿ! ಇದಕ್ಕಿಂತ ಮೃತ್ಯುವು ಸಾವಿರ ಪಾಲು ಮೇಲಲ್ಲವೆ! ಈಗ ನಾನು ಕೇವಲ ದುಃಖ ಭಾರವನ್ನು ಹೊತ್ತಿರುವ ಸಲುವಾಗಿಯೇ ಬದುಕಿರಬೇಕಾಯಿತಲ್ಲವೆ! ಇಂತಹ ದುಃಖವು ಪೀಡಿಸಿದರೂ ನನ್ನ ಎದೆ ಒಡೆಯುವಲ್ಲ! ಅದು ಎಂತಹ ಕಲ್ಲೆದೆ!'' ಈ ಪ್ರಕಾರವಾಗಿ ಸತ್ಯವತಿಯು ಗೋಳಾಡಿದಳು.

ಭೀಷ್ಮನು ಸತ್ಯವತಿಯ ಪರಿತಾಪವನ್ನು ನೋಡಿ—''ತಾಯೇ! ಸಂಸಾರದಲ್ಲಿ ಯಾವುದೂ ಸ್ಥಿರವಲ್ಲ. ಜನ್ಮದ ಹಾಗೆಯೇ ಮೃತ್ಯುವೂ

ಕಾದಿರುವುದು. ಉತ್ಪತ್ತಿಯ ಹಿಂದೆಯೇ ವಿನಾಶವೂ, ಸಂಯೋಗದ ಹಿಂದೆಯೇ ವಿಯೋಗವೂ ಕಾದಿರುವುವು. ವಿಧಿಯ ನಿರ್ಬಂಧವನ್ನು ಖಂಡಿಸುವುದು ಯಾರಿಗೂ ಅಳವಲ್ಲ. ಯಾವುದು ಅನಿವಾರ್ಯವೊ ಅದನ್ನು ಕುರಿತು ದುಃಖಪಡುವುದು ಉಚಿತವಲ್ಲ. ನಾನು ನಿನ್ನ ಮಗನಲ್ಲವೆ? ಈ ನಿನ್ನ ಮಗನು ನಿನ್ನ ಸೇವೆಗಾಗಿಯೇ ಇರುವನು. ಈ ನಿನ್ನ ಆಜ್ಞಾಧಾರಕನು ಇರುವವರೆಗೂ ನಿನಗೆ ಯಾವ ವಿಧವಾದ ತೊಂದರೆಯೂ ಬಾರಲೀಯನು. ನಿನ್ನೀ ಪುತ್ರನ ಮುಖವನ್ನು ನೋಡಿ ಧೈರ್ಯವನ್ನು ತಂದುಕೊ. ರಾಜಸಿಂಹಾಸನವು ಆಪಾತತಃ ಶೂನ್ಯವಾಗಿದೆಯೇ ಹೊರತು ವಾಸ್ತವವಾಗಿ ಶೂನ್ಯವಾಗಿಲ್ಲವೆಂದು ತಿಳಿ. ನಾನಿರುವವರೆಗೂ ಈ ಸಿಂಹಾಸನಕ್ಕೆ ಅವಮಾನಮಾಡುವಂತಹ ಸಾಹಸಿಗಳಾರೂ ಇರರು; ಹಾಗೆಯೇ, ರಾಜ್ಯವು ಆಪಾತತಃ ಅರಾಜಕವಾಗಿದೆ ಎಂದು ತಿಳಿ; ನನ್ನ ಬಾಹುಬಲವೂ ಮಂತ್ರಣಾಕೌಶಲವೂ ಇರುವವರೆಗೆ ಯಾವ ವಿಧದಲ್ಲಿಯೂ ರಾಜ್ಯವು ವಿಶೃಂಖಲವಾಗಲಾರದು. ಜಗತ್ಪ್ರಸಿದ್ಧವಾದ ನಮ್ಮ ವಂಶವು ನಷ್ಟವಾಗುವುದೆಂಬ ಶಂಕೆಯೂ ಈ ವರೆಗೂ ನನ್ನ ಮನಸ್ಸಿನಲ್ಲಿ ಹುಟ್ಟಲಿಲ್ಲ. ಯಾವ ಪುರುಷರು ಆರ್ತರಕ್ಷಣೆಯಲ್ಲಿ ಉದ್ಯುಕ್ತರಾಗಿರುವರೋ, ಧರಿತ್ರಿಯ ಪಾಲನೆಯಲ್ಲಿ ನಿಯತ ಶ್ರಮಶೀಲರಾಗಿರುವರೋ, ನಿರಂತರದಲ್ಲಿಯೂ ಭೂಮಂಡಲದಲ್ಲಿ ಉತ್ಪಾತಗಳನ್ನು ನಿವಾರಿಸಿ ಶಾಂತಿಯನ್ನು ನೆಲೆಗೊಳಿಸುತ್ತಿರುವರೋ ಆ ಪುರುಷರನ್ನು ವಿಧಾತನ ವಿಶ್ವಪಾಲನ ಶಕ್ತಿಯು ರಕ್ಷಿಸುವುದು; ಅವರಿಗೆ ಬರುವ ಸರ್ವವಿಧ ವಿಪತ್ತುಗಳನ್ನೂ ತೊಲಗಿಸುವುದು. ವಿಚಿತ್ರವೀರ್ಯನ ಇಬ್ಬರು ಪತ್ನಿಯರಿಗೂ ಸಂತಾನವಾಗುವ ಸಂಭವವಿರುವಲ್ಲಿ, ನೀನು ಸ್ಥಿರಚಿತ್ತೆಯಾಗಿ ಶುಭೋದರ್ಕವನ್ನು ನಿರೀಕ್ಷಿಸುತ್ತಿರು; ಸೊಸೆಯರಿಗೆ ವಂಶಾನುರೂಪರಾದ ಪುತ್ರರಾಗುವಂತೆ ಮಂಗಳವಿಧಾತನಾದ ಈಶ್ವರನಲ್ಲಿ ಪ್ರಾರ್ಥಿಸು" ಎಂದು ನುಡಿದನು.

ಈ ರೀತಿಯಲ್ಲಿ ಭೀಷ್ಮನು ಪ್ರಬೋಧನ ವಾಕ್ಯದಿಂದ ಸತ್ಯವತಿಯ ಶೋಕವನ್ನು ಶಮನಮಾಡಿ, ಗರ್ಭವತಿಯರಾದ ವಿಚಿತ್ರವೀರ್ಯನ ಪತ್ನಿಯರ ಪ್ರಸವ ಕಾಲವನ್ನು ಇದಿರು ನೋಡುತ್ತಿದ್ದನು.

# ಐದನೆಯ ಅಧ್ಯಾಯ

## ಧೃತರಾಷ್ಟ್ರ, ಪಾಂಡು.

ಯಥಾ ಕಾಲಕ್ಕೆ ವಿಚಿತ್ರವೀರ್ಯನ ಪತ್ನಿಯರು ಒಬ್ಬೊಬ್ಬರು ಒಂದೊಂದು ಗಂಡು ಕೂಸನ್ನು ಹೆತ್ತರು. ಭೀಷ್ಮನು ಆ ಮಕ್ಕಳಿಗೆ ಶಾಸ್ತ್ರೋಕ್ತವಾಗಿ ಜಾತಕರ್ಮಾದಿಗಳನ್ನು ನಡೆಯಿಸಿದನು; ಅಂಬಿಕೆಯ ಮಗುವಿಗೆ ಧೃತರಾಷ್ಟ್ರನೆಂದೂ ಅಂಬಾಲಿಕೆಯ ಮಗುವಿಗೆ ಪಾಂಡುವೆಂದೂ ನಾಮಕರಣವಾಯಿತು. ದೈವವಶದಿಂದ ಧೃತರಾಷ್ಟ್ರನು ಜನ್ಮಾಂಧನಾಗಿದ್ದನು. ಭೀಷ್ಮನಂತೂ ಕುಮಾರರಿಬ್ಬರನ್ನೂ ನಿರ್ವಂಚನೆಯಾಗಿ ತನ್ನ ಮಕ್ಕಳಂತೆಯೇ ಸಾಕುತ್ತಿದ್ದನು. ಅವನು ವಿಚಿತ್ರವೀರ್ಯನಲ್ಲಿ ಯಾವ ಪ್ರೀತಿಯನ್ನಿಟ್ಟಿದ್ದನೋ ಈಗ ಅದೇ ಪ್ರೀತಿಯನ್ನು ಅವನ ಮಕ್ಕಳಿಬ್ಬರಲ್ಲಿಯೂ ಇಟ್ಟನು. ಧೃತರಾಷ್ಟ್ರನು ಜನ್ಮಾಂಧನಾದರೂ ಭೀಷ್ಮನು ಅವನಿಗೆ ರಾಜಕುಲೋಚಿತವಾದ ವಿದ್ಯಾಬುದ್ಧಿಯನ್ನು ಕಲಿಸುವುದರಲ್ಲಿ ಕಡಿಮೆ ಮಾಡಲಿಲ್ಲ. ಕುಮಾರರಿಬ್ಬರಿಗೂ ಸಕಾಲಕ್ಕೆ ಉಪನಯನವಾಯಿತು. ಭೀಷ್ಮನು ನೇಮಿಸಿದ ಅಧ್ಯಾಪಕರಲ್ಲಿ ಅವರಿಗೆ ಸಾಂಗವಾಗಿ ವೇದಾಧ್ಯಯನವೂ ನಡೆಯಿತು. ಅವರು ವೇದಶಾಸ್ತ್ರದಲ್ಲಿ ಪಾರದರ್ಶಿಗಳಾಗುತ್ತಲೆ ಅಸ್ತ್ರ ವಿದ್ಯೆಯನ್ನು ಕಲಿಯಲಾರಂಭಿಸಿದರು. ಭೀಷ್ಮನ ಅವಧಾನದಿಂದ ಅವರ ಅಸ್ತ್ರ ವಿದ್ಯಾಭ್ಯಾಸದಲ್ಲಿಯೂ ಯಾವ ಕೊರತೆಯೂ ಉಂಟಾಗಲಿಲ್ಲ. ಅವರು ಸ್ವಲ್ಪ ಕಾಲದಲ್ಲಿಯೇ ಧನುರ್ವೇದ, ಗದಾ ಯುದ್ಧ ಕ್ರಮ, ಕತ್ತಿಯ ಸಾಧನೆ ಮೊದಲಾದ ವಿದ್ಯೆಗಳಲ್ಲಿ ನಿಪುಣರಾದರು. ಇಬ್ಬರೊಳಗೆ ಪಾಂಡುವು ಬಿಲ್ಲ ವಿದ್ಯೆಯಲ್ಲಿ ಅದ್ವಿತೀಯನಾದನು; ಧೃತರಾಷ್ಟ್ರನು ಬಾಹು ಬಲದಲ್ಲಿ ನಿಸ್ಸೀಮನೆನಿಸಿಕೊಂಡನು.

ಕುಮಾರರಿಬ್ಬರೂ ನಾನಾ ವಿಷಯಗಳಲ್ಲಿ ಪಾರಂಗತರಾಗಲು, ಭೀಷ್ಮನ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಧೃತರಾಷ್ಟ್ರನು

ಕಣ್ಣಿಲ್ಲದವನಾದರೂ, ಪಾಂಡುವು ಇದ್ದುದರಿಂದ ಕುರುರಾಜ್ಯವು ದೀರ್ಘ ಕಾಲ ಅರಾಜಕವಾಗಿರಲಿಲ್ಲ; ಹಸ್ತಿನಾಪುರದ ಸಿಂಹಾಸನವೂ ದೀರ್ಘ ಕಾಲ ಶೂನ್ಯವಾಗಿರಲಿಲ್ಲ. ಭೀಷ್ಮನು ಸರ್ವ ಶಾಸ್ತ್ರ ಕೋವಿದನೂ ಧನುರ್ಧರ ಶ್ರೇಷ್ಠನೂ ಆದ ಪಾಂಡುವೇ ರಾಜ್ಯಭಾರವನ್ನು ವಹಿಸುವುದಕ್ಕೆ ಉಪಯುಕ್ತನಾದ ಪಾತ್ರನೆಂದು ಭಾವಿಸಿದನು. ಸತ್ಯವತಿಯೂ ಅವಳ ಸೊಸೆಯರಿಬ್ಬರೂ ಪಾಂಡುವಿನ ಯೋಗ್ಯತೆಯನ್ನು ನೋಡಿ ಹರ್ಷಚಿತ್ತರಾಗಿದ್ದರು. ಇನ್ನೊಮ್ಮೆ ರಾಜ್ಯವು ಆನಂದದಲ್ಲಿ ಮಗ್ನವಾಯಿತು; ಪುರವಾಸಿಗಳು ಇನ್ನೊಮ್ಮೆ ಉತ್ಸವದಲ್ಲಿ ಮತ್ತರಾದರು; ಹಸ್ತಿನಾಪುರವು ಇನ್ನೊಮ್ಮೆ ಅಭಿನವೋತ್ಸಾಹದಿಂದಲೂ ಅಭಿನವ ಶಕ್ತಿಯಿಂದಲೂ ಸಂಜೀವಿತವಾಯಿತು.

ಒಂದು ದಿನ ಮಹಾಮತಿಯಾದ ಭೀಷ್ಮನು ಪಾಂಡುವನ್ನು ತನ್ನ ಹತ್ತಿರ ಕರೆದು—"ವತ್ಸ! ದೈವ ವಶದಿಂದ ನಿಮ್ಮಣ್ಣನು ಜನ್ಮಾಂಧನಾಗಿರುವನು. ಆದುದರಿಂದ ನಮ್ಮ ಕುಲದಲ್ಲಿ ನೀನು ರಾಜ ಸಿಂಹಾಸನಕ್ಕೆ ಅಧಿಕಾರಿಯಾಗಿರುತ್ತೀಯೆ. ಈಗ ನೀನು ಕುರು ರಾಜ ಸಿಂಹಾಸನವನ್ನು ಏರಬೇಕಾಗುವುದು. ಅಂತಃಕರಣ ಶುದ್ಧಿಯಿಂದ ಪ್ರಜಾಪಾಲನೆ ಮಾಡುವುದು ನಮ್ಮ ಪವಿತ್ರ ಕುಲ ಧರ್ಮವು. ನ್ಯಾಯಪರತೆಯಿಂದಲೂ ವಿವೇಕ ಶಕ್ತಿಯಿಂದಲೂ ರಾಜ್ಯದಲ್ಲಿರುವ ಸಮಸ್ತ ಪ್ರಜೆಗಳ ಸುಖವನ್ನು ವೃದ್ಧಿಗೊಳಿಸುವ ನಿಮಿತ್ತವಾಗಿಯೇ ರಾಜನು ರಾಜದಂಡವನ್ನು ಹಿಡಿಯುವನು. ಪ್ರಜೆಗಳನ್ನು ಪೀಡಿಸಿ ದುರ್ದಶೆಗೆ ತಂದು ತನ್ನ ಭೋಗಾಭಿಲಾಷೆಯನ್ನು ತೃಪ್ತಿಗೊಳಿಸುವುದು ರಾಜನಿಗೆ ಯೋಗ್ಯವಲ್ಲ. ಅದರಿಂದ ರಾಜ ಶಕ್ತಿಗೆ ಅವಮಾನವನ್ನು ತಂದಂತಾಗುವುದು. ಐಶ್ವರ್ಯಾಭಿವೃದ್ಧಿಯಾದ ಮಾತ್ರಕ್ಕೇ ರಾಜನು ಶ್ರೇಷ್ಠನೆನಿಸಿಕೊಳ್ಳನು; ನಿಶ್ಚಲವಾದ ನ್ಯಾಯಪರತೆ, ಅವಿಚ್ಛಿನ್ನವಾದ ಅವಧಾನ, ಊರ್ಜಿತವಾದ ಕೀರ್ತಿ—ಇವುಗಳಿಂದ ರಾಜನು ಶ್ರೇಷ್ಠನೆನಿಸಿಕೊಳ್ಳುವನು. ಅನವರತವೂ ಅವನಿಗೆ ಆತ್ಮಸಂಯಮವೂ ಶಾಂತ ಭಾವನೂ ಇರುವುದು ಅತ್ಯಾವಶ್ಯಕ. ಅವನು ತನ್ನ ಬಾಹು ಬಲದಿಂದ ದೇಶಾಂತರದಲ್ಲಿ ಆಧಿಪತ್ಯವನ್ನು ಸ್ಥಾಪಿಸುತ್ತ, ಶತ್ರುಗಳ ಕಾಟವನ್ನು ತೊಲಗಿಸಿ

ತನ್ನ ರಾಜ್ಯವನ್ನು ರಕ್ಷಿಸುತ್ತಿರುವುದು ಹೇಗೆ ಅವನ ಧರ್ಮವೋ, ಹಾಗೆಯೇ ತನ್ನ ಉದಾರ ಭಾವದಿಂದ ಪ್ರಜೆಗಳ ಚರ್ಯವನ್ನು ತಿದ್ದುತ್ತ ನಿರಂತರವಾಗಿ ಅವರ ಸುಖವನ್ನು ವೃದ್ಧಿಗೊಳಿಸುವ ಪ್ರಯತ್ನವನ್ನು ಮಾಡುತ್ತಿರುವುದೂ ಅವನ ಧರ್ಮವಾಗಿರುವುದು. ಪ್ರಜಾರಂಜನವೇ ಅವನು ರಾಜಪದವಿಯನ್ನು ಕೈಕೊಳ್ಳುವುದರ ಉದ್ದೇಶವು. ಅವನು ಪ್ರಜಾರಂಜನದಲ್ಲಿ ಯತ್ನಶೀಲನಾಗಿರಬೇಕು; ಪ್ರಜಾರಂಜನ ನಿಮಿತ್ತವಾಗಿ ಆತ್ಮ ಸುಖವನ್ನೂ ಉಪೇಕ್ಷಿಸಬೇಕು. ಪ್ರಕೃತಿವರ್ಗವನ್ನು ಸುಖವಾಗಿಯೂ ನೆಮ್ಮದಿಯಾಗಿಯೂ ಇಡುವ ನಿಮಿತ್ತವಾಗಿಯೇ ವಿಧಾತನು ಅವನನ್ನು ಅಂತಹ ಉಚ್ಚಪದವಿಯಲ್ಲಿಟ್ಟಿರುವನು. ಅವನು ಪ್ರಕೃತಿ ವರ್ಗದ ಹಿತಾರ್ಥವಾಗಿ ಎಷ್ಟೆಷ್ಟು ಶ್ರಮಪಡುವನೋ ಅಷ್ಟಷ್ಟು ಅವನು ಸಿಂಹಾಸನಕ್ಕೆ ಯೋಗ್ಯನೆನಿಸಿಕೊಳ್ಳುವನು. ನೀನು ರಾಜ್ಯಭಾರವನ್ನು ವಹಿಸಿ ಧರ್ಮದಿಂದ ರಾಜ್ಯವನ್ನಾಳು. ಆತ್ಮ ಸುಖದ ಮೇಲೆ ದೃಷ್ಟಿಯಿಡದೆ ಪ್ರಜೆಗಳ ಸುಖವನ್ನು ವೃದ್ಧಿಗೊಳಿಸುವುದರಲ್ಲಿ ತತ್ಪರನಾಗು. ನಿನ್ನ ಕಾರ್ಯಗಳೆಲ್ಲವನ್ನೂ ಉತ್ಸಾಹ, ಅಧ್ಯವಸಾಯ, ಧೀಶಕ್ತಿ—ಇವುಗಳಿಂದ ನಿರ್ವಿಘ್ನವಾಗಿ ನೆರವೇರಿಸು. ನೀನು ಪ್ರಜೆಗಳ ಹಿತವನ್ನು ಸಾಧಿಸುವ ನಿಮಿತ್ತವಾಗಿ ಕರಗ್ರಹಣವನ್ನೂ, ಅವರ ಕ್ಷೇಮಾರ್ಥವಾಗಿ ದಂಡವಿಧಾನವನ್ನೂ ಮಾಡು. ಶರಣಾಗತರಲ್ಲಿಯೂ ದುರ್ಬಲರಲ್ಲಿಯೂ ನಿನ್ನ ಪ್ರತಾಪವನ್ನು ತೋರಿಸಬೇಡ; ಕ್ಷತ್ರಿಯ ಧರ್ಮಕ್ಕನುಸಾರವಾಗಿ ರಣದಲ್ಲಿ ಪರಾಕ್ರಮವನ್ನು ತೋರಿಸು. ಶತ್ರು ಸಂಹಾರದಲ್ಲಿ ಪರಾಕ್ರಮವನ್ನು ತೋರಿಸಬೇಕಾದರೂ ಮನಸ್ಸಿನಲ್ಲಿ ಆತ್ಮ ಸ್ತುತಿಗೆ ಎಡೆಗೊಡದಿರು. ಅನರ್ಥಕಾರಿಯಾದ ಅರಿಷಡ್ವರ್ಗವನ್ನು ಗೆದ್ದು ವಿಷಯ ಭೋಗಕ್ಕೆ ಪ್ರವರ್ತಿಸು. ನಿನ್ನ ರಾಜ್ಯದಲ್ಲಿ ಸ್ತ್ರೀಯರಿಗೆ ಸನ್ಮಾನವೂ, ವೃದ್ಧರಿಗೂ ಗುರುಜನಕ್ಕೂ ಆದರವೂ, ಪ್ರಾಜ್ಞರಿಗೆ ಮರ್ಯಾದೆಯೂ ಸಲ್ಲಲಿ. ನೀನು ಅಸಾಧಾರಣ ಶಕ್ತಿಸಂಪನ್ನನಾದರೂ ಕ್ಷಮೆಯನ್ನು ತೋರಿಸದಿರಬೇಡ. ನಿನ್ನ ಪ್ರಜೆಗಳು ಉಚ್ಛೃಂಖಲರಾಗಿ ಮೇರೆದಪ್ಪಿ ಕೆಟ್ಟ ಮಾರ್ಗಕ್ಕೆ ಬೀಳದಂತೆ ನೋಡಿಕೊ. ದೇವರಲ್ಲಿ ನಿಶ್ಚಲ ಭಕ್ತಿಯೂ

ಋಷಿಗಳಲ್ಲಿ ದೃಢ ವಿಶ್ವಾಸವೂ ಇದ್ದರೆ ಮನುಷ್ಯನು ಯಾವಾಗಲೂ ಸನ್ಮಾರ್ಗದಲ್ಲಿ ನಡೆಯುತ್ತ ಮಂಗಳವನ್ನೈದುವನು. ನೀನು ದೈವ ಭಕ್ತಿಯುಳ್ಳವನಾಗಿಯೂ ಋಷಿಗಳ ವಿಷಯದಲ್ಲಿ ಶ್ರದ್ಧಾವಂತ ನಾಗಿಯೂ ಇರು.''

ಭೀಷ್ಮನು ಈ ವಿಧವಾಗಿ ಪಾಂಡುವಿಗೆ ಹಿತೋಪದೇಶವನ್ನು ಮಾಡಿ ಪಟ್ಟಾಭಿಷೇಕಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಲಾರಂಭಿ ಸಿದನು.

ಅನಂತರ, ಶುಭ ದಿನ ಶುಭ ಮುಹೂರ್ತದಲ್ಲಿ, ತತ್ತ್ವದರ್ಶಿಗಳಾದ ಋಷಿಗಳನ್ನೂ ಪುರವಾಸಿಗಳನ್ನೂ ಜನಪದವರ್ಗವನ್ನೂ ಕರೆಯಿಸಿ, ಅವರ ಸಮಕ್ಷದಲ್ಲಿ ಪಾಂಡುವಿಗೆ ಪಟ್ಟವನ್ನು ಕಟ್ಟಿದನು. ಪಾಂಡುವು ರಾಜಪದವಿಯಲ್ಲಿ ಪ್ರತಿಷ್ಠಿತನಾಗಿ ಭೀಷ್ಮನ ಉಪದೇಶಾನುಸಾರವಾಗಿ ಪ್ರಜಾಪಾಲನೆ ಮಾಡತೊಡಗಿದನು. ಅವನ ಪ್ರಭುತ್ವದ ಪ್ರಭಾವ ದಿಂದ ಹಸ್ತಿನಾಪುರವು ಶ್ರೀಸಂಪನ್ನವಾಯಿತು ; ಜನಪದವೆಲ್ಲವೂ ಧನ ಧಾನ್ಯ ಸಮೃದ್ಧಿಯನ್ನು ಪಡೆಯಿತು ; ಪ್ರಜೆಗಳು ಸೌರಾಜ್ಯ ಸುಖ ದಿಂದ ತೃಪ್ತರಾಗಿದ್ದರು. ಭೀಷ್ಮನು ರಾಜ್ಯದಲ್ಲಿ ಸರ್ವತ್ರ ಶಾಂತಿಯು ನೆಲೆಯಾದುದನ್ನು ನೋಡಿ ಸಂತೋಷಪಟ್ಟನು. ಅವನು ಯಾವ ಉದ್ದೇಶದಿಂದ ಪಾಂಡುವನ್ನು ಸುಶಿಕ್ಷಿತನನ್ನಾಗಿ ಮಾಡಿದನೋ, ಯಾವ ಉದ್ದೇಶದಿಂದ ಅವನಿಗೆ ರಾಜನೀತಿಯನ್ನು ಬೋಧಿಸಿದನೋ, ಆ ಉದ್ದೇಶವು ಸರ್ವಾಂಶದಲ್ಲಿಯೂ ಸಫಲವಾಯಿತೆಂದು ಸುಪ್ರೀತ ನಾದನು.

ಒಮ್ಮೆ, ಭೀಷ್ಮನು ಅಂಬಿಕೆಯ ದಾಸಿಯ ಮಗನಾದ ವಿದುರ ನನ್ನು ಸಂಬೋಧಿಸಿ—''ವತ್ಸ ! ಪೂರ್ವದಲ್ಲಿ ಧರ್ಮಾತ್ಮರಾದ ರಾಜರು ರಕ್ಷಿಸಿದ ಈ ನಮ್ಮ ಕುಲವು ನಷ್ಟಪ್ರಾಯವಾಗುತ್ತಿದ್ದಿತು. ದೈವಾ ನುಗ್ರಹದಿಂದ ಕುಲ ತಂತುವು ಮತ್ತೆ ನೆಲೆಗೊಂಡಿತು. ಪಾಂಡುವು ಈಗ ಕಟ್ಟಲೆಯ ಪ್ರಕಾರವಾಗಿ ರಾಜ್ಯವನ್ನಾಳುತ್ತಿದ್ದಾನೆ. ಅವನ ಬಲ ವೀರ್ಯಗಳಿಂದ ಈ ರಾಜ್ಯವು ಸುರಕ್ಷಿತವಾಗಿರುವುದು. ಭೂಮಂಡಲದಲ್ಲಿ

ಸಮಸ್ತ ರಾಜ ಕುಲಗಳೊಳಗೆ ಧನ ಮಾನ ಪ್ರತಿಪತ್ತಿಗಳಲ್ಲಿ ನಮ್ಮ ಕುಲವು ಶ್ರೇಷ್ಠವಾಗಿರುವುದು. ಈಗ, ಕುಲಾನುರೂಪರಾದ ಕನ್ಯೆಯರನ್ನು ತಂದು ಧೃತರಾಷ್ಟ್ರನಿಗೂ ಪಾಂಡುವಿಗೂ ವಿವಾಹವನ್ನು ಮಾಡುವುದು ನನ್ನ ಕರ್ತವ್ಯವಾಗಿದೆ. ಗಾಂಧಾರ ರಾಜನಿಗೊಬ್ಬಳು ಸುಂದರಿಯಾದ ಮಗಳೂ, ಮದ್ರೇಶ್ವರನಿಗೊಬ್ಬಳು ರೂಪವತಿಯಾದ ತಂಗಿಯೂ ಇರುವರೆಂದು ಕೇಳಿರುವೆನು. ಆ ಕುಮಾರಿಯರು ನಮ್ಮ ವಂಶಕ್ಕನುರೂಪರಾದವರು. ರಾಜಕುಮಾರರಿಗೂ ಆ ಚೆಲ್ವೆಯರಿಗೂ ವಿವಾಹ ಸಂಬಂಧವನ್ನು ನಿಶ್ಚಯಿಸಬೇಕೆಂದಿದ್ದೇನೆ. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ? ಹೇಳು" ಎಂದನು.

ದಾಸೀ ಪುತ್ರನಾದರೂ ವಿದುರನು ಲೋಭ ಕ್ರೋಧ ವರ್ಜಿತನು, ಶಾಂತನು, ಧರ್ಮಾತ್ಮನು, ದೀರ್ಘ ದರ್ಶಿ; ಆದುದರಿಂದ, ಎಲ್ಲರೂ ಅವನನ್ನು ಅಂತರಂಗಾಲೋಚನೆಗೆ ಅಪೇಕ್ಷಿಸುತ್ತಿದ್ದರು; ಎಲ್ಲರೂ ಅವನಲ್ಲಿ ಶ್ರದ್ಧೆಯನ್ನಿಟ್ಟು ಅವನ ಬುದ್ಧಿವಾದವನ್ನು ಮನ್ನಿಸುತ್ತಿದ್ದರು. ಭೀಷ್ಮನಾಗಲಿ ಪಾಂಡುವಾಗಲಿ ವಿದುರನು ದಾಸೀ ಪುತ್ರನೆಂದು ಅವನನ್ನು ಉಪೇಕ್ಷೆಮಾಡುತ್ತಿರಲಿಲ್ಲ. ಅವರು ಅವನ ಬುದ್ಧಿ ಕೌಶಲವನ್ನೂ ನೀತಿ ಜ್ಞಾನವನ್ನೂ ಉದಾರ ಭಾವವನ್ನೂ ನೋಡಿ, ಅವನು ಕುರುವಂಶಕ್ಕೆ ಆಪ್ತ ಬಂಧು, ಹಿತೈಷಿ, ಸುಮಂತ್ರಿ ಎಂದು ಅವನಲ್ಲಿ ವಿಶ್ವಾಸವನ್ನಿಟ್ಟಿದ್ದರು. ಹೀಗೆ ಧರ್ಮಾನುರಕ್ತನಾದ ಈ ದಾಸೀ ಪುತ್ರನು ಕುರುವಂಶದಲ್ಲಿ ಎಲ್ಲರಿಗೂ ಶ್ರದ್ಧಾಸ್ಪದನಾಗಿದ್ದುದರಿಂದ ಆ ವಂಶದ ರಾಜನ್ಯರು ಅವನಲ್ಲಿ ಇಂತಹ ಪ್ರೀತಿಯನ್ನಿಟ್ಟಿದ್ದರು.

ವಿದುರನು ಭೀಷ್ಮನ ಮಾತನ್ನು ಕೇಳಿ ವಿನಯದಿಂದಿಂತೆಂದನು:— "ಆರ್ಯರೇ! ನಿಮ್ಮಾಜ್ಞೆಯನ್ನು ನಾನು ಶಿರಸಾವಹಿಸುವೆನು. ತಾಯಿಯೋಪಾದಿಯಲ್ಲಿ ತಾವು ನನ್ನನ್ನು ಸಾಕಿದಿರಿ, ತಂದೆಯೋಪಾದಿಯಲ್ಲಿ ನನಗೆ ಶಿಕ್ಷಣವನ್ನು ಕೊಟ್ಟಿರಿ, ಗುರುವಿನೋಪಾದಿಯಲ್ಲಿ ಸದುಪದೇಶವನ್ನು ಮಾಡಿ ಸನ್ಮಾರ್ಗವನ್ನು ತೋರಿಸುತ್ತಿರುವಿರಿ. ತಮ್ಮ ಪ್ರಭಾವದಿಂದ ಕುರುಕುಲದ ಗೌರವವು ಕುಂದದಿರುವುದು. ತಾವು ವಿಷಯ ಭೋಗದಲ್ಲಿ ಆಸಕ್ತರಲ್ಲವಾದರೂ ವಂಶ ಗೌರವವನ್ನು

ರಕ್ಷಿಸುವ ಸಲುವಾಗಿ ಲೌಕಿಕ ವ್ಯವಹಾರದಲ್ಲಿ ತೊಡರಿರುವಿರಿ; ದಾರ ಪರಿಗ್ರಹಕ್ಕೆ ವಿಮುಖರಾದರೂ ತಮ್ಮನ ಮದುವೆಗಾಗಿ ಪ್ರಯಾಸ ಪಟ್ಟಿರಿ; ರಾಜದಂಡವನ್ನು ತ್ಯಜಿಸಿದರೂ ರಾಜ್ಯದ ಮಂಗಳ ಸಾಧನಾರ್ಥ ವಾಗಿ ತಮ್ಮನಿಗೂ ತಮ್ಮನ ಮಕ್ಕಳಿಗೂ ನಾನಾ ವಿಧವಾದ ಸದುಪ ದೇಶವನ್ನು ಮಾಡಿ, ತಮ್ಮನ ಮಗನಿಗೆ ಪಟ್ಟವನ್ನು ಕಟ್ಟಿದಿರಿ. ಈಗ ರಾಜ ಕುಮಾರರಿಬ್ಬರಿಗೂ ಮದುವೆಮಾಡುವ ಪ್ರಯತ್ನದಲ್ಲಿದ್ದೀರಿ. ತಾವು ನಮಗೆ ತಂದೆ, ತಾಯಿ, ಪರಮ ಗುರು, ಇಷ್ಟದೇವತೆ. ಹೀಗಿರುವಲ್ಲಿ, ತಮಗೆ ನಾನು ಹೇಳತಕ್ಕುದೇನಿದೆ? ತಮ್ಮ ವಿವೇಚನೆಗೆ ಯಾವುದು ಶ್ರೇಯಸ್ಕರವೆಂದು ತೋರುವುದೊ ಅದನ್ನು ಮಾಡಬಹುದು.''

ಹೀಗೆಂದು ಹೇಳಿ ವಿದುರನು ಸುಮ್ಮನಾದನು. ಬಳಿಕ ಭೀಷ್ಮನು ಸತ್ಯವತಿಯ ಅನುಮತಿಯನ್ನು ಪಡೆದು ಗಾಂಧಾರ ರಾಜನ ಬಳಿಗೆ ದೂತನನ್ನು ಕಳುಹಿಸಿದನು. ಗಾಂಧಾರ ರಾಜನಾದ ಸುಶೀಲನು ಧೃತ ರಾಷ್ಟ್ರನು ಕುರುಡನೆಂದು ಕನ್ಯಾದಾನದ ವಿಷಯದಲ್ಲಿ ಮೊದಲು ದೋಲಾಯಮಾನನಾಗಿದ್ದನು; ತರುವಾಯ, ಕೌರವರ ಕುಲ ಖ್ಯಾತಿ ಸದಾಚಾರಗಳನ್ನು ಪರ್ಯಾಲೋಚಿಸಿ ಕನ್ಯಾರತ್ನವನ್ನು ಅವನಿಗೆ ಸಮ ರ್ಪಿಸಲೊಪ್ಪಿದನು. ಅವನು, ಬಂದ ದೂತನನ್ನು ಯಥೋಚಿತ ಸನ್ಮಾನ ಪೂರ್ವಕವಾಗಿ ಬೀಳ್ಕೊಟ್ಟು ಮಗಳ ಮದುವೆಗೆ ತಕ್ಕ ಪ್ರಯತ್ನಗಳನ್ನು ಮಾಡತೊಡಗಿದನು. ಕೂಡಲೆ ಮದುವೆಗೆಲ್ಲವೂ ಸಿದ್ಧವಾಯಿತು. ಗಾಂಧಾರ ರಾಜ ಕುಮಾರನಾದ ಶಕುನಿಯು ತಂದೆಯ ಆಜ್ಞೆಯ ಮೇರೆಗೆ ತಂಗಿಯನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹೋದನು. ಅಲ್ಲಿ ಆ ರಾಜಕುಮಾರನು ಶಾಸ್ತ್ರೋಕ್ತವಾಗಿ ಗಾಂಧಾರಿಯನ್ನು ಧೃತರಾಷ್ಟ್ರ ನಿಗೆ ಕೊಟ್ಟು ಭೀಷ್ಮನಿಂದ ಸತ್ಕಾರವನ್ನು ಕೈಕೊಂಡು ಮತ್ತೆ ತನ್ನ ರಾಜ್ಯಕ್ಕೆ ಪಯಣ ಮಾಡಿದನು. ಗಾಂಧಾರಿಯೂ ಲಾವಣ್ಯವತಿಯಾ ಗಿದ್ದಂತೆಯೇ ಪತಿ ಪ್ರಾಣೆಯಾಗಿಯೂ ಇದ್ದಳು. ನಿಶ್ಚಿತಾರ್ಥವಾದ ತರುವಾಯ ಧೃತರಾಷ್ಟ್ರನು ಅಂಧನೆಂದು ಅವಳಿಗೆ ತಿಳಿಯ ಬಂದಿತು. ಆಗ ಅವಳು ತನ್ನ ಭಾವಿ ಪತಿಯು ಅಂಧನಾದರೂ ತಾನು ಅವನನ್ನು ಎಂದಿಗೂ ತಿರಸ್ಕಾರಮಾಡೆನೆಂದು ಪ್ರತಿಜ್ಞೆಮಾಡಿ, ಪಾಣಿಗ್ರಹಣ

ವಾದಮೇಲೆ ತನ್ನ ಪ್ರತಿಜ್ಞೆಯಂತೆಯೇ ನಡೆದಳು. ಅವಳು ಶ್ರದ್ಧಾಭಕ್ತಿ ಪೂರ್ವಕವಾಗಿ ಅಂಧ ಪತಿಯ ಶುಶ್ರೂಷೆಯನ್ನು ಮಾಡತೊಡಗಿದಳು; ತನ್ನ ಸದಾಚಾರದಿಂದ ಹಿರಿಯರನ್ನು ಸಂತೋಷಪಡಿಸುತ್ತ ವಿನಯ ದಿಂದಲೂ ಶೀಲದಿಂದಲೂ ಸಕಲರ ಪ್ರೀತಿಗೂ ಪಾತ್ರಳಾದಳು. ಸ್ವಲ್ಪ ಕಾಲದಲ್ಲಿಯೇ, ಕುರುಕುಲದಲ್ಲಿ ಪತಿಪ್ರಾಣೆಯಾದ ಗಾಂಧಾರಿಯ ಕೀರ್ತಿಯು ಎಲ್ಲೆಲ್ಲಿಯೂ ಹರಡಿತು.

ಭೀಷ್ಮನ ಒಂದುದ್ದೇಶವು ನೆರವೇರಿತು. ಸತ್ಯವತಿಯು ಗುಣವತಿ ಯಾದ ಸೊಸೆ ಮನೆಗೆ ಬಂದಳೆಂದು ಸಂತೋಷಪಟ್ಟಳು. ಧೃತ ರಾಷ್ಟ್ರನು ಪತಿಪ್ರಾಣೆಯಾದ ಹೆಂಡತಿಯು ಕೈಹಿಡಿದೆನೆಂದು ಪ್ರೀತ ನಾದನು. ಕೌರವರು ಕುಲಕ್ಕೆ ಅನುರೂಪಳಾದ ಹೆಣ್ಣನ್ನು ತಂದನೆಂದು ಭೀಷ್ಮನನ್ನು ಕೊಂಡಾಡಿದರು. ಈ ತೆರದಿಂದ ಒಂದು ವಿಷಯದಲ್ಲಿ ಪೂರ್ಣಮನೋರಥನಾಗಿ ಭೀಷ್ಮನು ಮತ್ತೊಂದು ವಿಷಯವನ್ನಾಲೋ ಚಿಸತೊಡಗಿದನು. ಪಾಂಡುವಿನ ವಿವಾಹವು ಅವನ ಚಿಂತೆಗೆ ವಿಷಯ ವಾಯಿತು. ಆ ವೇಳೆಗೆ ಕುಂತಿಭೋಜನ ಮಗಳಾದ ಕುಂತಿಯ ಸ್ವಯಂವರಕ್ಕೆ ಸನ್ನಾಹಗಳು ನಡೆಯುತ್ತಿದ್ದುವು. ಯದುವಂಶೀಯ ನಾದ ಶೂರನೆಂಬ ರಾಜನಿಗೆ ಪೃಥೆಯೆಂಬ ಮಗಳಿದ್ದಳು. ಮಹಾ ಮತಿಯಾದ ಶೂರನು, ಮೊದಲು ವಾಗ್ದಾನ ಮಾಡಿದ್ದ ಮೇರೆಗೆ, ತನ್ನ ಮಗಳನ್ನು ಕುಂತಿಭೋಜನ ರಕ್ಷಣೆಯಲ್ಲಿಟ್ಟಿದ್ದನು. ಈ ರಾಜನು ಪೃಥೆ ಯನ್ನು ಸಾಕಿ ಸಲಹಿದನಾದ ಕಾರಣ ಆ ಹುಡುಗಿಗೆ ಕುಂತಿಯೆಂದು ಹೆಸರಾಯಿತು. ವಯೋವೃದ್ಧಿಯಾದ ಹಾಗೆಲ್ಲ ಕುಂತಿಯ ರೂಪ ಲಾವಣ್ಯವೂ ವೃದ್ಧಿಯಾಗುತ್ತ ಬಂದಿತು. ಸಾಕುಮಗಳು ಮದುವೆಗೆ ಈಡಾಗುತ್ತಲೆ ಕುಂತಿಭೋಜನು ಅವಳ ಸ್ವಯಂವರಕ್ಕೆ ಆಗಬೇಕಾದ ಕಾರ್ಯಗಳನ್ನು ಮಾಡತೊಡಗಿದನು; ದೇಶದೇಶದ ರಾಜರಿಗೆಲ್ಲ ಆಹ್ವಾನ ಪತ್ರಿಕೆಗಳನ್ನು ಕಳುಹಿಸಿದನು. ಸಕಾಲಕ್ಕೆ ಅನೇಕ ನರಪತಿಗಳು ರಾಜಧಾನಿಯಲ್ಲಿ ಬಂದಿಳಿದರು. ಇತ್ತ, ಭೀಷ್ಮನು ಪರಿಜನವನ್ನಿಟ್ಟು ಪಾಂಡುವನ್ನು ಸ್ವಯಂವರೋತ್ಸವಕ್ಕೆ ಕಳುಹಿಸಿಕೊಟ್ಟನು. ಆತನು ವಸ್ತ್ರಾಭರಣಗಳನ್ನು ಧರಿಸಿ ಸಭಾಮಂಟಪದಲ್ಲಿ ಸುಸಜ್ಜಿತರಾಗಿ ಕುಳಿತಿದ್ದ

ರಾಜರ ನಡುವೆ ಆಸನವನ್ನು ಪರಿಗ್ರಹಿಸಿದನು. ಸಭೆಯಲ್ಲಿದ್ದವರೆಲ್ಲರೂ ಪಾಂಡುವಿನ ಯೌವನ ಕಾಂತಿಯನ್ನು ನೋಡಿ ಮೋಹಗೊಂಡು, ಅವನ ಮೇಲೆ ಕಣ್ಣುಗಳನ್ನು ನಟ್ಟು ಚಿತ್ರಾರ್ಪಿತರಂತಿದ್ದರು. ನೆರೆದಿದ್ದ ರಾಜರು ಪಾಂಡುವಿನ ಸುಂದರಾಕೃತಿಯನ್ನು ನೋಡಿ ರೂಪ ಲಾವಣ್ಯಾವತಿಯಾದ ಕುಂತಿಯು ತಮಗೆ ಲಭಿಸುವಳೆಂಬ ಆಸೆಯನ್ನು ಬಿಡುತ್ತ ಬಂದರು.

ಸಭೆಯು ನೆರೆದಿರಲು, ಕುಂತಿಯು ಸಮಯೋಚಿತವಾದ ವಸ್ತ್ರಾಭರಣಗಳನ್ನು ಧರಿಸಿ ಕೈಯಲ್ಲಿ ವರಣಮಾಲೆಯನ್ನು ಹಿಡಿದು ಪ್ರತೀಹಾರಿಗಳ ಸಮೇತಳಾಗಿ ಸಭಾಮಂಟಪವನ್ನು ಹೊಕ್ಕಳು. ಆ ಕ್ಷಣವೇ ಲೋಕಾರಣ್ಯಮಯವಾಗಿದ್ದ ಸಭೆಯು ನಿಸ್ತಬ್ಧವಾಯಿತು; ಭೂಪತಿಗಳ ಕಣ್ಣುಗಳು ಅರಳಿದುವು, ಮುಖವು ಗಾಂಭೀರ್ಯವನ್ನು ತಾಳಿತು. ವಂದಿಗಳು ಒಬ್ಬೊಬ್ಬರಾಗಿ ತಂತಮ್ಮ ರಾಜರ ವಂಶವರ್ಣನೆ ಮಾಡಲು ಹೊರಟರು. ಕುಂತಿಯು, ಕುಳಿತಿದ್ದ ರಾಜಮಂಡಲಿಯ ಕಡೆಯೇ ಕಣ್ಣಿಟ್ಟು ನೋಡುತ್ತ ಪಾಂಡುವಿನ ಸಮೀಪಕ್ಕೆ ಬಂದು ನಿಂತಳು; ನವ ಯೌವನ ಸಂಪನ್ನನಾದ ಕುರುರಾಜ ಕುಮಾರನ ವಿಕಸಿತ ಮುಖ ಕಮಲವನ್ನೂ, ವಿಶಾಲ ವಕ್ಷಸ್ಸ್ಥಲವನ್ನೂ, ಆಕರ್ಣ ವಿಸ್ತೃತ ನೇತ್ರಗಳನ್ನೂ, ಲೋಕಾತೀತವಾದ ಆ ಸುಂದರ ಮೂರ್ತಿಯನ್ನೂ ನೋಡಿ ಆಹ್ಲಾದಪಟ್ಟಳು; ಮಹಾರಾಜ ಪಾಂಡುವಿಗೇ ವರಣಮಾಲೆಯನ್ನರ್ಪಿಸುವೆನೆಂದು ಮನಸ್ಸಿನಲ್ಲೆಣಿಸಿಕೊಂಡಳು. ಬೇರೆ ಯಾವ ನರಪತಿಯ ಕಡೆಯೂ ಕಣ್ಣು ಹಾಕದೆ ಕುರುರಾಜನ ಹತ್ತಿರಕ್ಕೆ ಬಂದು ಲಜ್ಜೆಯಿಂದ ತಲೆಬಾಗಿ, ತನ್ನ ಕಮನೀಯ ಕರಪಲ್ಲವದಲ್ಲಿದ್ದ ಮಾಲ್ಯವನ್ನು ಅವನ ಕೊರಳಿಗೆ ಸಮರ್ಪಿಸಿದಳು. ಆ ಮಂಗಳ ಪುಷ್ಪಮಾಲೆಯು ಕುರುರಾಜನ ವಿಶಾಲ ವಕ್ಷಸ್ಸ್ಥಲವನ್ನು ಅಲಂಕರಿಸಿ, ಅವನ ದೇಹ ಕಾಂತಿಯನ್ನು ಇಮ್ಮಡಿಸಿತು. ಇತ್ತ, ಅವನ ಸಹಚರರು ತಮ್ಮ ಆಹ್ಲಾದವನ್ನು ಪ್ರಕಾಶಗೊಳಿಸಿದರು. ವಾದ್ಯದವರು ಉತ್ಸಾಹದಿಂದ ಮಂಗಳ ವಾದ್ಯವನ್ನು ಮಾಡಲಾರಂಭಿಸಿದರು. ಕುಂತಿಭೋಜನು ತನ್ನ ಮಗಳಿಗೆ ಅನುರೂಪನಾದ ವರನು ಲಭಿಸಿದನೆಂದು ಸಂತುಷ್ಟನಾದನು.

ಪುರವಾಸಿಗಳು ಬಗೆ ಬಗೆಯಾಗಿ ತಮ್ಮ ಸಂತೋಷವನ್ನು ತೋರಿಸಿದರು. ಉಳಿದ ರಾಜರು, ಹತಾಶರೂ ವಿಷಣ್ಣ ಹೃದಯರೂ ಆಗಿ, ತಂತಮ್ಮ ರಾಜ್ಯಕ್ಕೆ ಹಿಂದಿರುಗಿದರು.

ಕುಂತಿಭೋಜನು ಆನಂದ ಭರಿತನಾಗಿ ವಧೂವರರನ್ನು ಸಭಾ ಮಂಟಪದಿಂದ ಮನೆಯೊಳಗೆ ಕರೆದುಕೊಂಡು ಹೋದನು. ಅಲ್ಲಿ ವೇದೋಕ್ತವಾಗಿ ವಿವಾಹವು ನಡೆಯಿತು. ತರುವಾಯ, ಬಹು ಮೂಲ್ಯವುಳ್ಳ ಬಳುವಳಿಯನ್ನು ಕೊಟ್ಟು ಮಗಳನ್ನೂ ಅಳಿಯನನ್ನೂ ಆತನು ಹಸ್ತಿನಾಪುರಕ್ಕೆ ಕಳುಹಿಸಿಕೊಟ್ಟನು.

ಪಾಂಡುವು ಸ್ವಯಂವರ ಸಭೆಗೆ ಬಂದಿದ್ದ ರಾಜರೆಲ್ಲರಲ್ಲಿಯೂ ಪ್ರಧಾನನೆನಿಸಿ ಭಾಗ್ಯಲಕ್ಷ್ಮೀ ಸ್ವರೂಪೆಯಾದ ಪತ್ನಿಯನ್ನು ಕರೆದು ಕೊಂಡು ರಾಜಧಾನಿಗೆ ಹೊರಟನು. ಆ ಸುದ್ದಿಯನ್ನು ಕೇಳಿ ಭೀಷ್ಮನು ಅತ್ಯಂತ ಸಂತೋಷಪಟ್ಟು ನವ ದಂಪತಿಗಳು ಬರುತ್ತಲೆ ಯಥೋ ಚಿತವಾದ ಆದರದೊಡನೆ ಅವರನ್ನು ಅರಮನೆಗೆ ಕರೆದುಕೊಂಡು ಹೋದನು. ಧೃತರಾಷ್ಟ್ರನು ಅನುವಾದ ಹೆಂಡತಿಯನ್ನು ಪಡೆದಂತೆಯೇ ಪಾಂಡುವೂ ತನಗನುರೂಪಳಾದ ಹೆಂಡತಿಯನ್ನು ಪಡೆದನೆಂದು ಸತ್ಯವತಿಯೂ ಅಂಬಿಕೆಯೂ ಪರಿತುಷ್ಟರಾದರು. ಸರ್ವ ಗುಣ ಸಂಪನ್ನೆ ಯಾದ ಸೊಸೆಯು ಮನೆಗೆ ಬಂದಳೆಂದು ಅಂಬಾಲಿಕೆಯು ತನ್ನ ಆಹ್ಲಾದವನ್ನು ಪ್ರಕಾಶಗೊಳಿಸಿದಳು. ಪುರವಾಸಿಗಳು ಅಭಿನವ ವಧು ವನ್ನು ಕೊಂಡಾಡುತ್ತ ಅಂಬಾಲಿಕೆಯ ಆಹ್ಲಾದವನ್ನು ವೃದ್ಧಿಗೊಳಿಸಿ ದರು. ರಾಜ ಭವನವು ಉತ್ಸವೋಚಿತ ಶೃಂಗಾರದಿಂದ ಮೆರೆ ಯಿತು. ನಗರವಾಸಿಗಳು ನಗರವನ್ನು ಶೃಂಗರಿಸಿದರು. ಅವರವರ ಮನೆಗಳ ಮುಂದೆ ಕಟ್ಟಿದ್ದ ಮಾವಿನ ತೋರಣಗಳಿಂದಲೂ, ನಟ್ಟಿದ್ದ ಬಾಳೆಯ ಕಂಬಗಳಿಂದಲೂ ಪತಾಕೆಗಳಿಂದಲೂ, ಅಲ್ಲಲ್ಲಿಟ್ಟಿದ್ದ ಪೂರ್ಣ ಕಲಶಗಳಿಂದಲೂ ಹಸ್ತಿನಾಪುರವು ಶೋಭಾಯಮಾನವಾಯಿತು. ಊರೂರುಗಳಲ್ಲಿಯೂ ಈ ವಿಧವಾದ ಆಮೋದವು ಕಣ್ಗೊಳಿಸಿತು; ಪಾಂಡುವಿನ ವಿವಾಹೋತ್ಸವದಲ್ಲಿ ಪುರವಾಸಿಗಳೂ ಜನಪದ ವಾಸಿ ಗಳೂ ಸಮವಾಗಿ ಆನಂದಪಟ್ಟರು.

ಕೆಲ ದಿನಗಳಾಗುತ್ತಲೆ ಭೀಷ್ಮನು ಪಾಂಡುವಿಗೆ ಇನ್ನೊಂದು ವಿವಾಹವನ್ನು ಮಾಡಲಿಚ್ಛಿಸಿದನು. ಮದ್ರದೇಶದ ರಾಜನ ತಂಗಿ ಬಲು ಚೆಲ್ವೆಯಾಗಿದ್ದಳು. ಭೀಷ್ಮನು ಪಾಂಡುವಿಗೆ ಆ ಚೆಲ್ವೆಯನ್ನು ತಂದು ಮದುವೆಮಾಡಲು ಮೊದಲೇ ಸಂಕಲ್ಪಮಾಡಿದ್ದನು. ಈಗ ಆ ಸಂಕಲ್ಪ ಸಿದ್ಧಿಗಾಗಿ ಅವನು ಮಂತ್ರಿಗಳು ಮುನಿಗಳು ಬ್ರಾಹ್ಮಣರು—ಇವ ರೊಡನೆ ಮದ್ರದೇಶಕ್ಕೆ ಹೊರಟನು. ಮದ್ರರಾಜನಾದ ಶಲ್ಯನು ಭೀಷ್ಮನ ಆಗಮನ ವಾರ್ತೆಯನ್ನು ಕೇಳುತ್ತಲೆ ತ್ವರೆಯಾಗಿ ಹೋಗಿ ಅವನನ್ನು ಇದಿರ್ಗೊಂಡು ಆದರಪೂರ್ವಕವಾಗಿ ಮನೆಗೆ ಕರೆದು ಕೊಂಡು ಹೋದನು. ಶಿಷ್ಟಾಚಾರವನ್ನನುಸರಿಸಿ ಶಲ್ಯರಾಜನು ಭೀಷ್ಮನಿಗೆ ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಕುಳ್ಳಿರಿಸಿ, ಭೀಷ್ಮನು ಬಂದ ಕಾರ್ಯವನ್ನು ವಿನಯಪೂರ್ವಕವಾಗಿ ವಿಚಾರ ಮಾಡಿದನು.

ಶಲ್ಯನ ಸತ್ಕಾರವನ್ನು ಸ್ವೀಕರಿಸಿ ಸರ್ವರೂ ತಂತಮ್ಮ ಆಸನ ಗಳನ್ನು ಪರಿಗ್ರಹಿಸುತ್ತಲೆ, ಭೀಷ್ಮನು ಇಂತೆಂದನು:—"ರಾಜರೇ! ನಾನು ಕನ್ಯಾರ್ಥಿಯಾಗಿ ಬಂದಿರುವೆನು. ನಿಮ್ಮ ತಂಗಿಯಾದ ಮಾದ್ರಿ ದೇವಿಯು ಮದುವೆಗೆ ಸಿದ್ಧಳಾಗಿರುವಳೆಂದು ನಾನು ಕೇಳಿಬಲ್ಲೆನು. ನನ್ನ ತಮ್ಮನ ಮಗ ಪಾಂಡುವಿಗೆ ಆ ಕುಮಾರಿಯನ್ನು ಕೊಡ ಬೇಕೆಂಬುದೇ ನನ್ನ ಪ್ರಾರ್ಥನೆ. ವಿವಾಹಸಂಬಂಧವನ್ನು ಬೆಳೆಯಿಸಲು ನೀವು ನಮಗೆ ತಕ್ಕವರು. ನಿಮ್ಮ ವಂಶವೂ ನಮ್ಮ ವಂಶವೂ ಸಮನಾಗಿ ಪವಿತ್ರವಾದುವು; ಗುಣದಲ್ಲಿಯೂ ಪರಸ್ಪರವಾಗಿ ಅನುರೂಪವಾದುವು. ನಮ್ಮ ಪಾಂಡುವಿಗೆ ನಿಮ್ಮ ತಂಗಿಯನ್ನು ದಾನಮಾಡಿ ನಮ್ಮ ಸಂಬಂಧ ಮಾಡುವಿರಾದರೆ ನಾನು ಪರಮ ಸುಖಿಯೆಂದೆಣಿಸುವೆನು."

ಶಲ್ಯನು ಸಂತೋಷದಿಂದ ಭೀಷ್ಮನ ಪ್ರಸ್ತಾವಕ್ಕೊಡಂಬಟ್ಟು ತಂಗಿಯನ್ನು ಅವನ ಕೈಗೊಪ್ಪಿಸಿದನು. ಭೀಷ್ಮನೂ ಶಲ್ಯನಿಗೆ ಉಪ ಹಾರ ರೂಪವಾಗಿ ಆನೆ ಕುದುರೆಗಳನ್ನೂ ಮುತ್ತು ರತ್ನಗಳನ್ನೂ ಕೊಟ್ಟು ಮಾದ್ರಿದೇವಿಯನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಹಿಂದಿರುಗಿ ದನು.

ಅನಂತರದಲ್ಲಿ ಭೀಷ್ಮನು ದೈವಜ್ಞ ಬ್ರಾಹ್ಮಣರ ಮತ್ತು ಸತ್ಯವತಿ ಪ್ರಭೃತಿಗಳ ಮತಾನುಸಾರವಾಗಿ ಶುಭ ದಿನವನ್ನು ಗೊತ್ತುಮಾಡಿ ಆ ಶುಭ ದಿನದಲ್ಲಿ ಪಾಂಡುವಿನ ಪರಿಣಯೋತ್ಸವವನ್ನು ಸಾಂಗವಾಗಿ ನೆರವೇರಿಸಿದನು; ಪಾಣಿಗ್ರಹಣವಾದ ತರುವಾಯ ಮಾದ್ರಿದೇವಿಯ ವಾಸಕ್ಕೆ ಸುರಮ್ಯವಾದ ಅಂತಃಪುರವನ್ನು ಗೊತ್ತುಮಾಡಿದನು. ಕುಂತಿಭೋಜನ ಮಗಳಿಗೆ ವಿವಾಹವಾದ ಸಮಯದಲ್ಲಿ ನಡೆದಂತೆಯೇ ಈ ವಿವಾಹದಲ್ಲಿಯೂ ಉತ್ಸವವು ಸಂಭ್ರಮವಾಗಿ ನಡೆಯಿತು. ಕುಂತಿಯೂ ಮಾದ್ರಿಯೂ ಸವತಿಯರಾದರೂ ಅತ್ಯಲ್ಪ ಕಾಲದಲ್ಲಿಯೇ ಇಬ್ಬರಿಗೂ ಅಕೃತ್ರಿಮ ಪ್ರೀತಿಯು ಹುಟ್ಟಿತು. ಇಬ್ಬರೂ ಸಾಪತ್ನ್ಯ ದೋಷಗಳನ್ನು ಕಳೆದು ಕಾಯ ಮನೋವಾಕ್ಯಗಳಿಂದ ಪತಿ ಸೇವೆಯನ್ನು ಮಾಡುತ್ತಿದ್ದರು. ಮಹಾರಾಜ ಪಾಂಡುವು ಪರಸ್ಪರ ಸ್ನೇಹಬದ್ಧ ರಾದ ಪತ್ನಿಯರು ಮಾಡುತ್ತಿದ್ದ ಶುಶ್ರೂಷೆಯಿಂದ ಪ್ರೀತನಾಗಿ ರಾಜ್ಯ ಕಾರ್ಯಗಳನ್ನು ತಾನೇ ಮಾಡಲಾರಂಭಿಸಿದನು.

ಈ ತೆರದಲ್ಲಿ ಧೃತರಾಷ್ಟ್ರ ಪಾಂಡುರಾಯರಿಬ್ಬರಿಗೂ ವಿವಾಹವು ನಡೆಯಿತು. ಸಮದರ್ಶಿ ಭೀಷ್ಮನ ದೆಸೆಯಿಂದ ಯಾರ ಮನಸ್ಸಿಗೂ ಯಾವ ವಿಧವಾದ ಕೊರತೆಯೂ ಉಂಟಾಗಲಿಲ್ಲ. ಧೃತರಾಷ್ಟ್ರನು ಪತಿ ಪ್ರಾಣೆಯಾದ ಗಾಂಧಾರಿಯ ಶುಶ್ರೂಷೆಯಿಂದ ಸಂತೋಷಪಡು ತ್ತಿದ್ದಂತೆಯೇ ಪಾಂಡುವು ಕುಲಾನುರೂಪರಾದ ಸತಿಯರೊಡಗೂಡಿ ಸುಖದಿಂದಿದ್ದನು. ಧೃತರಾಷ್ಟ್ರನು ಅಂಧನಾದರೂ, ಭೀಷ್ಮನು ಅವ ನನ್ನು ಚಕ್ಷುಷ್ಮಂತನೂ ರೂಪವಂತನೂ ಆಗಿದ್ದಂತೆಯೇ ಲಕ್ಷ್ಯವಿಟ್ಟು ಕಾಣುತ್ತಿದ್ದನು. ಅವನು ಉಭಯ ಭ್ರಾತೃಗಳನ್ನೂ ಸಮನಾಗಿ ಕಾಣುತ್ತ, ಇಬ್ಬರನ್ನೂ ಸಮನಾಗಿ ಪ್ರೀತಿಸುತ್ತ, ಇಬ್ಬರ ಹಿತವನ್ನೂ ಸಮನಾಗಿ ಪ್ರಯಾಸಪಟ್ಟು ಸಾಧಿಸುತ್ತಿದ್ದನು. ಕುಲ ಗೌರವ ದಲ್ಲಿಯೇ ಆಗಲಿ, ಆಚಾರದಲ್ಲಿಯೇ ಆಗಲಿ, ರೂಪಿನಲ್ಲಿಯೇ ಆಗಲಿ, ಧೃತರಾಷ್ಟ್ರ ಪಾಂಡುರಾಯರ ಪತ್ನಿಯರಿಗೆ ವೈಷಮ್ಯವಿರಲಿಲ್ಲ. ಅಂತು, ಭೀಷ್ಮನ ಸದ್ವ್ಯವಹಾರದಿಂದ ಧೃತರಾಷ್ಟ್ರನೂ ಪಾಂಡುವೂ ಅನ್ಯೋನ್ಯ ಭ್ರಾತೃ ಭಾವದಿಂದ ಸುಖವಾಗಿರುತ್ತಿದ್ದರು.

ಧೃತರಾಷ್ಟ್ರ ಪಾಂಡುರಾಯರ ವಿವಾಹವಾದ ಕೂಡಲೆ ಭೀಷ್ಮನು ವಿದುರನ ಪರಿಣಯವನ್ನು ಮಾಡಲುದ್ಯುಕ್ತನಾದನು. ಈ ಕಾರ್ಯದಲ್ಲಿಯೂ ಭೀಷ್ಮನು ತನ್ನ ಉದಾರ ಗುಣವನ್ನೂ ಪ್ರೀತಿಯನ್ನೂ ತೋರಿಸದೆಹೋಗಲಿಲ್ಲ. ವಿದುರನು ದಾಸಿಯ ಮಗನಾದರೂ ಭೀಷ್ಮನು ಅವನನ್ನು ದಾಸನಂತೆ ಹೀನವಾಗಿ ಕಾಣುತ್ತಿರಲಿಲ್ಲ; ಧೃತರಾಷ್ಟ್ರ ಪಾಂಡುರಾಯರನ್ನು ಕಾಣುತ್ತಿದ್ದಂತೆಯೇ ಅವನನ್ನೂ ಕಾಣುತ್ತಿದ್ದನು. ವಿದುರನು ಹೇಗೆ ಧರ್ಮಿಷ್ಠನಾಗಿ, ಪ್ರಶಾಂತ ಚಿತ್ತನಾಗಿ, ಆದುದರಿಂದಲೇ ಸೌಮ್ಯಮೂರ್ತಿಯಾಗಿ, ಸರ್ವ ಜನ ಪ್ರಿಯನಾಗಿದ್ದನೋ, ಹಾಗೆಯೇ, ಧರ್ಮದಲ್ಲಿ ಅನುರಾಗವುಳ್ಳವಳಾಗಿ, ಲಕ್ಷಣವಂತೆಯಾಗಿ, ಸುಂದರಿಯಾಗಿ ಅವನಿಗೆ ಅನುರೂಪಳಾಗಿರುವ ಹೆಣ್ಣನ್ನು ಭೀಷ್ಮನು ತಂದು ಅವನಿಗೆ ಮದುವೆಮಾಡಿದನು.

ಋತು ಪರ್ಯಾಯ ಕ್ರಮದಲ್ಲಿ ಶರತ್ಕಾಲವು ಹುಟ್ಟಿತು. ಮುಗಿಲುಗಳು ತೇಲಿಹೋದುವು, ದಿಕ್ಕುಗಳು ನಿರ್ಮಲವಾದುವು, ಸೂರ್ಯ ರಶ್ಮಿಯು ಪ್ರಖರವಾಯಿತು, ಚಂದ್ರನ ಶುಭ್ರ ಕಿರಣ ಜಾಲವು ಬೆಳಗಿತು, ಅರಳಿದ ಕಮಲ ದಳಗಳಿಂದ ಸರೋವರಗಳು ಶೋಭಾಯಮಾನವಾದುವು. ಸರೋವರಗಳಲ್ಲಿ ಮಂದಮಾರುತದಿಂದ ಸಂಚಾಲಿತವಾದ ತರಂಗಾವಳಿಗಳ ಕೂಡೆ ಹಂಸ ಪಕ್ಷಿಗಳು ಸುವ್ಯಾಮನದಿಂದ ಕುಣಿದಾಡಲಾರಂಭಿಸಿದುವು. ದಾರಿಗಳಲ್ಲಿ ಕೆಸರಿಲ್ಲವಾಯಿತು, ನದಿಗಳ ರಭಸವಡಗಿತು, ಮಾರ್ಗಗಳು ಸುಗಮವಾದುವು, ಭೂಮಿಯು ಪೈರುಗಳಿಂದ ಸೊಂಪೇರಿತು, ಕೃಷಿಕರ ಹೃದಯದಲ್ಲಿ ಆಸೆಯೂ ಉತ್ಸಾಹವೂ ಹುಟ್ಟಿದುವು, ಗಾಳಿಯ ಸ್ಪರ್ಶವು ಆಪ್ಯಾಯಮಾನವಾಯಿತು, ರಾತ್ರಿ ನೀಲ ಗಗನದಲ್ಲಿ ನಕ್ಷತ್ರಗಳು ಹೊಳೆಯಲಾರಂಭಿಸಿದುವು.

ಶರತ್ಕಾಲವು ಅಡಿಯಿಡುತ್ತಲೆ ಪಾಂಡುವು ದಿಗ್ವಿಜಯಕ್ಕೆ ಹೊರಡಲುದ್ಯುಕ್ತನಾಗಿ, ಭೀಷ್ಮನಿಗೆ ತನ್ನ ಅಭಿಪ್ರಾಯವನ್ನು ತಿಳಿಸಲು, ಅವನು ಸಂತೋಷಪಟ್ಟು ಅದನ್ನು ಅನುಮೋದಿಸಿದನು. ಕೂಡಲೆ ಮಾಂಡಲಿಕರೂ ಸಾಮಂತರೂ ತಂತಮ್ಮ ಬಲ ಸಮೇತರಾಗಿ ರಾಜಧಾನಿಗೆ ಬಂದಿಳಿದರು. ಚತುರಂಗ ಬಲವು ಚಿತ್ರ ವಿಚಿತ್ರವಾಗಿ

ಸಜ್ಜಿತವಾಯಿತು. ಪಾಂಡುವು ತನ್ನ ಅಧಿಕಾರವನ್ನು ಸ್ಥಿರಪಡಿಸಿ ಕೊಂಡು ಸೈನಿಕರಿಗೆ ಮುಂದಾಗಿಯೇ ಸಂಬಳವನ್ನು ಕೊಟ್ಟು ಅವರನ್ನು ತನ್ನ ವಶವರ್ತಿಗಳನ್ನಾಗಿ ಮಾಡಿಕೊಂಡಿದ್ದನು. ಈಗ, ಅವನು ಭೀಷ್ಮ ಧೃತರಾಷ್ಟ್ರರಿಗೂ, ಸತ್ಯವತಿ ಪ್ರಭೃತಿ ಮಾತೃದೇವಿಯರಿಗೂ ನಮಸ್ಕಾರವನ್ನು ಮಾಡಿ ಅವರ ಹರಕೆಯನ್ನು ಕೈಕೊಂಡು, ಶುಭ ಮುಹೂರ್ತದಲ್ಲಿ ಚತುರಂಗ ಬಲ ಸಹಿತನಾಗಿ ನಗರದಿಂದ ಹೊರಟನು.

ಹೀಗೆ ದಂಡಯಾತ್ರೆ ಹೊರಟ ಪಾಂಡುವು ಮಾರ್ಗಲೆತ ಮಾಂಡಲಿಕರನ್ನೂ ಸಾಮಂತರನ್ನೂ ಭುಜ ಬಲದಿಂದ ದಂಡಿಸಿ ಶರಣುಹೊಕ್ಕವರನ್ನು ಆರ್ದ್ರ ಹೃದಯದಿಂದ ರಕ್ಷಿಸಿದನು. ಅಂತು, ಎಲ್ಲಿಯೂ ಅವನ ಪ್ರತಾಪಕ್ಕೆ ಕುಂದುಬರಲಿಲ್ಲ, ಉದಾರ ಭಾವಕ್ಕೆ ಕಳಂಕವುಂಟಾಗಲಿಲ್ಲ. ಕಾಲಿಟ್ಟಲ್ಲಿ ಅವನು ವಿಜಯಿಯಾದನು; ನಿರುಪಮ ವೀರನೆಂದು ಹೆಸರುಗೊಂಡನು. ಎಲ್ಲೆಲ್ಲಿ ನದಿಗಳು ಅವನ ಪಯಣಕ್ಕೆ ಅಡ್ಡ ಬಂದುವೋ ಅಲ್ಲಲ್ಲಿ ಸೇತುಗಳನ್ನು ಕಟ್ಟಿಸಿದನು; ಎಲ್ಲೆಲ್ಲಿ ನಿಬಿಡಾರಣ್ಯವು ಅವನ ಪಯಣಕ್ಕೆ ವಿಘ್ನಮಾಡಿತೋ ಅಲ್ಲಲ್ಲಿ ಗಿಡ ಮರಗಳನ್ನು ಕಡಿಸಿ ಪ್ರಶಸ್ತವಾದ ಮಾರ್ಗಗಳನ್ನು ಮಾಡಿಸಿದನು; ಎಲ್ಲೆಲ್ಲಿ ಕುಡಿಯುವ ನೀರು ದುರ್ಲಭವಾಗಿದ್ದಿತೋ ಅಲ್ಲಲ್ಲಿ ಕೆರೆಗಳನ್ನು ಕಟ್ಟಿಸಿದನು. ಈ ತೆರದಲ್ಲಿ ತಾನು ಹೊಕ್ಕ ನಾಡುಗಳಲ್ಲೆಲ್ಲ ತನ್ನ ಬಾಹು ಬಲಕ್ಕೂ ಧರ್ಮಾಚರಣಕ್ಕೂ ಕುರುಹುಗಳಿರುವಂತೆ, ಲೋಕ ಹಿತ ಕಾರ್ಯಗಳನ್ನು ಮಾಡಿ, ಕುರುರಾಯನು ತನ್ನ ವೀರತ್ವದಿಂದ ವೀರ ಭೋಗ್ಯೆಯಾದ ಧರಣಿಯನ್ನು ವಶಮಾಡಿಕೊಂಡು ಸಂಪದ್ಯುಕ್ತನಾಗಿ ಹಸ್ತಿನಾಪುರಕ್ಕೆ ಹಿಂದಿರುಗಿದನು.

ಪಾಂಡುವು ಹಸ್ತಿನಾಪುರದ ಸಮೀಪಕ್ಕೆ ಬಂದ ಸುದ್ದಿಯನ್ನು ಕೇಳಿ ಭೀಷ್ಮನು ಸಂತೋಷಪಟ್ಟು ಅವನನ್ನು ಇದಿರ್ಗೊಳ್ಳುವುದಕ್ಕೆ ಅಮಾತ್ಯರೊಡಗೊಂಡು ಪುರದಿಂದ ಹೊರಟನು. ಗೆದ್ದುಬಂದ ಕೌರವ ಸೇನೆಯನ್ನೂ ಕೌರವ ಕುಲ ದೀಪನಾದ ಪಾಂಡುವನ್ನೂ ನೋಡುತ್ತಲೆ ಭೀಷ್ಮನು ಆನಂದ ಪರವಶನಾಗಿ, ಪಾಂಡುವನ್ನು ಕುಶಲ ಪ್ರಶ್ನೆ ಮಾಡುತ್ತ ಕಣ್ಣಿಂದ ಆನಂದ ಬಿಂದುಗಳನ್ನು ಕರೆದನು. ಪಾಂಡುವು

ವಿಜಯ ಗೌರವದಿಂದ ಮಹಿಮೋನ್ನತನಾಗಿದ್ದರೂ ನಮ್ರ ಭಾವವನ್ನು ತಾಳಿ ಭೀಷ್ಮನ ಪಾದಕ್ಕೆರಗಿ ಭೀಷ್ಮನ ಜತೆಯಲ್ಲಿ ಬಂದಿದ್ದ ಅಮಾತ್ಯ ಪ್ರಭೃತಿಗಳಿಗೆ ಯಥೋಚಿತ ಸನ್ಮಾನವನ್ನು ಮಾಡಿದನು. ನಾಲ್ಕು ದಿಕ್ಕುಗಳಲ್ಲಿಯೂ ತೂರ್ಯ ಶಂಖ ದುಂದುಭಿ ಮೊದಲಾದ ಮಂಗಳ ವಾದ್ಯಗಳಾದುವು. ಬ್ರಾಹ್ಮಣರು ಜಯಶಾಲಿಯಾದ ಕುರುರಾಜನನ್ನು ಕೈಯೆತ್ತಿ ಆಶೀರ್ವಚನಗಳಿಂದ ಹರಸಿದರು. ಪುರಾಂಗನೆಯರು ಸಮಯೋಚಿತ ಮಂಗಳ ಕಾರ್ಯಗಳನ್ನು ಮಾಡುತ್ತ ಕುರುರಾಜನಲ್ಲಿ ತಮಗಿದ್ದ ಪ್ರೀತಿಯನ್ನು ತೋರಿದರು. ಪುರವಾಸಿಗಳೂ ಜನಪದ ವಾಸಿಗಳೂ ಏಕ ವಾಕ್ಯದಿಂದ—"ಹಿಂದೆ ಕುರುಕುಲದ ಸಂಪತ್ತೆಲ್ಲವನ್ನೂ ಅಪಹರಿಸಿ ಗರ್ವಪಡುತ್ತಿದ್ದ ರಾಜರೆಲ್ಲರೂ ಈಗ ಪಾಂಡುವಿನ ಶರಣು ಹೊಕ್ಕರು. ಮಹಾತ್ಮ ಭೀಷ್ಮನು ಪಟ್ಟ ಪ್ರಯಾಸದಿಂದ ಪಾಂಡುವು ಧನುರ್ವೇದದಲ್ಲಿ ಸುಶಿಕ್ಷಿತನಾಗಿ ರಾಜಪದವಿಯಲ್ಲಿ ಸುಪ್ರತಿಷ್ಠನಾಗದಿದ್ದ ಪಕ್ಷಕ್ಕೆ ಈ ಬಗೆಯ ಆನಂದೋತ್ಸವವನ್ನು ನಾವೆಲ್ಲಿ ಕಾಣುತ್ತಿದ್ದೆವು? ಭೀಷ್ಮನು ಕುರುಕುಲಕ್ಕೆ ಮಂಗಳ ವಿಧಾತನು. ಅವನು ಏಕಮಾನಸನಾಗಿ ಮಾಡುತ್ತಿರುವ ಕಾರ್ಯಗಳಿಂದ ಅನುದಿನವೂ ಭರತ ವಂಶಕ್ಕೆ ಶುಭವಾಗುತ್ತಿರುವುದು. ಇಂತಹ ಪರಾರ್ಥ ಪರನೂ ವಿಷಯ ವಿರಕ್ತನೂ ಆದ ಮಹಾತ್ಮನ ಪ್ರಸಾದದಿಂದ ದಿಗ್ವಿಜಯಿ ಪಾಂಡುವಿನ ಕೀರ್ತಿಯು ಮುಗಿಲು ಮುಟ್ಟುವಂತಾಯಿತು" ಎಂದು ಮಾತನಾಡಿಕೊಳ್ಳುತ್ತಿದ್ದರು. ಇಂತಹ ಆಮೋದ ಪ್ರಮೋದಗಳ ನಡುವೆ, ಭೀಷ್ಮನು ಪಾಂಡುವನ್ನು ಕರೆದುಕೊಂಡು ನಗರವನ್ನು ಹೊಕ್ಕನು.

ಆನಂದ ಕೋಲಾಹಲ ಪೂರಿತವಾದ ಅರಮನೆಯನ್ನು ಹೊಕ್ಕು ಪಾಂಡುವು ಸತ್ಯವತಿ ಅಂಬಿಕೆ ಅಂಬಾಲಿಕೆ ಧೃತರಾಷ್ಟ್ರ—ಇವರ ಚರಣಗಳಿಗೆ ಯಥಾಕ್ರಮವಾಗಿ ಪ್ರಣಾಮವನ್ನು ಮಾಡಿದನು. ಸತ್ಯವತಿಯು ತನ್ನ ಪ್ರಿಯತಮನಾದ ಮೊಮ್ಮಗನ ವಿಜಯ ವೈಭವದಿಂದ ಆನಂದ ಮಗ್ನೆಯಾದಳು. ಅಂಬಿಕೆಯು ಹರ್ಷ ಚಿತ್ತೆಯಾಗಿ ಮಗನಿಗೆ ಕುಶಲವಾಗಲೆಂದು ದೇವತಾ ಪ್ರಾರ್ಥನೆ ಮಾಡಿದಳು. ಅಂಬಾಲಿಕೆಯು ಪಕ್ಕ

ಸ್ಥಲದ ಮೇಲೆ ಆನಂದಾಶ್ರುವು ಧಳಧಳಿಸಿ ಸುರಿಯ ತೊಡಗಿತು. ಅವಳು ಪರಮ ಪ್ರೇಮದಿಂದ ಮಗನನ್ನು ತಕ್ಕೈಸಿ, "ವತ್ಸ! ಕುಶಲವೆ?" ಎಂದಳು. ಧೃತರಾಷ್ಟ್ರನು ಅನುಜನ ಸಾಹಸ ಕಾರ್ಯಗಳನ್ನು ಕೇಳಿ ಪರಿತುಷ್ಟನಾದನು. ಕುಂತಿ ಮಾದ್ರಿಯರ ಆಹ್ಲಾದಕ್ಕೆ ಕೊನೆಯಿಲ್ಲವಾಯಿತು. ಅವರು ಸಿಂಹ ಪರಾಕ್ರಮನನ್ನು ಕೈಹಿಡಿದು ಅವನ ಶೌರ್ಯ ಗೌರವಗಳಿಂದ ತಾವು ಅಗಣ್ಯ ಪುಣ್ಯವತಿಯರಾದೆವೆಂದು ಹಿಗ್ಗಿದರು. ಈ ತೆರದಲ್ಲಿ ಪಾಂಡುವಿನ ಪ್ರತ್ಯಾಗಮನದಿಂದ ಸರ್ವರ ಹೃದಯವೂ ಪ್ರಫುಲ್ಲವಾಯಿತು. ಅನುಕ್ಷಣವೂ ಸರ್ವರೂ ವಂಶವರೇಣ್ಯನಾದ ಪಾಂಡುವಿನ ಪರಾಕ್ರಮವನ್ನು ಉದ್ಘೋಷಿಸುತ್ತಲೂ ಕುರುಕುಲಕ್ಕೆ ಇಷ್ಟದೈವದಂತಿದ್ದ ಭೀಷ್ಮನ ಲೋಕೋತ್ತರವಾದ ಚರಿತೆಯನ್ನು ಕೀರ್ತನಮಾಡುತ್ತಲೂ ಇದ್ದರು.

---

# ಆರನೆಯ ಅಧ್ಯಾಯ

## ಕೌರವ ಪಾಂಡವರ ಜನನ ಮತ್ತು ವಿದ್ಯಾಭ್ಯಾಸ.

ದಿನಕ್ರಮವಾಗಿ ಕುರುವಂಶದಲ್ಲಿ ಅನೇಕ ಶಾಖೆಗಳು ಒಡೆದುವು. ಪಟ್ಟದರಸಿಯಾದ ಕುಂತಿಯು ಮೂವರು ಮಕ್ಕಳನ್ನೂ ಮಾದ್ರಿಯು ಇಬ್ಬರು ಅವಳಿಮಕ್ಕಳನ್ನೂ ಹೆತ್ತರು. ಇತ್ತ, ಧೃತರಾಷ್ಟ್ರನ ಹೆಂಡತಿ ಗಾಂಧಾರಿಗೆ ನೂರ್ವರು ಮಕ್ಕಳಾದರು. ಪಾಂಡುವು ಐವರು ಪುತ್ರರನ್ನೂ ಧೃತರಾಷ್ಟ್ರನು ಬಹು ಪುತ್ರರನ್ನೂ ಪಡೆದು ಸಂತುಷ್ಟರಾದರು. ಯಥಾವಿಧಾನವಾಗಿ ಕುಮಾರರೆಲ್ಲರಿಗೂ ಜಾತಕರ್ಮಾದಿಗಳು ನಡೆದುವು. ಕುಂತಿಯ ಮಕ್ಕಳು ಯುಧಿಷ್ಠಿರ, ಭೀಮಸೇನ, ಅರ್ಜುನ ಎಂದು ಹೆಸರುಗೊಂಡರು. ಮಾದ್ರಿಯ ಮಕ್ಕಳೊಳಗೆ ಜ್ಯೇಷ್ಠನ ಹೆಸರು ನಕುಲ, ಕನಿಷ್ಠನ ಹೆಸರು ಸಹದೇವ. ಧೃತರಾಷ್ಟ್ರನ ಮಕ್ಕಳು ದುರ್ಯೋಧನ, ದುಶ್ಶಾಸನ—ಇತ್ಯಾದಿಯಾದ ಹೆಸರುಗಳಿಂದ ಖ್ಯಾತರಾದರು.

ಕುಮಾರರು ಸುಶಿಕ್ಷಿತರಾಗಿ ಯೌವನದಶೆಗೆ ಬರುವಷ್ಟರಲ್ಲಿಯೇ ಪಾಂಡುವು ಸ್ವರ್ಗಸ್ಥನಾದನು. ಅವನ ಮರಣದ ದೆಸೆಯಿಂದ ಸಮಸ್ತ ಕುರುರಾಜ್ಯವೂ ಶೋಕಾಕುಲವಾಯಿತು; ಸತ್ಯವತಿ ಭೀಷ್ಮರಾದಿಯಾಗಿ ಸರ್ವರೂ ವ್ಯಸನಾಕ್ರಾಂತರಾದರು; ಕುಂತಿ ಮಾದ್ರಿಯರು ಮೂರ್ಛೆ ಹೋದರು. ಚೇತರಿಸಿಕೊಳ್ಳುತ್ತಲೆ, ಕುಂತಿಯು ಮಾದ್ರಿಯನ್ನು ಕರೆದು—"ಎಲೌ, ನಾನು ಆರ್ಯಪುತ್ರನ ಜ್ಯೇಷ್ಠ ಧರ್ಮಪತ್ನಿ; ಸಕಲ ಕಾರ್ಯಗಳನ್ನೂ ಮುಂಗೊಂಡು ಮಾಡುವುದು ನನ್ನ ಧರ್ಮವು; ಈಗ ನಾನೂ ಆರ್ಯಪುತ್ರನ ದಾರಿಯನ್ನೇ ಹಿಡಿಯುವೆನು; ನನ್ನ ಮಕ್ಕಳನ್ನು ನಿನ್ನ ಕೈಯಲ್ಲಿಡುವೆನು; ನೀನು ಶೋಕವನ್ನು ಬಿಟ್ಟು ಅವರನ್ನು ಸಾಕುವ ಭಾರವನ್ನು ವಹಿಸು; ಪರದಲ್ಲಿ ಆರ್ಯಪುತ್ರನಿಗೆ ಸದ್ಗತಿಯಾಗುವಂತೆ ಧರ್ಮವನ್ನು ಆಚರಿಸು; ನಾನು ಆರ್ಯಪುತ್ರನ ಕೂಡೆ ಸಹಗಮನ ಮಾಡುವೆನು; ನೀನು ನನಗಡ್ಡ ಬರಬೇಡ" ಎಂದಳು.

ಶೋಕಾಕುಲೆಯಾದ ಕುಂತಿಯ ಮಾತನ್ನು ಕೇಳಿ ಮಾದ್ರಿಯು ಇಂತೆಂದಳು :—"ಆರ್ಯೆ! ನಾನು ಸಂಸಾರ ವಿಷಯದಲ್ಲಿ ಏನನ್ನೂ ಅರಿಯೆನು ; ಅಲ್ಪ ವಯಸ್ಸಿನವಳಾದುದರಿಂದ ನನ್ನ ವಿವೇಚನಾ ಶಕ್ತಿಯು ಪರಿಣತವಾಗಿಲ್ಲ; ಮಕ್ಕಳ ಲಾಲನೆ ಪಾಲನೆಯು ಕಷ್ಟಸಾಧ್ಯವು; ಅದಕ್ಕೆ ನನಗೆ ಸಾಮರ್ಥ್ಯ ಸಾಲದು ; ನನ್ನ ಮಕ್ಕಳಲ್ಲಿ ಪ್ರೀತಿಯನ್ನು ತೋರಿಸುವಂತೆಯೇ, ಬುದ್ಧಿ ದೋಷದಿಂದ ನಿನ್ನ ಮಕ್ಕಳಲ್ಲಿ ತೋರಿಸದೆ ಹೋದರೆ ನಾನು ಪಾತಕಿಯಾಗುವೆನು, ಸಂದೇಹವಿಲ್ಲ. ನಮ್ಮ ಮಕ್ಕಳಿಗೆ ಇನ್ನೂ ಶೈಶವವೇ ಕಳೆಯಲಿಲ್ಲ; ನೀನಿಲ್ಲದಿದ್ದರೆ ಅವರ ಗತಿಯೇನು? ಅವರಿಗೆ ದಿಕ್ಕಾರು? ಪ್ರೀತಿಯಿಂದ ಅವರನ್ನು ಸಾಕುವರಾರು? ಅವರು ಯಾರ ಮುಖವನ್ನು ನೋಡಿಕೊಂಡಿರುವರು? ಅದೃಷ್ಟವು ಹೇಗಿರುವುದೊ? ಅವರೇನಾದರೂ ಆದರೆ ನಾನು ಇನ್ನಷ್ಟು ದುಃಖಿಸಬೇಕಾಗುವುದು. ಅಷ್ಟೇ ಅಲ್ಲ; ಆರ್ಯಪುತ್ರನಿಗೆ ಜಲತರ್ಪಣವನ್ನು ಕೊಡುವರು ಕೂಡ ಇಲ್ಲದೆ ಹೋಗುವರು. ಆದುದರಿಂದ, ಪರದಲ್ಲಿ ಆರ್ಯಪುತ್ರನ ತೃಪ್ತ್ಯರ್ಥವಾಗಿಯೂ, ಇಹದಲ್ಲಿ ಮಕ್ಕಳ ಜೀವನ ರಕ್ಷಣಾರ್ಥವಾಗಿಯೂ ಬದುಕಿರುವುದೇ ನಿನ್ನ ಕರ್ತವ್ಯವು. ನೀನು ಸಹಗಮನದ ಯೋಚನೆಯನ್ನು ಬಿಡು; ನಾನು ಸಹಗಮನವನ್ನು ಮಾಡುವೆನು ; ಅದರಿಂದ ನನ್ನಿಬ್ಬರು ಮಕ್ಕಳಿಗೆ ಹಾನಿಯೇನೂ ಆಗದು. ಯುಧಿಷ್ಠಿರಾದಿಗಳನ್ನು ಸಾಕುವಂತೆಯೇ ನನ್ನ ಮಕ್ಕಳನ್ನೂ ನೀನು ಸಾಕಬಲ್ಲೆ; ಅವರಲ್ಲಿ ನಿನಗೆಂದಿಗೂ ಪ್ರೀತಿ ತಪ್ಪದಿರುವುದು."

ಇಂತೆಂದು ನುಡಿದು ಪತಿ ಪ್ರಾಣೆಯಾದ ಮಾದ್ರಿಯು ತನ್ನ ಮಕ್ಕಳ ಆರಯ್ಕೆಯನ್ನು ಸವತಿಗೊಪ್ಪಿಸಿ ಸಹಗಮನವನ್ನು ಮಾಡಿದಳು. ಕುಂತಿಗೆ ಸಹಗಮನವನ್ನು ಮಾಡುವ ಸಂಕಲ್ಪವನ್ನು ಬಿಡಲಿಚ್ಛೆಯಿಲ್ಲದಿದ್ದರೂ ಮಕ್ಕಳ ಯೋಗಕ್ಷೇಮಾರ್ಥವಾಗಿ ಜೀವಿಸಲೊಡಂಬಟ್ಟಳು.

ಪಾಂಡುವು ದಿವಂಗತನಾದ ತರುವಾಯ ಭೀಷ್ಮನು ಸ್ವಭಾವಸಿದ್ಧವಾದ ಉದಾರ ಭಾವದಿಂದಲೂ ಸಮದೃಷ್ಟಿಯಿಂದಲೂ ಯುಧಿಷ್ಠಿರಾದಿ ಕುಮಾರರ ರಕ್ಷಣಾವೇಕ್ಷಣ ಭಾರವನ್ನು ಹೊತ್ತನು. ಅವನು ಹಿಂದೆ ಪ್ರೀತಿಪೂರ್ವಕವಾಗಿ ವಿಚಿತ್ರವೀರ್ಯನ ಹಿತವನ್ನು ಸಾಧಿಸುವುದ

ರಲ್ಲಿ ಹೇಗೆ ನಿರತನಾಗಿದ್ದನೋ, ಹೇಗೆ ಧೃತರಾಷ್ಟ್ರ ಪಾಂಡುರಾಯರ ಪುರೋವೃದ್ಧಿಯಲ್ಲಿ ತತ್ಪರನಾಗಿದ್ದನೋ ಹಾಗೆಯೇ ಈಗ ಯುಧಿಷ್ಠಿರಾದಿಗಳನ್ನು ಸಾಕಿ ಸಲಹುವುದರಲ್ಲಿಯೂ ಅಕ್ಕರೆಯುಳ್ಳವನಾಗಿದ್ದನು. ಅಡಿಗಡಿಗೆ ವಿಘ್ನವಿಪತ್ತುಗಳು ಬಂದರೂ ಅವನ ಧರ್ಮಬುದ್ಧಿಯು ಪಲ್ಲಟವಾಗಲಿಲ್ಲ. ಅವನು ಮೇರುವಿನಂತೆ ನಿಶ್ಚಲನಾಗಿ ನಿಂತು ಕರ್ತವ್ಯ ಬುದ್ಧಿಯಿಂದ ಕುರುರಾಜ ಕುಮಾರರನ್ನು ಪಾಲಿಸುತ್ತಿದ್ದನು; ಚಿತ್ರಾಂಗದನು ಹತನಾದ ಬಳಿಕ ಹೇಗೆ ಕುರುರಾಜ್ಯದ ಕ್ಷೇಮಚಿಂತನೆಯನ್ನು ಮಾಡುತ್ತಿದ್ದನೋ, ವಿಚಿತ್ರವೀರ್ಯನ ಮರಣಾನಂತರ ವಂಶ ಗೌರವವನ್ನು ರಕ್ಷಿಸುವ ನಿಮಿತ್ತವಾಗಿ ಹೇಗೆ ಶ್ರಮಪಟ್ಟನೋ, ಹಾಗೆಯೇ ಈಗ ಪಾಂಡುವು ಕಾಲಧರ್ಮವನ್ನೈದುತ್ತಲೆ ಕುರುಕುಲದ ಕೀರ್ತಿಸಂಪದಗಳನ್ನು ಬೆಳೆಯಿಸುವುದರಲ್ಲಿಯೂ ಪಾಡುಪಟ್ಟನು. ಅವನ ಶ್ರಮಶೀಲತೆಯನ್ನು ನೋಡಿ ಎಲ್ಲರೂ ವಿಸ್ಮಯಪಟ್ಟರು. ಅವನು ರಾಜ ದಂಡವನ್ನು ಪರಿಗ್ರಹಿಸಲಿಲ್ಲ, ಪತ್ನಿಯನ್ನು ಕೈಕೊಳ್ಳಲಿಲ್ಲ. ಪರಾರ್ಥದಲ್ಲಿ ಅರ್ಪಿತಪ್ರಾಣನಾಗಿ ಪ್ರಜೆಗಳಲ್ಲಿ ಎಲ್ಲರಂತೆ ತಾನೂ ಒಬ್ಬನೆಂದು ಅವನು ತೋರಿದ ರಾಜಭಕ್ತಿಯನ್ನೂ ಕರ್ತವ್ಯನಿಷ್ಠೆಯನ್ನೂ ನೋಡಿ ನೋಡಿ ಪ್ರಜೆಗಳೆಲ್ಲರೂ ವಿಸ್ಮಯದಿಂದ ಸ್ತಬ್ಧರಾಗುತ್ತಿದ್ದರು; ಅವನ ಅನ್ಯಾದೃಶ ಚರಿತೆಗೆ ಭಕ್ತಿರಸದಿಂದ ಮಸಗರಗಿ ತಲೆಬಾಗಿ ಅವನನ್ನು ವಂದಿಸುತ್ತಿದ್ದರು. ಇಷ್ಟಾದರೂ, ಭೀಷ್ಮನು ಯಾವ ಕಾರ್ಯದಲ್ಲಿಯೂ ತಾನು ಕರ್ತೃತ್ವವನ್ನು ಇಟ್ಟುಕೊಳ್ಳಲಿಲ್ಲ; ರಾಜಕಾರ್ಯಗಳೆಲ್ಲವನ್ನೂ ಧೃತರಾಷ್ಟ್ರನ ಆಜ್ಞಾನುರೂಪವಾಗಿ ನಡೆಯಿಸುತ್ತಿದ್ದನು.

ಪಾಂಡುವಿನ ವಿಯೋಗದಿಂದ ಸತ್ಯವತಿಗೆ ವಿಷಯವೈರಾಗ್ಯವು ಹುಟ್ಟಿತು; ಅವಳು ಸಕಲ ಕಾರ್ಯಗಳಲ್ಲಿಯೂ ಉದಾಸೀನೆಯಾದಳು. ಹೀಗಿರಲು, ಒಂದು ದಿನ ಅವಳು ಭೀಷ್ಮನನ್ನು ಕರೆದು—"ವತ್ಸ! ಪಾಂಡುವಿನ ಸಾವಿನಿಂದ ನನ್ನ ದೇಹವು ಉಡುಗಿಹೋಯಿತು. ನನ್ನ ಮನಸ್ಸಿಗಾದರೋ, ಯಾವುದೂ ಬೇಕಾಗಿಲ್ಲ. ನನ್ನ ಮನಸ್ಸಿಗೆ ಅರಮನೆಯು ಬರಿದಾಯಿತು; ಸಂಸಾರವು ಕಿಚ್ಚುಬಿದ್ದ ಕಾಡಿನಂತಾಯಿತು. ಇಷ್ಟು ದಿನಗಳೂ ನಾನು ಪಾಂಡುವಿನ ಮುಖವನ್ನು

ನೋಡಿಕೊಂಡು ಪ್ರಾಣಾಧಿಕನಾದ ವಿಚಿತ್ರವೀರ್ಯನು ಹೋದ ಶೋಕ ವನ್ನು ತಾಳಿಕೊಂಡಿದ್ದೆನು; ಪಾಂಡುವಿನಿಂದ ನಮ್ಮ ವಂಶದ ಕೀರ್ತಿ ಲತೆಯು ವಿಸ್ತಾರವಾಗಿ ಹಬ್ಬುವುದೆಂದು ಆಸೆಪಡುತ್ತಿದ್ದೆನು. ಆಯಾಸೆ ನಿರಾಸೆಯಾಯಿತು. ಧೃತರಾಷ್ಟ್ರನ ಮಕ್ಕಳ ಸ್ವಭಾವವು ಅವರ ಈ ಅಲ್ಪವಯಸ್ಸಿನಲ್ಲಿಯೇ ನನಗೆ ಶಂಕೆಯನ್ನುಂಟುಮಾಡುತ್ತಿರುವುದು; ಕುಲಕ್ಷಯಕರವಾದ ಜ್ಞಾತಿವೈರವು ಹುಟ್ಟುವ ಲಕ್ಷಣಗಳು ಕಾಣುತ್ತಿರುವುವು. ನನಗೆ ಪ್ರಿಯವಾದುದೆಲ್ಲವೂ ಕಳೆದುಹೋಯಿತು, ಅಪ್ರಿಯವಾದುದೇ ತಲೆದೋರುತ್ತಿದೆ; ಧೈರ್ಯವು ಕುಂದುತ್ತಿದೆ. ನಾನು ಇನ್ನು ಬದುಕಿರುವುದರಿಂದ ಪ್ರಯೋಜನವಿಲ್ಲ. ಹಿಂದೆ ಅನುಭವಿ ಸಿದ ದುಃಖಗಳೆಲ್ಲವೂ ಐಮುಡಿಸಿ ಹೊಸಹೊಸದಾಗಿ ಅನುಕ್ಷಣವೂ ನೆನಪಿಗೆ ಬರುತ್ತಿವೆ; ಸರ್ವದಾ ಯಮನ ಛಾಯೆಯೇ ಕಣ್ಣಿಗೆ ಬೀಳುತ್ತಿದೆ. ಇನ್ನು ಭೂಮಿಯ ಮೇಲಿರಲು ನನಗಿಚ್ಛೆಯಿಲ್ಲ; ಲೌಕಿಕ ಕಾರ್ಯಗಳಲ್ಲಿ ತೊಡಗಲು ನನಗೆ ಉತ್ಸಾಹವಿಲ್ಲ; ರಾಜಭವನದಲ್ಲಿ ರುವ ರಾಜಭೋಗ್ಯವಸ್ತುಗಳನ್ನು ತಿರುಗಿನೋಡಲು ಕೂಡ ನನಗೆ ಅಭಿಲಾಷೆಯಿಲ್ಲ. ಸೊಸೆಯರಿಬ್ಬರನ್ನೂ ಕೂಡಿ ನಾನು ವನವಾಸ ಹೋಗುವೆನು. ಅರಣ್ಯದಲ್ಲಿ ಮೂವರೂ ತಪಸ್ಸುಮಾಡಿ ಸದ್ಗತಿಯನ್ನು ಕಾಣಲು ಯತ್ನಿಸುವೆವು" ಎಂದಳು.

ಭೀಷ್ಮನು ಸತ್ಯವತಿಯಾಡಿದ ಈ ವೈರಾಗ್ಯ ಭಾವಪೂರ್ಣವಾದ ಮಾತನ್ನು ಕೇಳಿ—"ತಾಯೇ! ನಿನ್ನ ಸಂಕಲ್ಪವು ವಿಹಿತವಾದುದೇ ಸರಿ; ನೀನು ಹಿಡಿಯಬೇಕೆಂದಿರುವ ಮಾರ್ಗವು ಯುಕ್ತವಾದುದೇ. ಈ ಕಾಲದಲ್ಲಿ ಸರ್ವರೂ ಧರ್ಮಾನುಶಾಸನವನ್ನು ಉಪೇಕ್ಷಿಸುತ್ತಿರುವರು; ಪಾಪ ಪ್ರವಾಹವು ಪ್ರಸರಿಸುತ್ತಿರುವುದು; ಸರ್ವರೂ ಕಳಂಕ ಪಂಕದಲ್ಲಿ ಹೇಸದೆ ಮಗ್ನರಾಗುತ್ತಿರುವರು. ಈ ಅವಸ್ಥೆಯಲ್ಲಿ ತಪೋವನವನ್ನು ಆಶ್ರಯಿಸುವುದು ಶ್ರೇಯಸ್ಕರವೇ ಸರಿ. ನಾನಾದರೋ, ದಾರುಣ ಪ್ರತಿಜ್ಞಾಪಾಶದಿಂದ ಬದ್ಧನಾಗಿರುವೆನು, ವನವಾಸವು ನನಗೆ ಸಾಧ್ಯ ವಲ್ಲ. ನಾನು ಪಾಣಿಗ್ರಹಣಕ್ಕೆ ಮಾತ್ರವೇ ಅಲ್ಲದೆ, ಸಿಂಹಾಸನ ಸ್ವೀಕಾ ರಕ್ಕೂ ಇಷ್ಟಪಡೆನು. ಈ ವಿಶಾಲ ಕುರುರಾಜ್ಯದಲ್ಲಿ, ಮಕ್ಕವರಂತೆ

ನಾನೂ ಪ್ರಜಾವರ್ಗದಲ್ಲೊಬ್ಬನು. ರಾಜ್ಯಸಂಪದಕ್ಕೆ ನಾನು ಅರ್ಹ ನಲ್ಲ. ರಾಜಾಜ್ಞೆಯನ್ನು ವಿಹಾರಿ ನಡೆಯಲು ನಾನು ಶಕ್ತನಲ್ಲ. ನಾನು ಕುರುರಾಜನ ಅನ್ನದಿಂದ ಪೋಷಿತನಾದವನು. ಭಕ್ತಿಪೂರ್ವಕವಾಗಿ ಪ್ರಜಾಧರ್ಮವನ್ನು ಪಾಲಿಸುವುದೆಷ್ಟೋ ಅಷ್ಟೇ ನನ್ನ ಕೆಲಸವು. ಅನ್ನದಾತನಾದ ಕುರುರಾಜನ ಮಂಗಳವನ್ನು ಸಾಧಿಸುತ್ತಿರುವುದೇ ನನ್ನ ಕರ್ತವ್ಯವು. ನಾನು ಕುರುವಂಶದ ಹಿತವನ್ನು ಬಯಸಿ ಯುಧಿಷ್ಠಿರಾದಿ ಕುಮಾರರನ್ನು ಸಲಹುತ್ತಿರುವೆನು. ಈ ಕಾರ್ಯವು ನನಗೆ ಕೈಗಟ್ಟಿರುವುದರಿಂದ ನಾನು ತಪಸ್ಸಿಗೆ ಮನಗೊಡದಿದ್ದರೂ ನನಗೆ ಪಾಪ ಸ್ಪರ್ಶವಾಗದೆಂದು ನಂಬುವೆನು. ನಾನು ತಂದೆಯ ಪ್ರೀತ್ಯರ್ಥವಾಗಿ ಯಾವ ಮಾತಿಗೆ ಕಟ್ಟುಬಿದ್ದಿರುವೆನೋ ಆ ಮಾತನ್ನು ವಿಹಾರದಂತೆ ಕಾರ್ಯಗಳನ್ನು ಮಾಡುತ್ತಿರುವೆನು. ಕಾಯ ಮನೋವಾಕ್ಕುಗಳಿಂದ ಸತ್ಯವನ್ನು ಪಾಲಿಸಿದಲ್ಲಿ ನನಗೆ ಪರಮ ಧರ್ಮಲಾಭವುಂಟಾಗುವುದು. ಆ ಧರ್ಮಬಲದಿಂದಲೇ ನಾನು ಸ್ವರ್ಗಕ್ಕೆ ಹೋಗಿ ಅಕ್ಷಯ ಸಿದ್ಧಿದಾತನಾದ ಪಿತೃದೇವನ ಪಾದವನ್ನು ಸೇರುವೆನು" ಎಂದನು.

ಅನಂತರದಲ್ಲಿ ಸತ್ಯವತಿಯು ತಪೋವನಕ್ಕೆ ಹೋಗಲು ಕೃತನಿಶ್ಚಯೆಯಾಗಿ ಸೊಸೆಯರಿಬ್ಬರಿಗೂ ತನ್ನ ಮನೋಗತವನ್ನು ತಿಳಿಸಿದಳು. ಅಂಬಿಕೆ ಅಂಬಾಲಿಕೆಯರಿಬ್ಬರೂ ಅತ್ತೆಯ ಮಾತಿಗೊಡಂಬಟ್ಟರು. ತರುವಾಯ ಸತ್ಯವತಿಯು ಎಲ್ಲರ ಅನುಜ್ಞೆಯನ್ನೂ ಪಡೆದು ಸೊಸೆಯರನ್ನೊಡಗೊಂಡು ಪವಿತ್ರ ಭಾಗೀರಥಿಯ ತೀರದಲ್ಲಿರುವ ತಪೋವನಕ್ಕೆ ಹೊರಟಳು. ಅಲ್ಲಿ ಅವರಿಗೆ ಪರ್ಣಕುಟೀರವು ರಾಜಭವನವಾಯಿತು; ತೃಣವು ಶಯ್ಯೆಯಾಯಿತು; ವನಜಾತ ಫಲಮೂಲಗಳು ಆಹಾರವಾದುವು. ಈ ಪರಮ ಪವಿತ್ರವಾದ ಪದಾರ್ಥಗಳ ಸೇವೆಯಿಂದ ಸಂತುಷ್ಟರಾಗಿ ಆ ರಾಜಮಹಿಷಿಯರು ಹಸ್ತಿನಾವತಿಯಲ್ಲಿದ್ದ ಆ ಮನೋಹರ ಪ್ರಾಸಾದವನ್ನೂ ದಿವ್ಯವಸ್ತುಜಾತಗಳನ್ನೂ ಮರೆತರು. ಅರಣ್ಯಚಾರಿಗಳಾದ ಜಿಂಕೆಗಳೊಡನೆಯೂ ತಪೋವನವಾಸಿಗಳಾದ ಋಷಿಪತ್ನಿಯರೊಡನೆಯೂ ಅವರಿಗೆ ಸ್ನೇಹಭಾವವು ಹುಟ್ಟಿತು. ಆ ರಾಜಮಹಿಷಿಯರು ಪರಮ ಪಾವನವಾದ ಭಾಗೀರಥಿಯ ತಟದೇಶದಲ್ಲಿ, ಆ ಶಾಂತಿ

ರಸಪೂರ್ಣವಾದ ನಿಕೇತನದಲ್ಲಿ, ಯೋಗಿನಿಗಳಾಗಿ ಪರಮಾತ್ಮನ ಧ್ಯಾನ ತತ್ಪರರಾಗಿದ್ದು ಕಾಲ ಕ್ರಮದಲ್ಲಿ ಈ ಪ್ರಾಕೃತ ದೇಹವನ್ನು ಬಿಟ್ಟರು.

ಇತ್ತ, ಹಸ್ತಿನಾಪುರದಲ್ಲಿ ಯುಧಿಷ್ಠಿರಾದಿ ಪಾಂಡವರು ದಿನ ದಿನಕ್ಕೆ ಬೆಳೆಯುತ್ತಿದ್ದರು. ಆ ಕೂಸುಗಳು ಆಡುತ್ತಿರುವುದನ್ನು ನೋಡುತ್ತ, ಅಸ್ಫುಟವಾದ ಮಧುರ ಸ್ವರದಲ್ಲಿ, "ಅಮ್ಮಾ! ಅಮ್ಮಾ!" ಎಂದು ತನ್ನನ್ನು ಕರೆಯುವುದನ್ನು ಕೇಳುತ್ತ, ಕುಂತಿಯು ತನ್ನ ದುಃಖವೆಲ್ಲವನ್ನೂ ಮರೆಯುವಳು; ಪ್ರಫುಲ್ಲ ಹೃದಯೆಯಾಗಿ ಆ ಮಕ್ಕಳನ್ನು ಮುದ್ದಿಟ್ಟುಕೊಳ್ಳುವಳು. ಯುಧಿಷ್ಠಿರ ಭೀಮಾರ್ಜುನರನ್ನು ಹೇಗೆ ಪುತ್ರ ಸ್ನೇಹದಿಂದ ಕಾಣುತ್ತಿದ್ದಳೋ, ಹಾಗೆ ನಕುಲ ಸಹದೇವರನ್ನೂ ಸವತಿಯ ಮಕ್ಕಳೆನ್ನದೆ ವಾತ್ಸಲ್ಯದಿಂದ ಕಾಣುತ್ತಿದ್ದಳು. ಅವರೆಲ್ಲರ ತೊದಲ್ನುಡಿಗಳು ಅವಳ ಕಿವಿಯಲ್ಲಿ ಅಮೃತ ಧಾರೆಯನ್ನು ಕರೆಯುತ್ತಿದ್ದುವು; ಎಲ್ಲರ ಮುಖಾರವಿಂದವೂ ಅವಳ ಹೃದಯದಲ್ಲಿ ವರ್ಣಿಸಲಾಗದ ಸಂತೋಷ ರಸವು ಉಕ್ಕಿಬರುವಂತೆ ಮಾಡಿತು. ಅಂತು, ಅವರ ಬಾಲ ಲೀಲೆಯೂ ನಡೆ ನುಡಿಗಳೂ ಅವಳ ಸಮಸ್ತ ಕಾಯಕ್ಲೇಶ ಮನಃಕ್ಲೇಶಗಳನ್ನೂ ಪರಿಹರಿಸುತ್ತಿದ್ದುವು.

ಭೀಷ್ಮನು ಆ ಅರಸು ಮಕ್ಕಳಿಗೆ ಐದು ವರ್ಷ ತುಂಬುತ್ತಲೆ ಯಥಾ ವಿಧಾನವಾಗಿ ಚೂಡಾಕರ್ಮವನ್ನು ಮಾಡಿಸಿ ಅವರ ಶಿಕ್ಷಣಕ್ಕೆ ತಕ್ಕ ಉಪಾಧ್ಯಾಯರನ್ನು ನಿಯಮಿಸಿದನು. ಹನ್ನೊಂದನೆಯ ವರ್ಷದಲ್ಲಿ ಉಪನಯನ ಸಂಸ್ಕಾರವಾಗಲು, ಅವರು ವೇದಾಧ್ಯಯನವನ್ನು ಮಾಡತೊಡಗಿದರು.



ಆ ರಾಜಕುಮಾರರೊಳಗೆ ಹಿರಿಯಾತನಾದ ಯುಧಿಷ್ಠಿರನು ಉದಾರನು, ಸರಳನು, ಧರ್ಮಜ್ಞನು, ಧರ್ಮ ಪರಾಯಣನು. ಅವನ ಸರಳ ಸ್ವಭಾವ, ಶಾಂತ ಭಾವ, ಸಚ್ಚರಿತ್ರೆ, ಸತ್ಯ ಸಂಧತೆ, ಇತ್ಯಾದಿ ಸದ್ಗುಣಗಳಿಂದ ಅವನು ಧರ್ಮವೇ ಮಾನುಷ ರೂಪವನ್ನು ತಾಳಿ ಅವತರಿಸಿದಂತಿದ್ದನು. ಇತ್ತ, ಧೃತರಾಷ್ಟ್ರನ ಸರ್ವ ಜ್ಯೇಷ್ಠ ಪುತ್ರ ದುರ್ಯೋಧನನು ಐಶ್ವರ್ಯ ಲುಬ್ಧನೂ ಅತ್ಯಂತ ಕ್ರೂರನೂ ಪಾಪಾತ್ಮನೂ ಪಾಪ ಶೀಲನೂ ಆಗಿದ್ದನು. ಯುಧಿಷ್ಠಿರಾದಿ ಪಾಂಡವರು

ನಿಶ್ಚಲವಾದ ಮನಸ್ಸಿನಿಂದ ವೇದಾದಿ ಶಾಸ್ತ್ರಾನುಶೀಲನ ಮಾಡು ತ್ತಿದ್ದರು. ಶಾಸ್ತ್ರ ಜ್ಞಾನದಿಂದ ಅವರಿಗೆ ಧರ್ಮಾಚರಣೆಯಲ್ಲಿ ಅನು ರಾಗವು ಹೆಚ್ಚಿತು. ದುರ್ಯೋಧನನಿಗಾದರೋ ಶಾಸ್ತ್ರಾಭ್ಯಾಸದಲ್ಲಿ ಅವರಿಗಿದ್ದಷ್ಟು ಅಕ್ಕರೆ ಇರಲಿಲ್ಲ; ಶಾಸ್ತ್ರ ತತ್ತ್ವಗಳು ಅವನ ಹೃದಯ ದಲ್ಲಿ ಎಡೆಗೊಳ್ಳಲಿಲ್ಲ. ಅವನು ಐಶ್ವರ್ಯ ಮದದಿಂದ ಲೇಶವಾದರೂ ಸಂಕೋಚಪಡದೆ ಗುರು ಜನರನ್ನು ತಿರಸ್ಕರಿಸುತ್ತಿದ್ದನು; ಯುಧಿಷ್ಠಿ ರಾದಿಗಳನ್ನು ದ್ವೇಷಿಸುತ್ತ ಯಾವ ಬಗೆಯಲ್ಲಾದರೂ ಅವರನ್ನು ಕೊಲ್ಲಿಸ ಬೇಕೆಂಬ ಚಿಂತೆಯಲ್ಲಿಯೇ ಆನಂದಪಡುತ್ತಿದ್ದನು. ಅದರಿಂದ ಕುಂತಿಯು ಕಳವಳಗೊಂಡು ವಿದುರನ ಬಳಿ ತನ್ನ ಸಂಕಟವನ್ನು ಹೇಳಿಕೊಂಡು ಬಹು ದುಃಖಪಡುತ್ತಿದ್ದಳು. ಮಹಾಮತಿಯಾದ ವಿದುರನು ಕುಂತಿಯನ್ನು ಸಂತೈಸಿ ಮಕ್ಕಳನ್ನು ಜೋಕೆಯಿಂದ ಸಾಕುವಂತೆ ಅವಳಿಗೆ ಹೇಳಿದನು; ಅಲ್ಲದೆ, ದುರಾತ್ಮನಾದ ದುರ್ಯೋಧನನು, ಕುಂತಿಯು ತನ್ನನ್ನು ನಿಂದಿ ಸುತ್ತಿರುವುದನ್ನು ಕಂಡು ಕೋಪಗೊಂಡು, ಕುಂತಿಯ ಕುಮಾರರನ್ನು ಇನ್ನೂ ಅಧಿಕವಾಗಿ ಕಾಡಬಹುದೆಂದು ಹೆದರಿ, ದುರ್ಯೋಧನನ್ನು ಬಹಿರಂಗವಾಗಿ ದೂರಬೇಡವೆಂದು ಕೂಡ ಅವಳಿಗೆ ಬುದ್ಧಿ ಹೇಳಿದನು. ಇತ್ತ, ಯುಧಿಷ್ಠಿರಾದಿ ಪಾಂಡವರೂ ದುರ್ಯೋಧನನಿಗೆ ವಿರೋಧವಾಗಿ ಯಾವ ಮಾತನ್ನೂ ಆಡದೆ ಆತ್ಮರಕ್ಷಣೆಯ ವಿಷಯದಲ್ಲಿ ಮಾತ್ರ ಜೋಕೆ ಯಿಂದಿದ್ದರು. ದುರ್ಯೋಧನನ ದುಷ್ಟ ಬುದ್ಧಿಗೂ ದುರಾಚಾರಕ್ಕೂ ಭೀಷ್ಮನು ಅತ್ಯಂತ ದುಃಖಪಡುತ್ತಿದ್ದನು. ಅವನು ಪಾಂಡವ ಕೌರವ ರಿಬ್ಬರನ್ನೂ ಸಮ ದೃಷ್ಟಿಯಿಂದ ನೋಡುತ್ತ ಅವರೆಲ್ಲರಿಗೂ ಸಮನಾಗಿ ಧರ್ಮ ಶಾಸ್ತ್ರ, ರಾಜ ನೀತಿ, ಲೋಕ ವ್ಯವಹಾರ ಮೊದಲಾದ ವಿಷಯ ಗಳಲ್ಲಿ ಜ್ಞಾನೋತ್ಪತ್ತಿಯಾಗುವಂತೆ ಉಪದೇಶ ಮಾಡಿದನು. ಅವನ ಉಪದೇಶ ಪ್ರಭಾವದಿಂದ ಯುಧಿಷ್ಠಿರಾದಿಗಳ ಪ್ರಕೃತಿಯು ನಿರ್ಮಲ ವಾಯಿತು. ಅವರು ಶಾಂತರೂ ತೇಜೋವಂತರೂ ಸುಪಥಗಾಮಿ ಗಳೂ ಆದರು. ದುರ್ಯೋಧನಾದಿಗಳ ಪ್ರಕೃತಿ ಮಾತ್ರ ನಿರ್ಮಲವಾಗ ಲಿಲ್ಲ; ಅವರ ದುರಾಶೆ, ಈರ್ಷ್ಯೆ, ದ್ವೇಷ—ಇವೇ ಮೊದಲಾದ ದುಷ್ಪ್ರ ವೃತ್ತಿಗಳೊಂದೂ ತೊಲಗಲಿಲ್ಲ; ಅವರು ಕುತರ್ಕವನ್ನೂ ಕುಟಿಲ ಪಥ

ವನ್ನು ಬಿಡದೆ ಯಾವಾಗಲೂ ಅಮಂಗಳಾಚರಣೆಯಲ್ಲಿಯೇ ಇರುತ್ತಿದ್ದರು. ಹೀಗೆ, ಗುರೂಪದೇಶವು ಒಂದಾದರೂ, ಪಾತ್ರ ಭೇದದಿಂದ ಫಲ ಭೇದವುಂಟಾಯಿತು. ಅಂತು, ಕೌರವರ ಉತ್ಕರ್ಷಸಾಧನಕ್ಕಾಗಿ ಭೀಷ್ಮನು ಪಟ್ಟ ಪ್ರಯಾಸವೆಲ್ಲವೂ ಮರುಭೂಮಿಗೆ ಮಾಡಿದ ಕೃಷಿಯಂತಾಯಿತು.

ಒಂದು ದಿನ ರಾಜಕುಮಾರರೆಲ್ಲರೂ ಊರ ಹೊರಗೆ ಹೋಗಿ ಚೆಂಡಾಡುತ್ತಿದ್ದರು. ಚೆಂಡು ಹೋಗಿ ಅಲ್ಲೊಂದು ನೀರಿಲ್ಲದ ಬಾವಿಯಲ್ಲಿ ಬಿದ್ದಿತು. ಹುಡುಗರು ಚೆಂಡನ್ನು ಮೇಲಕ್ಕೆ ತೆಗೆಯಲು ನೋಡಿದರು; ಅವರ ಕೈಯಲ್ಲಾಗಲಿಲ್ಲ. ಆ ವೇಳೆಗೆ ಒಬ್ಬ ವೃದ್ಧ ಬ್ರಾಹ್ಮಣನು ಆ ಮಾರ್ಗವಾಗಿ ಹೋಗುತ್ತಿದ್ದನು. ಅವನು ಕೃಶ ಕಾಯನೂ ಕೃಷ್ಣ ವರ್ಣನೂ ಆಗಿದ್ದನು. ವಯಸ್ಸಾಗಿದ್ದುದರಿಂದ ಅವನ ಕೂದಲು ನರೆತಿದ್ದಿತು. ಅವನು ನೋಡುವುದಕ್ಕೆ ಬಡವನಾಗಿಯೂ ಇದ್ದನು. ಅವನನ್ನು ಕಂಡು ರಾಜಕುಮಾರರೆಲ್ಲರೂ ಹೋಗಿ ಅವನ ಸುತ್ತ ನಿಂತರು. ಆ ಬಡ ಬ್ರಾಹ್ಮಣನು ಆ ಹುಡುಗರನ್ನು ನೋಡಿ ನಸುನಗುತ್ತ—"ಬಾಲಕರೇ! ನೀವು ಮಹಾ ಪ್ರತಾಪಶಾಲಿಗಳು, ಭರತ ವಂಶದಲ್ಲಿ ಹುಟ್ಟಿದವರು; ಆದರೂ, ನೀರಿಲ್ಲದ ಬಾವಿಯಲ್ಲಿ ಬಿದ್ದ ಚೆಂಡನ್ನು ತೆಗೆಯಲಾರಿರಲ್ಲ! ನಿಮಗೆ ಸ್ವಲ್ಪವಾದರೂ ಅಸ್ತ್ರ ಶಿಕ್ಷೆಯಾಗಲಿಲ್ಲವೋ? ನಾನು ಆ ಚೆಂಡನ್ನು ಎತ್ತುವೆನು, ನೋಡಿ" ಎಂದು ತನ್ನ ಬೆರಳಿನಲ್ಲಿದ್ದ ಉಂಗುರವನ್ನು ಕಳಚಿ ಬಾವಿಯೊಳಗೆ ಎಸೆದನು. ಮೊದಲು, ಆ ಮುದುಕನು ಅಪೂರ್ವ ಕೌಶಲದಿಂದ ದರ್ಭೆಯ ಕೂರ್ಚೆಯನ್ನುಪಯೋಗಿಸಿ ಆ ಕ್ರೀಡಾ ಕಂದುಕವನ್ನು ಮೇಲಕ್ಕೆತ್ತಿದನು. ಆಮೇಲೆ ಬಿಲ್ಲಿಗೆ ಬಾಣಗಳನ್ನು ತೊಡಿಸಿ ಬಾವಿಯೊಳಗೆ ಬಿಟ್ಟನು. ಬಾಣಗಳಿಂದ ಆ ಬ್ರಾಹ್ಮಣನು ಉಂಗುರವನ್ನು ಮೇಲಕ್ಕೆತ್ತಿ ತೆಗೆದುಹಾಕಿದನು. ಆಗ ರಾಜಕುಮಾರರು, ಮಾಸಿದ ಬಟ್ಟೆಯನ್ನುಟ್ಟು ನಿಂತಿದ್ದ ಆ ಕೃಶನಾದ ಬಡ ಮುದುಕನ ಅಮೋಘ ಶರ ಸಂಧಾನವನ್ನು ನೋಡಿ ಅವನ ಅಪೂರ್ವ ನಿಪುಣತೆಗೆ ಬೆರಗಾಗಿ ಒಬ್ಬರ ಮೊಗವನ್ನೊಬ್ಬರು ನೋಡತೊಡಗಿದರು. ಅವರೊಳಗೆ ಸರ್ವ ಜ್ಯೇಷ್ಠನಾದ ಯುಧಿಷ್ಠಿರನು ಕೈಮುಗಿದು ನಿಂತು—"ಆರ್ಯರೇ!

ತಮ್ಮ ಸಾಮರ್ಥ್ಯವನ್ನು ನೋಡಿದೆನು. ಈ ಕಾರ್ಯವು ಇನ್ನಾರಿಗೂ ಸಾಧ್ಯವಲ್ಲ. ತಮ್ಮ ಜಾಣ್ಮೆಯಿಂದ ನನಗೆ ವಿಸ್ಮಯವಾಗುತ್ತಿದೆ. ನಾನು ತಮ್ಮ ಪರಿಚಯವನ್ನು ಬಯಸುತ್ತಿದ್ದೇನೆ. ಯಾವ ಆಕ್ಷೇಪಣೆಯೂ ಇಲ್ಲವಾದರೆ ತಾವಾರೋ ಅಪ್ಪಣೆಕೊಡಿಸಿದಲ್ಲಿ ನಾನು ಕೃತಾರ್ಥನಾಗುವೆನು'' ಎಂದನು.

ಆ ವೃದ್ಧನು, ಎತ್ತಿಕೊಳ್ಳುತ್ತಲೆ ತನ್ನ ಪರಿಚಯವನ್ನು ಮಾಡಿಕೊಡದೆ, ಚಾತುರ್ಯದಿಂದ—''ವತ್ಸ! ನೀನು ಭೀಷ್ಮನ ಹತ್ತಿರ ಹೋಗಿ ನನ್ನ ಆಕಾರ ಪ್ರಕಾರವನ್ನು ಅವನಿಗೆ ತಿಳಿಸಿ, ನಾನು ಇಲ್ಲಿರುವೆನೆಂದು ಹೇಳು'' ಎಂದನು.

ಆ ಬ್ರಾಹ್ಮಣನು ಹೇಳಿದ ಹಾಗೆಯೇ ಯುಧಿಷ್ಠಿರನು ತಮ್ಮಂದಿರೊಡಗೂಡಿ ಮನೆಗೆ ಹೋಗಿ ಭೀಷ್ಮನ ಸಂಗಡ ಇಂತೆಂದು ಹೇಳಿದನು:—''ಆರ್ಯನೆ! ನಾವು ಊರ ಹೊರಗೆ ಚೆಂಡಾಡುತ್ತಿದ್ದೆವು. ಚೆಂಡು ಒಂದು ಹಾಳು ಬಾವಿಗೆ ಹೋಗಿ ಬಿದ್ದಿತು. ಏನ ಮಾಡಿದರೂ ಚೆಂಡನ್ನು ಮೇಲಕ್ಕೆತ್ತುವುದಕ್ಕೆ ನಮ್ಮಿಂದಾಗಲಿಲ್ಲ. ಆ ಮಾರ್ಗವಾಗಿ ಹೋಗುತ್ತಿದ್ದ ಒಬ್ಬ ಬಡ ಬ್ರಾಹ್ಮಣನನ್ನು ಕೂಗಿ ಕೇಳಿಕೊಂಡೆವು. ಅವನು ಆ ಚೆಂಡನ್ನು ಒಂದು ಹಿಡಿ ದರ್ಭೆಯಿಂದ ಮೇಲಕ್ಕೆತ್ತಿಕೊಟ್ಟನು. ಅಲ್ಲದೆ, ತನ್ನ ಉಂಗುರವನ್ನು ಬಾವಿಯೊಳಗೆ ಹಾಕಿ, ಬಾಣಗಳನ್ನು ಬಿಟ್ಟು ಅದನ್ನು ಮೇಲಕ್ಕೆತ್ತಿ ತೋರಿಸಿದನು. ಆತನ ಕೌಶಲಕ್ಕೆ ನಾವು ಬೆರಗಾಗಿ ಆತನ ಪೂರ್ವೋತ್ತರವನ್ನು ವಿಚಾರಮಾಡಲು, ಅದೊಂದನ್ನೂ ಹೇಳದೆ, ತನ್ನ ರೂಪ ಗುಣಾದಿಗಳನ್ನು ನಿನಗೆ ವಿವರಿಸುವಂತೆ ಹೇಳಿ ನಮ್ಮನ್ನು ಕಳುಹಿಸಿಬಿಟ್ಟನು. ಆ ಬ್ರಾಹ್ಮಣನು ಕಪ್ಪಗಿದ್ದಾನೆ, ಕೂದಲು ನರೆತಿದೆ, ಅವನ ಮಾಸಿದ ಬಟ್ಟೆಗಳನ್ನು ನೋಡುವಲ್ಲಿ ಬಡವನಾಗಿ ತೋರುವನು. ಅವನ ರೂಪವನ್ನಾಗಲಿ ವೇಷವನ್ನಾಗಲಿ ನೋಡಿದ ಮಾತ್ರಕ್ಕೆ ಅವನ ಸಾಮರ್ಥ್ಯವು ತಿಳಿಯಬರುವುದಿಲ್ಲ. ಆ ಚತುರ ಬ್ರಾಹ್ಮಣನು ಊರಿನಾಚೆ ಇರುವನು.''

ಯುಧಿಷ್ಠಿರನ ಮಾತನ್ನು ಕೇಳುತ್ತಲೆ ಭೀಷ್ಮನು ಆ ಬ್ರಾಹ್ಮಣನು ಧನುರ್ವೇದ ವಿಶಾರದನಾದ ದ್ರೋಣಾಚಾರ್ಯನೆಂದು ತಿಳಿದು

ಕೊಂಡನು. ಕುರು ಪಿತಾಮಹನು ರಾಜಪುತ್ರರ ಶಿಕ್ಷಣಾರ್ಥವಾಗಿ ತಕ್ಕ ಗುರುವನ್ನಿಡಬೇಕೆಂದು ಯೋಚಿಸುತ್ತಿದ್ದನು. ಆ ಸಮಯಕ್ಕೆ ಸರಿಯಾಗಿ ದ್ರೋಣಾಚಾರ್ಯನು ಬಂದುದನ್ನು ತಿಳಿದು ಸಂತೋಷಿಸಿ ಅವನಿದ್ದೆಡೆಗೆ ಹೋಗಿ, ಅವನನ್ನು ಕಂಡು ಯಥೋಚಿತ ಮರ್ಯಾದೆಯಿಂದ ರಾಜಮಂದಿರಕ್ಕೆ ಕರೆದುಕೊಂಡು ಬಂದು ಸತ್ಕರಿಸಿ ಇಂತೆಂದನು:—"ಪೂಜ್ಯರೇ! ನಾನು ರಾಜಕುಮಾರರನ್ನು ಧನುರ್ವೇದ ಕುಶಲರಾದ ಶಿಕ್ಷಕರ ಬಳಿಗೆ ಕಳುಹಿಸಬೇಕೆಂದು ಯೋಚಿಸುತ್ತಿದ್ದೆನು. ಭಾಗ್ಯವಶದಿಂದ ಈ ಸಮಯಕ್ಕೆ ಸರಿಯಾಗಿ ನನಗೆ ತಮ್ಮ ದರ್ಶನವು ಲಭಿಸಿತು. ತಾವು ಅಕಸ್ಮಾತ್ತಾಗಿ ದಯಮಾಡಿ ನನ್ನನ್ನು ಕೃತಾರ್ಥನನ್ನು ಮಾಡಿದಿರಿ. ಈಗ ತಾವು ಅನುಗ್ರಹಪೂರ್ವಕವಾಗಿ ಈ ರಾಜಕುಮಾರರ ಅಸ್ತ್ರಶಿಕ್ಷಣ ಭಾರವನ್ನು ವಹಿಸಿ ಭರತವಂಶದ ಮಂಗಳ ಸಾಧನವನ್ನು ಮಾಡಬೇಕೆಂದು ಬೇಡುತ್ತೇನೆ. ಕುಮಾರರು ನಿರಂತರದಲ್ಲೂ ತಮ್ಮ ಆಜ್ಞೆಯಂತೆ ನಡೆದುಕೊಳ್ಳುವರು; ಕೌರವರೆಲ್ಲರೂ ತಮಗೆ ಸಂತೋಷವಾಗುವಂತೆ ವರ್ತಿಸುವರು. ರಾಜಸೇವಕರು ತಮಗೆ ಅಭೀಷ್ಟ ಪದಾರ್ಥಗಳನ್ನು ತಂದೊದಗಿಸುವುದಕ್ಕೆ ಸಿದ್ಧರಾಗಿರುವರು. ತಮಗೆ ಯಾವಾಗ ಏನು ಬೇಕೋ ಆ ಕ್ಷಣವೇ ಅದನ್ನು ತರಿಸಿಕೊಂಡು ಸುಖವಾಗಿರಬಹುದು."

ಭೀಷ್ಮನ ಶಿಷ್ಟಾಚಾರದಿಂದಲೂ ಸೌಜನ್ಯದಿಂದಲೂ ದ್ರೋಣಾಚಾರ್ಯನು ಪರಿತುಷ್ಟನಾಗಿ ರಾಜಪುತ್ರರ ಶಿಕ್ಷಣ ಭಾರವನ್ನು ವಹಿಸಲು ಸಮ್ಮತಿಸಿದನು. ಭೀಷ್ಮನು ಶುಭದಿನ ಶುಭ ಮುಹೂರ್ತದಲ್ಲಿ ಕುಮಾರರನ್ನು ಅಸ್ತ್ರವಿದ್ಯಾಭ್ಯಾಸಕ್ಕಾಗಿ ದ್ರೋಣಾಚಾರ್ಯನ ವಶಮಾಡಿದನು. ದ್ರೋಣಾಚಾರ್ಯನೂ ಅವರನ್ನು ಅಂತೇವಾಸಿಗಳನ್ನಾಗಿ ಸ್ವೀಕರಿಸಿ, ಅವರಿಗೆ ಯಥಾವಿಧಾನವಾಗಿ ಧನುರ್ವಿದ್ಯೆಯನ್ನು ಕಲಿಸತೊಡಗಿದನು.

ದ್ರೋಣಾಚಾರ್ಯನು ಹಸ್ತಿನಾಪುರದಲ್ಲಿದ್ದುಕೊಂಡು ಕುರುವಂಶದ ರಾಜಕುಮಾರರಿಗೆ ಅಸ್ತ್ರವಿದ್ಯೆಯನ್ನು ಕಲಿಸುತ್ತಿರುವ ವಿಧಾನವನ್ನು ಕೇಳಿ ಸೂತನ ಮಗ ಕರ್ಣನೂ ಮತ್ತೆ ಕೆಲವರು ರಾಜಕುಮಾರರೂ

ಆ ವಿದ್ಯೆಯನ್ನು ಕಲಿಯಲಿಕ್ಕೆ ಆಚಾರ್ಯನಲ್ಲಿಗೆ ಹೋದರು. ಆತನ ಶಿಷ್ಯ ಸಂಖ್ಯೆಯು ಹೆಚ್ಚಿತು. ಆತನ ಶಿಕ್ಷಣ ಕ್ರಮದ ಖ್ಯಾತಿಯನ್ನು ಲೋಗರು ಹೊಗಳಲಾರಂಭಿಸಿದರು. ಕೀರ್ತಿಯ ಹಿಂದೆಯೇ ಸನ್ಮಾನವೂ ಸಂಪತ್ತೂ ಬರಲಾರಂಭಿಸಿದುವು. ಕೆಲವು ದಿನಗಳ ಹಿಂದೆ ದ್ರೋಣಾಚಾರ್ಯನು ಅರ್ಥಾಭಾವದಿಂದ ಅನ್ನಕ್ಕೆ ಕಷ್ಟಪಡುತ್ತಿದ್ದನು; ಈಗ ಅವನು ಧರ್ಮಾತ್ಮ ಭೀಷ್ಮನ ಅನುಗ್ರಹದಿಂದ ರಾಜಭೋಗ್ಯ ವಸ್ತುಗಳನ್ನು ಉಪಭೋಗಿಸುವಂತಾಯಿತು. ದೀಪ್ತಿಮಯ ಮಣಿಯು ರಾಜಾಧಿರಾಜನ ಕಿರೀಟವನ್ನಲಂಕರಿಸಿದರೂ ಅದು ರತ್ನಪರೀಕ್ಷೆ ಬಲ್ಲವನ ಕೈಸೇರದ ಪಕ್ಷದಲ್ಲಿ ಅದರ ಮಹತ್ವ ಗೋಚರವಾಗದು; ಪೃಥ್ವೀಪತಿಯ ಲಲಾಟದೇಶದಲ್ಲಿ ಅದಕ್ಕೆ ಸ್ಥಾನವೂ ದೊರೆಯದು; ಗುಣಗ್ರಾಹಿಗಳ ಅಭಾವದಿಂದ ಆದರಿಸುವರಿಲ್ಲದೆ ಅದು ತಿಮಿರಮಯವಾದ ಗಣಿಯ ಗರ್ಭದಲ್ಲಿಯೇ ಬಿದ್ದಿರುವುದು. ಹಾಗೆಯೇ, ಭೀಷ್ಮನು ಗುಣಗ್ರಾಹಿಯಲ್ಲದಿದ್ದಲ್ಲಿ, ಅವನು ಗುಣವನ್ನು ಕಂಡು ಗೌರವಿಸದಿದ್ದ ಪಕ್ಷದಲ್ಲಿ, ದ್ರೋಣಾಚಾರ್ಯನು ಅಜ್ಞಾತನಾಗಿರುತ್ತಿದ್ದನು; ಅಸ್ತ್ರ ವಿದ್ಯೆಯಲ್ಲಿ ಅವನಿಗಿದ್ದ ನಿಪುಣತೆಯು ಅವನ ಸಂಗಡಲೇ ಹೋಗುತ್ತಿದ್ದಿತು. ಜನರು ಅವನ ಅಪೂರ್ವ ತೇಜಸ್ಸನ್ನು ಕಂಡು ಆಹ್ಲಾದಪಡುವುದಕ್ಕಾಗಲಿ, ಅವನ ಅಸ್ತ್ರಚಾಲನ ಶಕ್ತಿಯನ್ನು ನೋಡಿ ವಿಸ್ಮಯಪಡುವುದಕ್ಕಾಗಲಿ, ಅವನ ಶಿಕ್ಷಾಪದ್ಧತಿಯನ್ನು ಗ್ರಹಿಸಿ ಪ್ರಶಂಸಿಸುವುದಕ್ಕಾಗಲಿ ಅವಕಾಶವಿರುತ್ತಿರಲಿಲ್ಲ. ಭೀಷ್ಮನ ಉದಾರ ಸ್ವಭಾವದಿಂದಲೂ ಗುಣಗ್ರಹಣ ಶಕ್ತಿಯಿಂದಲೂ ಆಚಾರ್ಯನ ಬಡತನವು ಹರಿಯಿತು. ಅವನ ಕೀರ್ತಿಯು ದಿಕ್ತಟಕ್ಕೆ ಹಬ್ಬಿತು. ಅವನು ತನ್ನ ಅವಸ್ಥೆಯ ಪರಿವರ್ತನದಿಂದ ಸಂತುಷ್ಟನಾಗಿ ಶಿಷ್ಯರಿಗೆ ಅಸ್ತ್ರವಿದ್ಯೆಯನ್ನು ಪ್ರೀತಿಪೂರ್ವಕವಾಗಿ ಹೇಳಿಕೊಡುತ್ತಿದ್ದನು.

ಧನುರ್ವಿದ್ಯೆಯಲ್ಲಿ ಅರ್ಜುನನು ಉತ್ತರೋತ್ತರಾಭಿವೃದ್ಧಿಯನ್ನು ಹೊಂದುತ್ತ ಶಿಷ್ಯರೊಳಗೆಲ್ಲ ಅಧಿಕನೆನಿಸಿಕೊಂಡನು. ಸೂತ ತನಯನಾದ ಕರ್ಣನು ದುರ್ಯೋಧನಾದಿಗಳ ಆಶ್ರಯದಲ್ಲಿದ್ದು, ಅವರ ಸಹವಾಸದಿಂದ ಅವರ ಪಕ್ಷವನ್ನು ವಹಿಸಿ, ಪಾಂಡವರನ್ನು ದ್ವೇಷಿಸುತ್ತಲೂ

ಅವಮಾನಪಡಿಸುತ್ತಲೂ ಇದ್ದನು. ಧನುರ್ವಿದ್ಯೆಯಲ್ಲಿ ಅರ್ಜುನನ ಕೌಶಲವನ್ನು ನೋಡಿ ಅವನು ಸೈರಿಸದಿದ್ದನೇ ಹೊರತು ಅವನನ್ನು ನಿವಾರಿಸಲಾರದೆ ಹೋದನು. ದ್ರೋಣಾಚಾರ್ಯನು ಅರ್ಜುನನ ಶರ ಸಂಧಾನ ಕೌಶಲವನ್ನೂ ಹಸ್ತಲಾಘವವನ್ನೂ ನೋಡಿ ಸುಪ್ರೀತನಾಗು ತ್ತಿದ್ದನು. ಆಚಾರ್ಯನ ಉಪದೇಶವು ಸತ್ಪಾತ್ರದಲ್ಲಿ ವಿನಿಯೋಗ ವಾದುದರಿಂದ ಸರ್ವಾಂಶದಲ್ಲಿಯೂ ಸಫಲವಾಯಿತು. ಅರ್ಜುನನು ಶರ ಸಂಧಾನ ಪ್ರಯೋಗ ಸಂಹಾರಗಳಲ್ಲಿ ಗುರುವಿಗೆ ಸಮನೆನಿಸಿದನು. ಅವನು ಅಸದೃಶ ಚಾತುರ್ಯದಿಂದ ಬಿಲ್ಲಿಗೆ ಬಾಣವನ್ನು ತೊಡಿಸುವನು; ಅಸಾಧಾರಣ ಕ್ಷಿಪ್ರಕಾರಿತೆಯಿಂದ ಬಾಣವನ್ನು ಪ್ರಯೋಗಮಾಡು ವನು; ಅವ್ಯರ್ಥ ಸಂಧಾನದಿಂದ ಗುರಿಯಿಟ್ಟು ಕೃತಕಾರ್ಯನಾಗುವನು; ಬಂದ ಬಾಣಗಳನ್ನು ನಿಮಿಷಮಾತ್ರದಲ್ಲಿ ಸಂಹಾರ ಮಾಡುವನು. ಇದೆಲ್ಲವನ್ನೂ ಕಂಡು ಅವನ ಸತೀರ್ಥರು ಆಶ್ಚರ್ಯಪಡುವರು; ಆಚಾರ್ಯನು ತಾನು ಕೃತಾರ್ಥನಾದೆನೆನ್ನುವನು.

ಒಂದು ದಿನ ದ್ರೋಣಾಚಾರ್ಯನು ಶಿಷ್ಯರ ಲಕ್ಷ್ಯಭೇದ ಕೌಶಲ ವನ್ನು ಪರೀಕ್ಷಿಸಬೇಕೆಂದು ಒಂದು ಮರದ ಕೊಂಬೆಯ ಮೇಲೆ ಕೃತ್ರಿಮ ನೀಲ ಪಕ್ಷಿಯನ್ನು ಇಡಿಸಿ ಶಿಷ್ಯರೆಲ್ಲರನ್ನೂ ಕರೆದು—"ನೀವು ಬಿಲ್ಲಿಗೆ ಅಂಬನ್ನು ತೊಡಿಸಿ ಸಿದ್ಧರಾಗಿರಿ; ನಾನು ಒಬ್ಬೊಬ್ಬರನ್ನಾಗಿ ಕರೆದು ಆಜ್ಞೆಯನ್ನು ಕೊಡುವೆನು; ಆಜ್ಞೆಯನ್ನು ಕೊಡುತ್ತಲೆ ಮರದ ಮೇಲಿರುವ ಪಕ್ಷಿಯ ತಲೆಯನ್ನು ಹೊಡೆದು ಕೆಡವಿರಿ" ಎಂದನು. ಆಚಾರ್ಯನ ಅಪ್ಪಣೆಯ ಪ್ರಕಾರವಾಗಿ ಮೊದಲು ಯುಧಿಷ್ಠಿರನು ಬಿಲ್ಲಿಗೆ ಬಾಣವನ್ನೇರಿಸಿ ಪಕ್ಷಿಗೆ ಗುರಿಯಿಟ್ಟು ನಿಂತನು. ಆಚಾರ್ಯನು ಯುಧಿಷ್ಠಿರನನ್ನು ಸಂಬೋಧಿಸಿ—"ಎಲೈ, ವತ್ಸ! ಮರದ ಮೇಲಿರುವ ಪಕ್ಷಿಯನ್ನು ನೋಡುತ್ತೀಯೋ?" ಎಂದನು. ಯುಧಿಷ್ಠಿರನು ನೋಡುತ್ತೇನೆಂದನು. ದ್ರೋಣಾಚಾರ್ಯನು—"ಈ ಮರವನ್ನೂ ನನ್ನನ್ನೂ ನಿನ್ನ ತಮ್ಮಂದಿರನ್ನೂ ನೋಡುತ್ತೀಯೋ?" ಎಂದು ಮತ್ತೆ ಯುಧಿಷ್ಠಿರನನ್ನು ಕೇಳಿದನು. ಅದಕ್ಕವನು "ಈ ಮರವನ್ನೂ ತಮ್ಮನ್ನೂ ತಮ್ಮಂದಿರನ್ನೂ ವೃಕ್ಷದ ಮೇಲಿರುವ ಪಕ್ಷಿಯನ್ನೂ

ನೋಡುತ್ತೇನೆ'' ಎಂದನು. ಆಚಾರ್ಯನು ಅದನ್ನು ಕೇಳಿ ವಿಷಣ್ಣ ಮುಖನಾಗಿ—''ವತ್ಸ! ನೀನು ಗುರಿಯಿಡಲಾರೆ, ಇತ್ತ ಬಾ'' ಎಂದನು.

ತರುವಾಯ, ದುರ್ಯೋಧನಾದಿಗಳು ಪರೀಕ್ಷಾರ್ಥವಾಗಿ ಒಬ್ಬೊಬ್ಬರಾಗಿ ಹೋಗಿ ನಿಂತರು. ಅವರೊಳಗಾರೂ ಆಚಾರ್ಯನು ಕೋರಿದ ಉತ್ತರವನ್ನು ಕೊಡಲರಿಯದೆ ಹೋದರು. ಕಟ್ಟಕಡೆಗೆ ಆಚಾರ್ಯನು ಮುಗುಳು ನಗೆಯಿಂದ ಅರ್ಜುನನನ್ನು ಕರೆದು—''ಎಲೈ ವತ್ಸನೇ! ಈ ಸಾರಿ ನೀನು ಲಕ್ಷ್ಯಭೇದವನ್ನು ಮಾಡು; ಬಿಲ್ಲಿಗೆ ಬಾಣವನ್ನು ತೊಡಿಸಿ ಇಲ್ಲಿ ಬಂದು ನಿಲ್ಲು'' ಎಂದನು. ಅರ್ಜುನನು ಗುರುವಿನ ಆಜ್ಞಾನುಸಾರವಾಗಿ ಧನುಸ್ಸಿಗೆ ಬಾಣವನ್ನೇರಿಸಿ ಪಕ್ಷಿಯ ತಲೆಗೆ ಗುರಿಯಿಟ್ಟು ನಿಂತನು. ಆಗ ದ್ರೋಣಾಚಾರ್ಯನು ಮೊದಲಿನಂತೆಯೇ, ''ವತ್ಸನೇ! ವೃಕ್ಷವನ್ನೂ ವೃಕ್ಷದ ಮೇಲಿರುವ ಪಕ್ಷಿಯನ್ನೂ ನನ್ನನ್ನೂ ನಿನ್ನ ಅಣ್ಣ ತಮ್ಮಂದಿರನ್ನೂ ನೋಡುತ್ತೀಯೋ?'' ಎಂದು ಕೇಳಿದನು. ಅದಕ್ಕೆ ಅರ್ಜುನನು—''ಸ್ವಾಮಿ! ನಾನು ವೃಕ್ಷವನ್ನು ಕಾಣೆನು; ತಾವು ನನ್ನ ದೃಷ್ಟಿಗೆ ಬೀಳುವುದಿಲ್ಲ; ಅಣ್ಣ ತಮ್ಮಂದಿರೂ ಕಣ್ಣಿಗೆ ಕಾಣೆಸರು; ಪಕ್ಷಿಯೊಂದೇ ಕಾಣಿಸುತ್ತಿರುವುದು'' ಎಂದು ಉತ್ತರವನ್ನು ಕೊಟ್ಟನು. ಆಚಾರ್ಯನು ಆ ಉತ್ತರವನ್ನು ಕೇಳಿ ಆಹ್ಲಾದಭರಿತನಾಗಿ—''ಪಕ್ಷಿಯ ಅವಯವಗಳೆಲ್ಲವೂ ಕಾಣಿಸುತ್ತಿವೆಯೋ?'' ಎಂದು ಕೇಳಿದುದಕ್ಕೆ, ನಿಮಿಷಮಾತ್ರದಲ್ಲಿ ಅರ್ಜುನನು—''ಇಲ್ಲ, ಅದರ ತಲೆಯೊಂದೇ ನನ್ನ ಕಣ್ಣಿಗೆ ಕಾಣುತ್ತಿದೆ'' ಎಂದನು. ಆಚಾರ್ಯನು ಪರಮ ಸಂತೋಷವನ್ನು ಹೊಂದಿ ಬಾಣ ಪ್ರಯೋಗ ಮಾಡೆಂದನು. ಅರ್ಜುನನು ಗುರುವಿನ ಬಾಯಿಂದ ಮಾತು ಹೊರಟಿತೋ ಇಲ್ಲವೋ ಲಕ್ಷ್ಯಕ್ಕೆ ಬಾಣವನ್ನು ಬಿಟ್ಟನು. ಪಕ್ಷಿಯ ತಲೆಯು ಕಳಚಿ ಬಿದ್ದಿತು. ಸತೀರ್ಥ್ಯರು ಅರ್ಜುನನ ಜಾಣತನಕ್ಕೆ ಬೆರಗಾದರು. ಅಸ್ತ್ರ ಪರೀಕ್ಷೆಯಲ್ಲಿ ಅರ್ಜುನನು ಗೆದ್ದುದನ್ನು ಕಂಡು ಆಚಾರ್ಯ ದ್ರೋಣನು ಅವನೇ ಸರ್ವೋತ್ಕೃಷ್ಟ ಧನುರ್ಧರನೆಂದೆಣಿಸಿದನು. ದ್ರೋಣಾಚಾರ್ಯನ ಶಿಷ್ಯಮಂಡಲಿಯಲ್ಲಿ ಅರ್ಜುನನು ಧನುರ್ಧರನೆನಿಸಿಕೊಂಡಂ

ತೆಯೇ ಖಡ್ಗ ಪ್ರಯೋಗದಲ್ಲಿಯೂ ರಥ ಯುದ್ಧದಲ್ಲಿಯೂ ಕೂಡ ಪಾರದರ್ಶಿಯೆನಿಸಿಕೊಂಡನು. ಯುಧಿಷ್ಠಿರನು ಉತ್ಕೃಷ್ಟ ರಥಿಯಾದನು. ಪ್ರಚಂಡ ಬಲಶಾಲಿಯಾದ ಭೀಮಸೇನನು ಗದಾಯುದ್ಧ ಕ್ರಮವನ್ನು ಕಲಿತು ಅದರಲ್ಲಿ ಸಮಧಿಕ ಪ್ರಸಿದ್ಧಿಯನ್ನು ಸಂಪಾದಿಸಿದನು. ನಕುಲ ಸಹದೇವರು ಖಡ್ಗಪ್ರಯೋಗದಲ್ಲಿ ಚತುರರಾದರು. ದುರ್ಯೋಧನನು ಗದಾ ಪ್ರಯೋಗದಲ್ಲಿ ನಿಪುಣನಾದನು. ಬುದ್ಧಿ, ಉತ್ಸಾಹ, ತೇಜಸ್ವಿತೆಗಳಲ್ಲಿ ಅರ್ಜುನನೇ ಶ್ರೇಷ್ಠ ಪದವನ್ನು ಪಡೆದನು; ಅಸ್ತ್ರ ವಿದ್ಯೆಯಲ್ಲಿ ಯಾರೂ ಅವನಿಗೆ ಸಾಟಿಯಿರಲಿಲ್ಲ. ಆಚಾರ್ಯನು ಅರ್ಜುನನ ಅನುಪಮ ಗುರು ಭಕ್ತಿಯನ್ನೂ ಅಸ್ತ್ರ ವಿದ್ಯೆಯಲ್ಲಿ ಅವನ ಅಸಾಮಾನ್ಯ ಪಾರದರ್ಶಿತೆಯನ್ನೂ ಮೆಚ್ಚಿ—"ವತ್ಸ! ಈ ಲೋಕದಲ್ಲಿ ಯಾವ ಧನುರ್ಧರರೂ ನಿನಗೆ ಸಮಾನರಲ್ಲ" ಎಂದು ಅವನನ್ನು ಹೊಗಳಿದನು.

ಕುಮಾರರು ವಿಧಿವತ್ತಾಗಿ ಶಿಕ್ಷೆಯನ್ನು ಪಡೆದು ಅಸ್ತ್ರಪ್ರಯೋಗದಲ್ಲಿ ನಿಪುಣರಾಗಿರುವ ಸಂಗತಿಯನ್ನು ಭೀಷ್ಮನು ದ್ರೋಣಾಚಾರ್ಯನ ಮುಖದಿಂದ ಕೇಳಿ ನಿರತಿಶಯವಾಗಿ ಆನಂದಪಟ್ಟು ಆಚಾರ್ಯನನ್ನು ಕುರಿತು ವಿನಯಪೂರ್ವಕವಾಗಿಂತೆಂದನು—"ಸ್ವಾಮಿಾ! ತಮ್ಮ ಅನುಗ್ರಹದಿಂದ ನಾನು ಕೃತಾರ್ಥನಾದೆನು. ತಾವು ರಾಜಕುಮಾರರಿಗೆ ವಿದ್ಯಾದಾನಮಾಡಿ ನಮ್ಮ ಕುಲಕ್ಕೆ ಪರಮೋಪಕಾರವನ್ನು ಮಾಡಿದಿರಿ. ತಮ್ಮ ಶಿಕ್ಷಾದಾನ ಕೌಶಲದಿಂದಲೂ ಧನುರ್ವೇದ ಪಾರದರ್ಶಿತೆಯಿಂದಲೂ ಕುಮಾರರಿಗೆ ಸಮಿಾಚೀನವಾಗಿ ಶಿಕ್ಷೆಯಾಗಿದೆಯೆಂಬುದಕ್ಕೆ ಸಂದೇಹವಿಲ್ಲ. ತಾವು ಧೃತರಾಷ್ಟ್ರನಿಗೆ ಈ ವಿಷಯವನ್ನು ತಿಳಿಸಿ ಕುಮಾರರ ಅಸ್ತ್ರ ಕ್ರೀಡಾ ಪ್ರದರ್ಶನವಾಗುವುದಕ್ಕೆ ಮಹಾರಾಜನ ಅನುಮತಿಯನ್ನು ಪ್ರಾರ್ಥಿಸಿರಿ. ರಾಜನ ಅಪ್ಪಣೆಯಿಲ್ಲದೆ ಆ ಕಾರ್ಯವನ್ನು ನಡೆಯಿಸಲಾಗದು."

ಭೀಷ್ಮನು ಹೇಳಿದಂತೆ ದ್ರೋಣಾಚಾರ್ಯನು ಧೃತರಾಷ್ಟ್ರನ ಬಳಿಗೆ ಹೋಗಿ, ಭೀಷ್ಮ ವಿದುರಾದಿಗಳ ಸಮಕ್ಷದಲ್ಲಿ ಧೃತರಾಷ್ಟ್ರನನ್ನು ಸಂಬೋಧಿಸಿ—"ಮಹಾರಾಜ! ಕುಮಾರರು ಧನುರ್ವೇದದಲ್ಲಿ

ಕೃತವಿದ್ಯರಾಗಿರುವರು. ಅಪ್ಪಣೆಯಾದರೆ, ಅವರವರ ಕೌಶಲವನ್ನು ತೋರಿಸುವರು" ಎಂದನು.

ಅದಕ್ಕೆ ಧೃತರಾಷ್ಟ್ರನು—"ಸ್ವಾಮಿನ್! ತಾವು ನಮಗೊಂದು ಮಹತ್ಕಾರ್ಯವನ್ನು ಸಾಧಿಸಿಕೊಟ್ಟಿರಿ. ಕುಮಾರರು ತಮ್ಮ ಅನುಗ್ರಹದಿಂದ ನಮ್ಮ ಮಂಡಲಿಯಲ್ಲಿ ಪ್ರಾಜ್ಞರಾದರು. ಬಾಲಕರ ಅಸ್ತ್ರ ಕೌಶಲ ಪ್ರದರ್ಶನಕ್ಕೆ ಯಾವ ಸ್ಥಲದಲ್ಲಿ ಯಾವ ಮಾದರಿಯ ರಂಗ ಭೂಮಿಯನ್ನು ಕಟ್ಟಬೇಕೋ ಅಪ್ಪಣೆಯಾದರೆ ತಮ್ಮ ಆಜ್ಞೆಯಂತೆ ನಡೆಯಿಸುವೆನು. ನನಗೆ ಕಣ್ಣಿಲ್ಲದೆ ಹೋಯಿತಲ್ಲಾ ಎಂದು ಈ ದಿನ ನಾನು ಪರಿತಾಪ ಪಡಬೇಕಾಗಿದೆ. ಮಾಡುವುದೇನು? ನನಗೆ ಕುಮಾರರ ಕೌಶಲವನ್ನು ಕಣ್ಣಿಂದ ನೋಡುವ ಪ್ರಾಪ್ತಿಯಿಲ್ಲ; ನೋಡುವವರಿಂದ ವೃತ್ತಾಂತವನ್ನು ಕೇಳಿ ಸಂತೋಷಪಡುವೆನು" ಎಂದು ಆಚಾರ್ಯನ ಆಜ್ಞಾನುಸಾರವಾಗಿ ರಂಗಭೂಮಿಯನ್ನು ಕಟ್ಟಿಸುವಂತೆ ಧರ್ಮ ವತ್ಸಲ ವಿದುರನಿಗೆ ಹೇಳಿದನು.

ವಿದುರನು ರಾಜಾಜ್ಞೆಯು ಶಿರೋಧಾರ್ಯವೆಂದು, ಆಚಾರ್ಯನು ಸಂಕಲ್ಪಿಸಿದ್ದ ಮೇರೆಗೆ ಅವನು ತೋರಿಸಿದ ಎಡೆಯಲ್ಲಿ ವಿಸ್ತಾರವಾದ ರಂಗಭೂಮಿಯನ್ನು ಕಟ್ಟಿಸಿದನು. ಅಲ್ಲಿ, ಪ್ರೇಕ್ಷಾಗಾರವು ಚಿತ್ರವಿಚಿತ್ರ ವಾದ ಶಿಲ್ಪ ಕಾರ್ಯದಿಂದಲೂ ನಾನಾ ವರ್ಣದ ಮಣಿಗಳಿಂದಲೂ ಶೋಭಿಸುತ್ತಿದ್ದಿತು. ಆಯಾ ಶ್ರೇಣಿಯ ಪ್ರೇಕ್ಷಕರಿಗೆ ತಕ್ಕಹಾಗೆ ಬೇರೆ ಬೇರೆಯ ಸ್ಥಲವು ಏರ್ಪಟ್ಟಿತು. ದ್ರೋಣಾಚಾರ್ಯನು ಒಂದು ಶುಭ ದಿನ ಶುಭ ಮುಹೂರ್ತವನ್ನು ನಿಶ್ಚಯಿಸಿ ಸಮಸ್ತ ಪೌರಜನಕ್ಕೂ ಜನಪದಕ್ಕೂ ವೀರ ಸಮಾಜಕ್ಕೂ ಕ್ರೀಡಾ ಕೌಶಲ ಪ್ರದರ್ಶನವನ್ನು ಪ್ರಕಟನೆ ಮಾಡಿದನು.

ಸಕಾಲದಲ್ಲಿ ಧೃತರಾಷ್ಟ್ರನು ಭೀಷ್ಮನನ್ನು ಮುಂದಿಟ್ಟುಕೊಂಡು ಅಮಾತ್ಯರಾದಿಯಾಗಿ ರಂಗಭೂಮಿಯನ್ನು ಹೊಕ್ಕನು. ಗಾಂಧಾರಿಯೂ ಕುಂತಿಯೂ ತಂತಮ್ಮ ದಾಸಿಗಳೊಡನೆ ಹೋಗಿ ಯಥಾಸ್ಥಾನದಲ್ಲಿ ಕುಳಿತರು. ಆ ವಿಶಾಲವಾದ ರಂಗಸ್ಥಲವು ಅಸ್ತ್ರ ಕ್ರೀಡಾ ದರ್ಶನಾರ್ಥಿ

ಗಳಾಗಿ ಬಂದಿದ್ದ ಪುರಜನರಿಂದಲೂ ಜನಪದ ವಾಸಿಗಳಿಂದಲೂ ಕ್ಷಣ ಮಾತ್ರದಲ್ಲಿ ಭರಿತವಾಯಿತು. ವಾದಕರು ಮೃದು ಮಧುರ ವಾದ್ಯ ಗಳಿಂದ ಪ್ರೇಕ್ಷಕರಿಗೆ ಕೌತುಕವನ್ನುಂಟುಮಾಡುತ್ತಿದ್ದರು. ಪತಾಕೆ ಗಳು ಗಾಳಿಗೆ ಆಡುತ್ತ ರಂಗಮಂಟಪವನ್ನು ಶೋಭಾಯಮಾನವಾಗಿ ಮಾಡಿದುವು. ರಂಗಭೂಮಿಯೆಲ್ಲವೂ ನೆರೆದಿದ್ದ ಜನ ಸಮೂಹದ ಕೋಲಾಹಲದಿಂದ ಉಲ್ಲೋಲ ಕಲ್ಲೋಲವಾದ ಮಹಾರ್ಣವದಂತೆ ಕಣ್ಗೊಳಿಸಿತು.

ಆಗ ಶುಕ್ಲಾಂಬರಧರನೂ ಶುಕ್ಲ ಕೇಶನೂ ಸೌಮ್ಯ ಮೂರ್ತಿಯೂ ಆದ ದ್ರೋಣಾಚಾರ್ಯನು ತನ್ನ ಪುತ್ರನಾದ ಅಶ್ವತ್ಥಾಮನನ್ನೊಡ ಗೊಂಡು ರಂಗಭೂಮಿಯನ್ನು ಪ್ರವೇಶಮಾಡಿದನು. ಕೋಲಾಹಲವು ಶಾಂತವಾಯಿತು. ಪ್ರೇಕ್ಷಕರು ಆಚಾರ್ಯನ ವಿಶಾಲವಾದ ಲಲಾಟ ವನ್ನೂ, ದೀಪ್ತಿಮಯ ನೇತ್ರಗಳನ್ನೂ, ಅನುಪಮ ಕಾಂತಿಯುಳ್ಳ ದೇಹವನ್ನೂ ಚಿತ್ರಾರ್ಪಿತರಂತೆ ನಿಸ್ತಬ್ಧರಾಗಿ ನೋಡತೊಡಗಿದರು. ಆಚಾರ್ಯನು ರಂಗಮಂಟಪವನ್ನು ಪ್ರವೇಶಮಾಡುತ್ತಲೆ ಸುಮಂತ್ರಜ್ಞ ಬ್ರಾಹ್ಮಣರಿಂದ ಯಥಾ ವಿಧಾನದಲ್ಲಿ ಮಂಗಳ ಕ್ರಿಯೆಯನ್ನು ಮಾಡಿಸಿ ತನ್ನ ಸ್ಥಾನದಲ್ಲಿ ಕುಳಿತನು. ಈ ಮಂಗಳ ಕಾರ್ಯವು ಸಮಾಪ್ತವಾಗು ತ್ತಲೆ, ಅನುಚರರು ಅಸ್ತ್ರ ಶಸ್ತ್ರಗಳನ್ನು ತೆಗೆದುಕೊಂಡು ರಂಗಸ್ಥಲ ವನ್ನು ಹೊಕ್ಕರು.

ಅನಂತರದಲ್ಲಿ ಕುಮಾರರು ಬದ್ಧ ಪರಿಕರರಾಗಿ ಜ್ಯೇಷ್ಠ ಕನಿಷ್ಠ ಕ್ರಮದಿಂದ ರಂಗಸ್ಥಲವನ್ನು ಹೊಕ್ಕರು. ಅವರು ಬೆರಳಿಗೆ ಉಂಗುರ ವನ್ನಿಟ್ಟು ಕೈಯಲ್ಲಿ ಬಿಲ್ಲನ್ನು ಹಿಡಿದು ಬೆನ್ನಿಗೆ ಬತ್ತಳಿಕೆಯನ್ನು ಕಟ್ಟಿ ಕೊಂಡು ಭೀಷ್ಮಾದಿ ಗುರು ಜನರ ಪಾದಕ್ಕೆರಗಿ ಕ್ರೀಡಾ ಭೂಮಿಯಲ್ಲಿ ಹೋಗಿ ನಿಂತರು. ಒಡನೆಯೇ ಕೋಲಾಹಲವಾಯಿತು. ಪ್ರೇಕ್ಷಕ ರೊಳಗೆ ಕೆಲವರು ಬೆರಳಿಂದ ಮಗ್ಗುಲಲ್ಲಿರುವವರಿಗೆ ಯುಧಿಷ್ಠಿರನ ಸೌಮ್ಯ ಮೂರ್ತಿಯನ್ನು ತೋರುವರು; ಕೆಲವರು ಭೀಮಸೇನನ ಸ್ಥೂಲೋನ್ನತ ದೇಹವನ್ನು ತೋರುವರು; ಕೆಲವರು ಅವನ ಆಜಾನು

ಬಾಹುಗಳನ್ನು ತೋರುವರು; ಮತ್ತೆ ಕೆಲವರು ಪ್ರಭಾತ ಕಮಲ ದಂತಿರುವ ಅರ್ಜುನನ ಮುಖಮಂಡಲವನ್ನೂ, ಇನ್ನು ಕೆಲವರು ತಳಿರಂತೆ ಹೊಳೆಯುವ ಅವನ ದೇಹ ಕಾಂತಿಯನ್ನೂ ತೋರಿ ಕೊಂಡಾಡುವರು. ಕುಮಾರರು ಒಂದು ಸಾರಿ ಕುದುರೆಯನ್ನೂ, ಇನ್ನೊಂದು ಸಾರಿ ಆನೆಯನ್ನೂ, ಮತ್ತೊಂದು ಸಾರಿ ರಥವನ್ನೂ ಹತ್ತಿ ರಂಗಭೂಮಿಯಲ್ಲಿ ಅತಿ ವೇಗದಿಂದ ಸುತ್ತಾಡುತ್ತ ತಂತಮ್ಮ ನಾಮಾಂಕಿತ ಬಾಣಗಳಿಂದ ಲಕ್ಷ್ಯಭೇದವನ್ನು ಮಾಡಿ ತೋರಿದರು. ತರುವಾಯ, ಅವರು ಕತ್ತಿ ಗುರಾಣಿಗಳನ್ನು ಹಿಡಿದು ಪರಸ್ಪರ ಯುದ್ಧ ಮಾಡ ತೊಡಗಿದರು. ಯುದ್ಧಮಾಡುತ್ತಿರುವಾಗ ಒಂದು ಸಾರಿ ಯಾದರೂ ಕತ್ತಿಯು ಅವರ ಕೈಯಿಂದ ಕಳಚಿ ಜಾಳಲಿಲ್ಲ. ಅವರು ಖಡ್ಗಪ್ರಯೋಗದಲ್ಲಿ ತಮ್ಮ ನಿಪುಣತೆಯನ್ನು ಮಾತ್ರವೇ ಅಲ್ಲದೆ ನಿರ್ಭೀ ಕತೆಯನ್ನೂ ತೋರಿದರು. ರಂಗಮಂಟಪದಲ್ಲಿದ್ದವರೆಲ್ಲರೂ ರಾಜ ಕುಮಾರರ ಲಕ್ಷ್ಯಭೇದ ಕೌಶಲಕ್ಕೆ ವಿಸ್ಮಯಪಟ್ಟು ಮುಕ್ತ ಕಂಠದಿಂದ ಅವರನ್ನು ಪ್ರಶಂಸೆಮಾಡಿದರು. ದುರ್ಯೋಧನ ಭೀಮಸೇನರು ಗದೆ ಯನ್ನು ಹಿಡಿದು ರೋಷವೇರಿ ಒಬ್ಬರನ್ನೊಬ್ಬರು ಕೆಂಗಣ್ಣಿನಿಂದ ನೋಡುತ್ತಿರುವುದನ್ನು ಕಂಡು ದ್ರೋಣಾಚಾರ್ಯನು ತನ್ನ ಪ್ರಿಯ ಪುತ್ರನಾದ ಅಶ್ವತ್ಥಾಮನನ್ನು ಕಳುಹಿಸಿ ಅವರಿಬ್ಬರ ಕ್ರೋಧವನ್ನು ಶಮನಮಾಡಿಸಬೇಕಾಯಿತು.

ಅನಂತರದಲ್ಲಿ ಅರ್ಜುನನ ಪಾಂಡಿತ್ಯಪ್ರದರ್ಶನವಾಯಿತು. ದ್ರೋಣಾಚಾರ್ಯನು ಸಭಾಮಂಟಪದಲ್ಲಿ ನಿಂತು ವಾದ್ಯ ಧ್ವನಿಯನ್ನು ನಿಲ್ಲಿಸಿ ಗಂಭೀರ ಸ್ವರದಿಂದ ಇಂತೆಂದನು:—" ಈ ರಂಗಭೂಮಿಯನ್ನು ನಾನಾ ದೇಶದ ವೀರೇಂದ್ರರು ಅಲಂಕರಿಸಿರುವರು. ಹಸ್ತಿನಾಪುರ ವಾಸಿಗಳೂ ಜನಪದ ವಾಸಿಗಳೂ ಇಲ್ಲಿ ನೆರೆದಿರುವರು. ಸರ್ವರೂ ಲಾಲಿಸಬೇಕು. ನನ್ನ ಶಿಷ್ಯನಾದ ಅರ್ಜುನನು ನನ್ನ ಮಗನಿಗಿಂತ ನನಗೆ ಪ್ರಿಯನು. ಇವನು ಧನುರ್ವೇದದಲ್ಲಿ ಪ್ರವೀಣನಾಗಿರುವನು. ಅಸ್ತ್ರವಿದ್ಯೆಯಲ್ಲಿ ಭೂಮಂಡಲದೊಳಗೆ ಇವನಿಗೆ ಸಮಾನರು ಯಾರೂ ಇರಲಾರರು. ಇವನು ಉತ್ಸಾಹದಲ್ಲಿಯೂ ಬುದ್ಧಿ ಕೌಶಲದಲ್ಲಿಯೂ

ನನ್ನ ಶಿಷ್ಯರೊಳಗೆ ಸರ್ವಶ್ರೇಷ್ಠನು. ಇವನ ಹಸ್ತಲಾಘವ, ಶರ ಸಂಧಾನ ನಿಪುಣತೆ, ಸಂಹಾರ ಕುಶಲತೆ, ಇತ್ಯಾದಿಗಳನ್ನು ವರ್ಣಿಸಲು ಸಾಧ್ಯವಲ್ಲ. ಇವನು ಯಾವ ಕ್ಷಣದಲ್ಲಿ ಶರ ಸಂಧಾನ ಮಾಡುವನೋ, ಯಾವಾಗ ಶರವನ್ನು ಬಿಡುವನೋ, ಯಾವಾಗ ಸಂಹರಿಸುವನೋ ಅರಿಯಲಳವಲ್ಲ. ಈ ಧನುರ್ಧರನ ಸಾಹಸವನ್ನೂ ಅಸ್ತ್ರಪ್ರಯೋಗ ವಿಧಾನವನ್ನೂ ಸರ್ವರೂ ಸಾವಧಾನವಾಗಿ ನೋಡಬೇಕು.'' ಹೀಗೆಂದು ಹೇಳಿ, ಅರ್ಜುನನನ್ನು ಮುಂದಕ್ಕೆ ಬಿಟ್ಟು ದ್ರೋಣಾಚಾರ್ಯನು ಆಸನವನ್ನು ಪರಿಗ್ರಹಿಸಿದನು.

ಅರ್ಜುನನು ಕೋದಂಡ ಪಾಣಿಯಾಗಿ ವ್ಯಾಯಾಮ ರಂಗದಲ್ಲಿ ನಿಲ್ಲುತ್ತಲೆ ಜನದ ಕಲರವವು ಹುಟ್ಟಿತು. ಸಂಗಡಲೇ ಶಂಖ ಮೊದಲಾದ ವಾದ್ಯ ಧ್ವನಿಯು ಮೊಳಗಿತು. ಪ್ರೇಕ್ಷಕರು ರಾಜಕುಮಾರನ ಕೋಮಲ ದೇಹ ಕಾಂತಿಯ ಮಾಧುರ್ಯ, ಕಠಿನ ಕವಚ, ಭೀಷಣ ಶರಾಸನ, ಶಾಣಿತ ಖಡ್ಗ, ತೀಕ್ಷ್ಣವಾದ ಬಾಣಗಳು—ಇತ್ಯಾದಿಗಳ ಸಮ್ಮೇಳನವನ್ನು ಕಂಡು ಏಕಕಾಲದಲ್ಲಿ ವಿಸ್ಮಯವನ್ನೂ ಆಹ್ಲಾದವನ್ನೂ ಪಟ್ಟು, ಉಚ್ಚಸ್ವರದಿಂದ—''ಇವನೇ ಕುಂತೀ ಸುತನು; ಇವನೇ ಪಾಂಡವರಲ್ಲಿ ನಡುಕಲವನು, ಶೀಲವಂತನು, ಧರ್ಮಾತ್ಮನು, ಇವನೇ ಕೌರವ ರಕ್ಷಕನು, ಇವನೇ ಅಸ್ತ್ರವಿದ್ಯೆಯಲ್ಲಿ ಸರ್ವಶ್ರೇಷ್ಠನು'' ಮೊದಲಾದ ಪ್ರಶಂಸಾ ವಚನಗಳನ್ನು ಬಾರಿಬಾರಿಗೂ ನುಡಿಯುತ್ತಿದ್ದರು.

ಪುತ್ರವತ್ಸಲೆ ಕುಂತಿಯು ಮಗನ ಪ್ರಶಂಸೆಯನ್ನು ಕೇಳಿ ತಾನು ಧನ್ಯೆಯೆಂದು ಭಾವಿಸಿದಳು. ಮಹಾಮತಿ ಭೀಷ್ಮನು ಜನಗೋಷ್ಠಿಯಲ್ಲಿ ಪಾಂಡವನ ಸುಖ್ಯಾತಿಯನ್ನು ಕೇಳಿ ಇನ್ನಿಲ್ಲದಷ್ಟು ಹರ್ಷಪಟ್ಟನು; ಧೃತರಾಷ್ಟ್ರನು ತೃತೀಯ ಪಾಂಡವನ ವಿಷಯದಲ್ಲಿ ಇಂತಹ ಪ್ರಶಂಸಾ ಧ್ವನಿಯು ಎದ್ದಿರುವುದನ್ನು ವಿದುರನ ಬಾಯಿಂದ ಕೇಳಿ, ''ಧನ್ಯನಾದೆನು, ಅನುಗೃಹೀತನಾದೆನು, ರಕ್ಷಿತನಾದೆನು'' ಎಂದೀ ಪ್ರಕಾರವಾಗಿ ತನ್ನ ಸಂತೋಷವನ್ನು ತೋರಿಸಿದನು.

ಈ ಗದ್ದಲ ನಿಲ್ಲುತ್ತಲೆ ಅರ್ಜುನನು ದ್ರೋಣಾಚಾರ್ಯನ ಆಜ್ಞಾನುಸಾರವಾಗಿ ಅಸ್ತ್ರಪ್ರಯೋಗದಲ್ಲಿ ತನ್ನ ವಿವಿಧ ಕೌಶಲವನ್ನು

ತೋರಿಸಲು ಮೊದಲ್ಮಾಡಿದನು. ಅವನು ಅಪೂರ್ವ ಶಿಕ್ಷಾ ಬಲದಿಂದ ಒಂದು ಸಲ ಆಗ್ನೇಯಾಸ್ತ್ರವನ್ನೂ ಒಂದ ಸಲ ವಾರುಣಾಸ್ತ್ರವನ್ನೂ ಒಂದು ಸಲ ವಾಯುವ್ಯಾಸ್ತ್ರವನ್ನೂ ಪ್ರಯೋಗಿಸಿ, ಅಗ್ನಿಯನ್ನೂ ವಾರಿಯನ್ನೂ ವಾಯುವನ್ನೂ ನಿರ್ಮಾಣ ಮಾಡಿದನು. ನಿಮಿಷ ಮಾತ್ರದಲ್ಲಿ ರಥವನ್ನು ಹತ್ತುವನು; ನಿಮಿಷ ಮಾತ್ರದಲ್ಲಿ ರಥದಿಂದಿಳಿಯುವನು; ಲೀಲಾಜಾಲವಾಗಿ, ಸಣ್ಣವಾಗಲಿ ದೊಡ್ಡವಾಗಲಿ, ಲಕ್ಷ್ಯಗಳನ್ನು ಭೇದಿಸುವನು. ಅನಂತರ, ಬಿಲ್ಲಿಗೆ ಐದು ಬಾಣಗಳನ್ನು ತೊಡಿಸಿ ಕಬ್ಬಿಣದ ಹಂದಿಯ ಬಾಯಿಗೆ ಅವೆಲ್ಲವನ್ನೂ ಒಂದೇ ಬಾಣದೋಪಾದಿಯಲ್ಲಿ ಬಿಡುವನು. ಈ ತೆರದಲ್ಲಿಯೇ, ಅವನು ಖಡ್ಗ ಪ್ರಯೋಗ ಮೊದಲಾದುವುಗಳಲ್ಲಿಯೂ ವಿಶೇಷ ನಿಪುಣತೆಯನ್ನು ತೋರಿಸಿದನು. ಪ್ರೇಕ್ಷಕರು ಮಿಸುಕದೆ ಅವನ ಅಸ್ತ್ರ ಪ್ರಯೋಗ ಚಾತುರ್ಯವನ್ನೂ ಅವನ ವಜ್ರ ಮುಷ್ಟಿಯ ಅಪೂರ್ವ ದೃಢತ್ವವನ್ನೂ ಎವೆಯಿಕ್ಕದೆ ನೋಡುತ್ತ ಪಟದಲ್ಲಿ ಬರೆದ ಚಿತ್ರದಂತೆ ನಿಶ್ಚಲರಾಗಿದ್ದರು.

ಈ ರೀತಿ ಅವನ ಕೈ ಚಳಕವೆಲ್ಲವನ್ನೂ ಕಣ್ದೆರವಾಗಿ ನೋಡಿ ಪ್ರೇಕ್ಷಕರು ಉಚ್ಚ ಸ್ವರದಿಂದ—"ಜಯ! ಹೇ ಅರ್ಜುನ! ಜಯ! ಹೇ ಧನಂಜಯ!" ಎಂದು ಉಗ್ಘಡಿಸಿದರು.

ಅರ್ಜುನನ ಅಸ್ತ್ರ ಪ್ರಯೋಗವನ್ನು ನೋಡಿ ಭೀಷ್ಮನು ಅಪರಿಮಿತ ಸಂತೋಷಪಟ್ಟು ದ್ರೋಣಾಚಾರ್ಯನಿಗೆ ತನ್ನ ಕೃತಜ್ಞತೆಯನ್ನು ತಿಳಿಯಪಡಿಸಿದನು. ಅಲ್ಲಿಗೆ ಅವನು ಪೂರ್ಣ ಮನೋರಥನಾಗಲಿಲ್ಲ.

ಯುಧಿಷ್ಠಿರನು ಸರ್ವ ಜ್ಯೇಷ್ಠನು, ಸರ್ವ ಗುಣ ಸಂಪನ್ನನು. ಈಗ ಅವನು ಯಥಾ ವಿಧಾನವಾಗಿ ರಾಜಪದವಿಯಲ್ಲಿ ಪ್ರತಿಷ್ಠಿತನಾಗಿ ರಾಜ್ಯಭಾರವನ್ನು ವಹಿಸುವುದಕ್ಕೆ ಸಕಾಲವೆಂದು ಭಾವಿಸಿ, ಭೀಷ್ಮನು ಆ ವಿಷಯವನ್ನು ಕುರಿತು ಆಲೋಚಿಸತೊಡಗಿದನು.

ಇತ್ತ, ಪುರ ವಾಸಿಗಳು, ಜನಪದ ವಾಸಿಗಳು ಸಭಾಮಂಟಪದಲ್ಲಿಯೂ, ಬೀದಿಯ ಚೌಕಗಳಲ್ಲಿಯೂ, ಅಂಗಡಿ ಮುಂಗಟ್ಟಿಗಳಲ್ಲಿಯೂ, ಎಲ್ಲೆಲ್ಲಿಯೂ—"ಯುಧಿಷ್ಠಿರನು ರಾಜನಾಗುವುದಕ್ಕೆ ತಕ್ಕವನು.

ಭೀಷ್ಮನು ರಾಜನಾಗೆನೆಂದು ಪ್ರತಿಜ್ಞೆ ಮಾಡಿರುವನು; ಸೂರ್ಯ ಚಂದ್ರರ ಉದಯಾಸ್ತಗಳಲ್ಲಿ ವಿಪರ್ಯಾಸವುಂಟಾಗಬಹುದು, ಭೀಷ್ಮನ ಪ್ರತಿಜ್ಞೆಯಲ್ಲೆಂದಿಗೂ ವ್ಯತ್ಯಾಸವುಂಟಾಗದು. ಧೃತರಾಷ್ಟ್ರನು ಜನ್ಮಾಂಧನಾದುದರಿಂದ ಅವನಿಗೆ ರಾಜ್ಯವಾಗಲಿಲ್ಲ; ಈಗ ಅವನು ಹೇಗೆ ತಾನೆ ರಾಜಪದವಿಯನ್ನು ಕೈಕೊಳ್ಳಲಾಗುವುದು? ಯುಧಿಷ್ಠಿರನು ಧರ್ಮವತ್ಸಲನು, ಸತ್ಯವ್ರತನು, ದಯಾಳು. ಅವನು ಭೀಷ್ಮ ಧೃತರಾಷ್ಟ್ರರನ್ನು ಸಮ್ಮಾನದಿಂದ ಕಾಣುತ್ತ ವಿವಿಧ ಭೋಗ್ಯ ವಸ್ತುಗಳನ್ನು ಕೊಟ್ಟು ಅವರನ್ನು ಸಂತೋಷಪಡಿಸುವನು; ಅದಕ್ಕೆ ಸಂದೇಹವಿಲ್ಲ. ಯುಧಿಷ್ಠಿರನಿಗೆ ಪಟ್ಟವಾದರೆ ನಮಗೆಷ್ಟೋ ಸಂತೋಷವಾಗುವುದು'' ಎಂದು ತಮ್ಮೊಳಗೆ ತಾವೇ ಹೇಳಿಕೊಳ್ಳುತ್ತಿದ್ದರು.

ಪುರವಾಸಿಗಳ ಬಾಯಿಂದ ಈ ಮಾತು ಬರುತ್ತಿರುವುದನ್ನು ಕೇಳಿ ಭೀಷ್ಮನು ನಿರತಿಶಯವಾದ ಆಹ್ಲಾದವನ್ನು ಪಟ್ಟನು. ಅವನು ಪುರವಾಸಿಗಳನ್ನು ಕರೆಯಿಸಿ, ಆನಂದಾಶ್ರುವನ್ನು ಸುರಿಸುತ್ತ ಅವರನ್ನು ಕುರಿತು ಇಂತೆಂದನು:—''ಸರ್ವ ಪ್ರಯತ್ನದಿಂದಲೂ ಈ ರಾಜಕುಮಾರರನ್ನು ಸುಶಿಕ್ಷಿತರನ್ನಾಗಿ ಮಾಡಲಿಚ್ಛಿಸಿದೆನು; ಆ ನನ್ನ ಇಚ್ಛೆಯು ಈಡೇರಿತು. ಸರ್ವಜ್ಯೇಷ್ಠ ಯುಧಿಷ್ಠಿರನು ಸರ್ವ ಗುಣ ಸಂಪನ್ನನು; ಅವನು ರಾಜ್ಯ ಶಾಸನದಲ್ಲಿಯೂ ಪ್ರಜಾಪಾಲನೆಯಲ್ಲಿಯೂ ಯಶೋವಂತನಾಗುವನು. ಪಾಂಡುವು ಸ್ವರ್ಗಸ್ಥನಾದನು; ಮಾತಾ ಸತ್ಯವತಿಯೂ ಭಾಗ್ಯವತಿಯರಾದ ಅಂಬೆ ಅಂಬಾಲಿಕೆಯರೂ ತಪೋವನಕ್ಕೆ ಹೋಗಿ ಅಲ್ಲಿ ಪರಮ ಪದವನ್ನು ಪಡೆದರು. ನಾನು ರಾಜಪದವನ್ನು ಪರಿತ್ಯಾಗಮಾಡಿ ಪ್ರಜಾ ಧರ್ಮವನ್ನು ಪಾಲಿಸುವ ನಿಮಿತ್ತವಾಗಿಯೇ, ತಪೋಮಾರ್ಗವನ್ನು ಆಶ್ರಯಿಸಲಿಲ್ಲ; ಶಾಂತಿಮಯವಾದ ತಪೋವನದಲ್ಲಿದ್ದು ತಾಪಸ ವೃತ್ತಿಯನ್ನು ಅನುಸರಿಸಲಿಲ್ಲ; ನನಗೆ ಯೌವನದ ವಿಷಯ ವಾಸನೆಯು ಕಳೆದುಹೋಯಿತು; ಪವಿತ್ರ ಬ್ರಹ್ಮಚರ್ಯವೊಂದೇ ನನ್ನ ವ್ರತವಾಗಿರುವುದು. ಈಗ ನನಗೆ ವಾರ್ಧಕ್ಯವು ಪ್ರಾಪ್ತವಾಗಿದೆ, ಕೂದಲು ಬೆಳ್ಳಗಾಯಿತು, ದೇಹವು ಗಳಿತವಾಗುತ್ತ ಬಂದಿದೆ. ಕುರುರಾಜನ ಆಜ್ಞಾನುವರ್ತಿಯಾಗಿ ಆತನಿಗೆ ಹಿತಕರವಾದ

ಕಾರ್ಯಗಳನ್ನು ಮಾಡುವ ಸಲುವಾಗಿಯೇ ನಾನು ಪ್ರಾಣವನ್ನಿಟ್ಟು ಕೊಂಡಿದ್ದೇನೆ. ಯುಧಿಷ್ಠಿರನಿಗೆ ರಾಜ್ಯಾಭಿಷೇಕವಾಗಲಿ, ನಾನಾ ರಾಜ್ಯಗಳ ಭೂಪತಿಗಳು ಅವನಿಗೆ ತಲೆಬಾಗಿ ನಡೆಯಲಿ, ಪ್ರಜೆಗಳು ಅವನನ್ನು ದೇವರಿಗೆ ಸಮಾನನೆಂದು ಪೂಜಿಸಲಿ, ಇದೆಲ್ಲವನ್ನೂ ಕಣ್ಣಾರೆ ನೋಡಿ ನಾನು ಚರಿತಾರ್ಥನಾಗುವೆನು. ನಾನು ಹಿಂದೆ ಅವನನ್ನು ಕಂಕುಳಲ್ಲಿ ಎತ್ತಿಕೊಂಡು ಪ್ರೀತಿಸುತ್ತಿದ್ದೆನು; ಅವನ ತೊದಲು ನುಡಿಗಳನ್ನು ಕೇಳಿ ಮೋಹಿತನಾಗಿ ಮುಖವನ್ನು ಮುದ್ದಿಟ್ಟುಕೊಳ್ಳು ತ್ತಿದ್ದೆನು; ಸರ್ವ ಪ್ರಯತ್ನದಿಂದಲೂ ಅವನಿಗೆ ವಿದ್ಯಾ ಬುದ್ಧಿಯನ್ನು ಕಲಿಸಿದೆನು; ಯಾವಾಗಲೂ ನನ್ನ ಸಂಗಡಲೇ ಇಟ್ಟುಕೊಂಡು ಸನ್ಮಾರ್ಗ ವನ್ನು ತೋರಿಸುತ್ತಿದ್ದೆನು. ಈಗ ನಾನು ಅವನ ಆಜ್ಞಾಧಾರಕ ನಾಗಿ ಅವನ ಹಿತವನ್ನು ಆಚರಿಸುತ್ತಿರುವೆನು. ಇದೇ ನನ್ನ ಪರಮ ಧರ್ಮ, ನನ್ನ ಪರಮ ಕರ್ಮ, ನನ್ನ ಪರಮ ತಪಸ್ಸು!''

ಪುರವಾಸಿಗಳು ಭೀಷ್ಮನ ಧರ್ಮಸಮ್ಮತವಾದ ಈ ಉದಾರ ವಾಕ್ಕಿಗೆ ಸಂತೋಷಪಟ್ಟರು. ಆದರೆ, ದುರಾಕಾಂಕ್ಷೆಯುಳ್ಳ ದುರ್ಯೋ ಧನನು ಅದನ್ನು ಕೇಳಿ ಅಸೂಯಾಪರತಂತ್ರನಾದನು. ಯುಧಿಷ್ಠಿರ ನನ್ನು ಕುರಿತು ಭೀಷ್ಮನು ಆಡಿದ ಪ್ರಶಂಸಾ ವಾದವು ಅವನ ಕಿವಿಗೆ ಶೂಲವಾಯಿತು, ಪೌರಜನದ ಪ್ರಸ್ತಾವನೆಯು ಹೃದಯಶಲ್ಯ ವಾಯಿತು. ಭೀಷ್ಮನು ಅದನ್ನು ಅನುಮೋದಿಸಿದುದರಿಂದ ಆ ಶಲ್ಯವು ತೀಕ್ಷ್ಣವಾಯಿತು. ಇಂತು, ಅವನ ಹೃದಯವು ದ್ವೇಷದಿಂದ ಕಲುಷಿತ ವಾಯಿತು; ಬುದ್ಧಿ ಪಲ್ಲಟವಾಯಿತು. ಕಡೆಗೆ, ಅವನು ಪ್ರಾಣವಿರುವ ವರೆಗೂ ಯುಧಿಷ್ಠಿರನಿಗಾಗಲಿ ಅವನ ತಮ್ಮಂದಿರಿಗಾಗಲಿ ರಾಜ್ಯವಾಗ ಗೊಡಿಸೆನೆಂದು ದುರಾಗ್ರಹದಿಂದ ಪ್ರತಿಜ್ಞೆಮಾಡಿದನು. ಇತ್ತ, ಸರ್ವ ವಿಷಯದಲ್ಲಿಯೂ ಪಾಂಡವರ ಉತ್ಕರ್ಷವನ್ನೂ ತನ್ನ ಮಕ್ಕಳ ಅಪಕರ್ಷವನ್ನೂ ಕಂಡು ಧೃತರಾಷ್ಟ್ರನೂ ದುಃಖಪಟ್ಟನು; ದಾಯಾದಿ ಗಳ ಸಂಪತ್ತನ್ನು ನೋಡಿ ಸೈರಿಸಲಾರದೆ ಹೋದನು. ಅವನ ಮನಸ್ಸಿಗೆ ಶಾಂತಿಯಿಲ್ಲವಾಯಿತು; ವೈರದಿಂದ ಅವನ ಮನೋಗತ ಸಾಧುಭಾವವು ಕೆಟ್ಟಿತು. ದುರ್ಮತಿ ದುರ್ಯೋಧನನು ಆಗಿಗಡಿಗೆ ತನ್ನ ದುರ್ಗತಿಯನ್ನು

ಜ್ಞಾಪಿಸಿ ಆಡುತ್ತಿದ್ದ ಮಾತುಗಳಿಂದ ತಂದೆಯ ಹೃದ್ಗತವಾದ ಪ್ರೀತಿಯೂ ಸ್ನೇಹವೂ ಶಾಂತವೂ ವಿಲುಪ್ತವಾದುವು. ಯಾವನು ಪಾಂಡುವಿಗೆ ರಾಜ್ಯವಾಯಿತೆಂದು ಆನಂದ ಸಾಗರದಲ್ಲಿ ಮಗ್ನನಾಗಿದ್ದನೋ, ಯಾವನು ಅರ್ಜುನನ ಅಸ್ತ್ರ ಕೌಶಲವನ್ನು ನೋಡಿ ಧನ್ಯನಾದೆನೆಂದನೋ, ಅವನೇ ಈಗ ಪಾಂಡವರ ಸೌಭಾಗ್ಯವನ್ನು ಕಂಡು ಯುಕ್ತಾಯುಕ್ತ ಜ್ಞಾನ ಹೀನನಾಗಿ ದಯಾ ಧರ್ಮವನ್ನು ತೊರೆದನು. ಅವನ ಪುತ್ರ ವಾತ್ಸಲ್ಯವು ಮಿತಿಮಿರಿತು, ಸಾಧು ಭಾವವು ಹಿಂಗಿತು, ಮೆಲ್ಲ ಮೆಲ್ಲಗೆ ಅವನು ಅಧರ್ಮದಲ್ಲಿ ರುಚಿ ಕಂಡನು.

---

## ಏಳನೆಯ ಅಧ್ಯಾಯ

### ಲಾಕ್ಷಾಭವನ, ದ್ರೌಪದಿಯ ಸ್ವಯಂವರ, ರಾಜ್ಯವಿಭಾಗ.

ಯುಧಿಷ್ಠಿರನ ಪಟ್ಟಾಭಿಷೇಕದ ಪ್ರಸ್ತಾವವನ್ನು ಕೇಳಿ ಮರುಗುತ್ತ ದುರ್ಯೋಧನನು ತಂದೆಯ ಬಳಿಗೆ ಹೋದನು. ತಂದೆಯು ಏಕಾಂತವಾಗಿ ಕುಳಿತಿದ್ದುದನ್ನು ಕಂಡು ಮೋರೆಯನ್ನು ಬಾಡಿಸಿಕೊಂಡು ಕಾಲಿಗೆ ಬಿದ್ದು—"ಅಯ್ಯಾ! ಪುರಜನರು ನಿಮ್ಮನ್ನು ಪರಿತ್ಯಾಗಮಾಡಿ ಯುಧಿಷ್ಠಿರನನ್ನು ಅರಸನನ್ನಾಗಿ ಮಾಡಲಿಚ್ಛಿಸುತ್ತಿದ್ದಾರೆ. ಪಿತಾಮಹ ಭೀಷ್ಮನು ರಾಜಭೋಗವನ್ನಲ್ಲದೆ ರಾಜಪದವಿಯನ್ನು ಕೈಕೊಳ್ಳಲು ಸರ್ವಾತ್ಮನಾ ಸಮ್ಮತಿಸದಿರುವನು. ಪುರಜನದ ಬಾಯಿಂದ ನಿಮ್ಮ ವಿಷಯವಾಗಿ ಈ ಅಶ್ರದ್ಧೆಯ ಮಾತನ್ನು ಕೇಳಿದಂದಿನಿಂದ ನನಗೆ ಅತಿ ದುಃಖವುಂಟಾಗಿರುವುದು. ನೀವು ಜ್ಯೇಷ್ಠರಾದರೂ, ಅಂಧರಾದುದರಿಂದ ನಿಮಗೆ ರಾಜ್ಯ ಪ್ರಾಪ್ತಿಯಿಲ್ಲವಾಯಿತು. ಅರ್ಯನಾದ ಪಾಂಡುವು ಕಿರಿಯಾತನಾದರೂ ರಾಜಪದವಿಗೆ ಬಂದನು. ಈಗ ಯುಧಿಷ್ಠಿರನಿಗೆ ರಾಜ್ಯವಾದರೆ ಅವನ ತರುವಾಯ ಅವನ ಮಗನು, ತರುವಾಯ ಅವನ ಮೊಮ್ಮಗನು, ಈ ಪ್ರಕಾರವಾಗಿ ಪಾಂಡುವಿನ ಪೀಳಿಗೆಯೇ ಈ ಸಮೃದ್ಧ ರಾಜ್ಯವನ್ನು ಸುಖವಾಗಿ ಭೋಗಿಸುವುದು. ನಾವು ರಾಜವಂಶೀಯರಾದರೂ ಪ್ರಜೆಗಳ ಇದಿರಿಗೆ ಕೀಳೆನಿಸಿಕೊಂಡು ಬಾಳಬೇಕಾಗುವುದು. ಈ ರೀತಿ ನಾವು ಪರಪಿಂಡೋಪಜೀವಿಗಳಾದಲ್ಲಿ ನಮ್ಮ ದುರ್ದಶೆಗೆ ಪಾರವಿಲ್ಲದೆ ಹೋಗುವುದು. ಪರರ ಕೂಳಿಗೆ ಬಿದ್ದಿರುವವರು ಇಹದಲ್ಲಿ ಪರರಿಂದ ತಿರಸ್ಕಾರವನ್ನೂ ಅವಮಾನವನ್ನೂ ಹೊಂದುವಂತೆಯೇ, ಲೋಕಾಂತರದಲ್ಲಿ ನರಕ ಭಾಗಿಗಳಾಗುವರು. ನಮಗೆ ನರಕ ಯಾತನೆಯು ತಪ್ಪುವ ಯೋಚನೆಯನ್ನು ಮಾಡಿರಿ" ಎಂದನು.

ದುರ್ಯೋಧನನ ಮಾತನ್ನು ಕೇಳಿ ಧೃತರಾಷ್ಟ್ರನು ನಿಟ್ಟುಸಿರು ಬಿಡುತ್ತ ತಲೆಬಾಗಿ ಕುಳಿತನು. ಯುಧಿಷ್ಠಿರನು ರಾಜನಾಗುವನು,

ತಾನೂ ತನ್ನ ಮಕ್ಕಳೂ ಅವನ ಪ್ರಸಾದವನ್ನು ಬೇಡಿ ಜೀವಿಸಬೇಕಾಗುವುದು ಎಂದು ಭಾವಿಸಿ ಅವನು ಮೃತಪ್ರಾಯನಾದನು. ಅವನ ವಿಷಣ್ಣ ಮುಖವು ಅವನ ಅಗಾಧ ದುಶ್ಚಿಂತೆಯನ್ನು ಪ್ರಕಾಶಗೊಳಿಸಿತು. ಈ ಸಂದರ್ಭದಲ್ಲಿ ಏನ ಮಾಡಬೇಕೋ ಅರಿಯದೆ ಅವನು ದೋಲಾಯಮಾನನಾದನು. ದುರ್ಯೋಧನನು ದುಃಶಾಸನಾದಿ ದುರ್ಮತಿಗಳಾದ ತಮ್ಮಂದಿರೊಡನೆಯೂ, ಶಕುನಿ ಮೊದಲಾದ ಕುಮಂತ್ರಿಗಳೊಡನೆಯೂ ಆಲೋಚನೆ ಮಾಡಿದನು; ಕೊನೆಗೆ, ಪಾಂಡವರನ್ನು ವಾರಣಾವತಕ್ಕೆ ತೊಲಗಿಸಿ ಅವರನ್ನು ಬೆಂಕಿಯಿಂದ ಸಾಯಿಸುವ ಯೋಚನೆಯನ್ನು ಮಾಡಿದನು. ತಂದೆಯ ವಿಷಾದವನ್ನು ನೋಡಿ, ಅವನು ತನ್ನ ಮಾತಿಗೆ ಕಿವಿಗೊಟ್ಟನೆಂದು ಹರ್ಷಚಿತ್ತನಾಗಿ—"ಅಯ್ಯಾ! ನೀವು ಉಪಾಯದಿಂದ ಪಾಂಡವರನ್ನು ವಾರಣಾವತಕ್ಕೆ ಕಳುಹಿಸಬಲ್ಲವರಾದರೆ ಯಾವ ಭಯವೂ ಇಲ್ಲ" ಎಂದನು.

ಧೃತರಾಷ್ಟ್ರನು ಮಗನ ಮಾತ ಕೇಳಿ ಹಾಗೆಯೇ ಯೋಚಿಸಿ—"ವತ್ಸ! ನೀನು ಹೇಳುವುದು ನನಗೆ ಸಮ್ಮತವೇನೋ ಅಹುದು. ಆದರೆ ಪಾಂಡುವು ಧರ್ಮಪರಾಯಣನಾಗಿದ್ದನು. ಅವನು ಜ್ಞಾತಿಗಳ ವಿಷಯದಲ್ಲಿ, ವಿಶೇಷವಾಗಿ ನನ್ನ ವಿಷಯದಲ್ಲಿ, ನ್ಯಾಯವಾಗಿ ನಡೆದುಕೊಳ್ಳುತ್ತಿದ್ದನು. ಅಷ್ಟೇ ಅಲ್ಲ, ತಾನು ವೈರಾಗ್ಯವನ್ನು ತಾಳಿದ್ದರೂ ವಿವಿಧ ಭೋಗ್ಯವಸ್ತುಗಳಿಂದ ನನ್ನನ್ನು ತೃಪ್ತಿಗೊಳಿಸುತ್ತಿದ್ದನು. ಅವನು ಸರಳನೂ ಆಗಿದ್ದನು. ಆದುದರಿಂದ, ಅವನು ರಾಜಕೀಯ ಕಾರ್ಯಗಳನ್ನು ನನಗೆ ಬಿನ್ನಯಿಸದೆ ಯಾವ ಕಾರ್ಯಕ್ಕೂ ಕೈ ಹಾಕುತ್ತಿರಲಿಲ್ಲ. ಅವನಂತೆಯೇ ಅವನ ಮಗ ಯುಧಿಷ್ಠಿರನು ಧರ್ಮಪರಾಯಣನು, ಗುಣಾಢ್ಯನು; ಮತ್ತು ಪೌರಜನಕ್ಕೂ ಜನಪದಕ್ಕೂ ಪ್ರಿಯನಾಗಿದ್ದಾನೆ. ಅಷ್ಟೇ ಅಲ್ಲ, ಅವನು ನಿಮ್ಮೆಲ್ಲರಿಗೂ ಹಿರಿಯನು; ಈ ರಾಜ್ಯವು ಅವನ ಪಿತ್ರಾರ್ಜಿತವು. ಈಗ ಅವನನ್ನು ಹೇಗೆ ತಾನೆ ಇಲ್ಲಿಂದ ಹೊರಡಿಸಲಿ? ಹಾಗೆ ಮಾಡಿದಲ್ಲಿ, ಅಮಾತ್ಯವರ್ಗವೂ ಸೇನೆಯೂ ಸಾಮಂತರೂ ಪಾಂಡುವು ಮಾಡಿದ ಉಪಕಾರವನ್ನು ಸ್ಮರಣೆಗೆ ತಂದುಕೊಂಡು ನಮ್ಮ ವಿನಾಶಕ್ಕೆ ಮೂಲವಾಗುವರು.

ಆರ್ಯ ಭೀಷ್ಮನೂ ಆಚಾರ್ಯ ದ್ರೋಣನೂ ಧರ್ಮವತ್ಸಲ ವಿದುರನೂ ಈ ಕೆಲಸಕ್ಕೆಂದಿಗೂ ಒಡಂಬಡರು. ಕೌರವರು ಪಾಂಡುವನ್ನೂ ನನ್ನನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದರು. ಅವರು ನಿಮ್ಮನ್ನೂ ಯುಧಿಷ್ಠಿರಾದಿಗಳನ್ನೂ ಸಮಾನವಾಗಿ ಕಾಣುವರು. ಪಾಂಡವರಿಗೆ ಅನ್ಯಾಯವನ್ನು ಮಾಡಿದಲ್ಲಿ ಅವರೊಳಗಾರೂ ನೋಡಿ ಸೈರಿಸಲಾರರು. ಅವರೆಲ್ಲರೂ ನಮಗೆ ಹಗೆಗಳಾಗುವರು. ನಾವು ಕೌರವರ ಮತ್ತು ಅಮಾತ್ಯರ ಪ್ರೀತಿಯನ್ನು ಕಳೆದುಕೊಳ್ಳುವುದು ಮಾತ್ರವಲ್ಲದೆ ಅವರ ಕೋಪಕ್ಕೂ ಪಾತ್ರರಾಗಿ ಅಪಾರವಾದ ಕಷ್ಟಕ್ಕೆ ಗುರಿಯಾಗುವೆವು'' ಎಂದನು.

ತಂದೆಯ ಮಾತನ್ನು ಕೇಳಿ ದುರ್ಯೋಧನನು ಸುಮ್ಮನಾಗಲಿಲ್ಲ, ಅವನ ಅಸೂಯೆ ಹಿಂಗಲಿಲ್ಲ, ದ್ವೇಷವು ದೂರವಾಗಲಿಲ್ಲ. ಪಾಂಡವರನ್ನು ನಾಶಮಾಡಿಯೇತೀರುವೆನೆಂದು ನಿಶ್ಚಯಿಸಿ ಅವನು ಮತ್ತಿಂತೆಂದು ಹೇಳಿದನು :—

''ಅಯ್ಯಾ! ನೀವು ಅಪ್ಪಣೆಕೊಡಿಸುವುದು ಯಥಾರ್ಥವೇ ಸರಿ. ಆದರೂ, ಕೌರವ ಸೇನೆಯು ಅರ್ಥ ಲಾಭದಿಂದ ಸಂತುಷ್ಟರಾದರೆ, ನಮಗೊಳಗಾಗುವುದು. ಸದ್ಯಕ್ಕೆ ರಾಜ್ಯದ ಸಮಸ್ತ ಸಂಪತ್ತೂ ನಿಮ್ಮ ಕೈಯಲ್ಲಿದೆ; ಅಮಾತ್ಯರು ನಿಮ್ಮ ಅಧೀನರಾಗಿರುವರು ; ಪಿತಾಮಹ ಭೀಷ್ಮನು ಉಭಯ ಪಕ್ಷಕ್ಕೂ ಸಾಮಾನ್ಯನು ; ಅಶ್ವತ್ಥಾಮನು ಸಂಪೂರ್ಣವಾಗಿ ನಮ್ಮ ಪಕ್ಷವನ್ನು ಹಿಡಿಯುವನು ; ದ್ರೋಣಾಚಾರ್ಯನು ಮಗನಿಗೆ ವಿಪಕ್ಷನಾಗನು, ವಿದುರನು ಪಾಂಡವರ ಪಕ್ಷವನ್ನು ಸೇರಿದ್ದರೂ ಒಬ್ಬನಾಗಿ ನಮಗೆ ಯಾವ ಅನಿಷ್ಟವನ್ನೂ ಮಾಡ ಸಮರ್ಥನಲ್ಲ. ಆದುದರಿಂದ, ಅಯ್ಯಾ! ನೀವು ಸ್ವಲ್ಪವೂ ಶಂಕಿಸದೆ ಪಾಂಡವರನ್ನು ವಾರಣಾವತಕ್ಕೆ ಕಳುಹಿಸಿರಿ. ರಾಜ್ಯವೆಲ್ಲವೂ ನಮ್ಮ ಕೈಗೆ ಬಂದರೆ, ಅವರು ಮತ್ತೆ ಇಲ್ಲಿಗೆ ಬರಲು ಯಾವ ಅಡ್ಡಿಯೂ ಇರದು.''

ಧೃತರಾಷ್ಟ್ರನು ಮಗನ ಮಾತಿಗೆ ಮರುಳಾಗಿ ನ್ಯಾಯಾನ್ಯಾಯವನ್ನು ವಿಚಾರಿಸದೆ ಪಾಂಡವರನ್ನು ವಾರಣಾವತಕ್ಕೆ ಅಟ್ಟಲೊಪ್ಪಿದನು.

ಇತ್ತ, ದುರ್ಯೋಧನನು ಲಂಚವನ್ನು ಕೊಟ್ಟು ಅಮಾತ್ಯರನ್ನೂ ಸೈನಿಕ ರನ್ನೂ ವಶಮಾಡಿಕೊಂಡನು. ಕೂಟ ನೀತಿಪರಾಯಣರಾದ ಅಮಾತ್ಯರು ಕಾಂಚನಕ್ಕೆ ಕೈಯೊಡ್ಡಿ ಧೃತರಾಷ್ಟ್ರನ ಅಡಿಯಾಳುಗಳಾಗಿ ಪಾಂಡವರ ಮುಂದೆ—"ವಾರಣಾವತವು ಪರಮ ರಮಣೀಯ ಕ್ಷೇತ್ರವು; ಭೂಮಂಡಲಪಲ್ಲಿ ಅಂತಹ ಮನೋಹರವಾದ ನಗರವು ಇನ್ನೊಂದಿಲ್ಲ. ಅಲ್ಲಿ ಭೂತ ಭಾವನನಾದ ಉಮಾ ಮಹೇಶ್ವರನ ಉತ್ಸವವು ನಡೆಯುತ್ತಿರುವುದು. ಈ ಉತ್ಸವ ಕಾಲದಲ್ಲಿ ವಾರಣಾವತವು ವಿವಿಧ ರತ್ನಗಳಿಂದ ಸಮಾಕೀರ್ಣವಾಗಿ ದೇಶ ದೇಶಗಳಿಂದ ಬಂದಿರುವ ಜನ ಸಮಾಗಮದಿಂದಲೂ ವೈಭವದಿಂದಲೂ ಮೆರೆಯುತ್ತಿರುವುದು. ಅಲ್ಲಿಯ ಆಮೋದ ಪ್ರಮೋದಗಳಿಗೆ ಪಾರವಿಲ್ಲ; ಆಹ್ಲಾದಕ್ಕೆ ಅಂತವಿಲ್ಲ" ಎಂದು ವಾರಣಾವತವನ್ನು ಬಣ್ಣಿಸಿದರು. ದೈವ ನಿರ್ಬಂಧವು ಅಖಂಡನೀಯವು! ಅಮಾತ್ಯರ ಬಾಯಿಂದ ವಾರಣಾವತದ ಇಂತಹ ಪ್ರಶಂಸೆಯನ್ನು ಕೇಳಿ ಪಾಂಡವರು ಅಲ್ಲಿಗೆ ಹೋಗಲಿಷ್ಟಪಟ್ಟರು. ಧೃತರಾಷ್ಟ್ರನು ಪಾಂಡವರು ವಾರಣಾವತಕ್ಕೆ ಹೋಗಲು ಕುತೂಹಲವುಳ್ಳವರಾಗಿರುವರೆಂದು ಕೇಳುತ್ತಲೆ, ಅವರನ್ನು ಕರೆಯಿಸಿ—"ಭೂಮಂಡಲದಲ್ಲಿ ವಾರಣಾವತವು ಅತಿ ರಮಣೀಯವಾಗಿದೆಯೆಂದು ಎಲ್ಲರಿಂದಲೂ ನಾನು ನಿತ್ಯವೂ ಕೇಳುತ್ತೇನೆ. ಅಲ್ಲಿಗೆ ಹೋಗಿ ನೋಡಿ ಬರಬೇಕೆಂಬ ಅಭಿಲಾಷೆ ನಿಮಗಿದ್ದರೆ ಪರಿವಾರ ಸಹಿತರಾಗಿ ಹೋಗಿ ಅಲ್ಲಿ ಕೆಲವು ದಿನ ಸುಖವಾಗಿದ್ದು ಮತ್ತೆ ಹಸ್ತಿನಾಪುರಕ್ಕೆ ಬನ್ನಿರಿ" ಎಂದನು.

ಯುಧಿಷ್ಠಿರನು ಧೃತರಾಷ್ಟ್ರನ ಅಭಿಪ್ರಾಯವನ್ನು ತಿಳಿದುಕೊಳ್ಳದೆ ಹೋಗಲಿಲ್ಲ. ಆದರೆ ಮಾಡುವುದೇನು? ಅವನು ತನಗೆ ಯಾರ ಬತ್ತಾಸೆಯೂ ಇಲ್ಲವೆಂದೆಣಿಸಿ ಅಪ್ಪಣೆಯೆಂದು ಹೋಗಲೊಡಂಬಟ್ಟನು. ಅನಂತರ ಭೀಷ್ಮಾದಿ ಗುರು ಜನರ ಬಳಿಗೆ ಹೋಗಿ ಅವನು—"ನಮ್ಮ ಪೂಜ್ಯರಾದ ದೊಡ್ಡಪ್ಪಂದಿರ ಅಪ್ಪಣೆಯ ಪ್ರಕಾರವಾಗಿ ನಾವು ವಾರಣಾವತಕ್ಕೆ ಹೋಗುವೆವು. ತಾವು ನಮಗೆ ಯಾವ ಅಮಂಗಳವೂ ಆಗದ ಹಾಗೂ, ಯಾವ ಪಾಪವೂ ಸೋಕದ ಹಾಗೂ ಪ್ರಸನ್ನಚಿತ್ತರಾಗಿ ಆಶೀರ್ವಾದವನ್ನು ಮಾಡಿರಿ" ಎಂದನು.

ತರುವಾಯ, ಅವನು ಭೀಷ್ಮ ದ್ರೋಣ ವಿದುರ ಗಾಂಧಾರಿಯರನ್ನು ಬೀಳ್ಕೊಂಡನು. ಅವರೆಲ್ಲರೂ ಪ್ರೀತಿ ಪೂರ್ವಕವಾಗಿ ಅವನನ್ನು ಹರಸಿದರು. ಈ ರೀತಿಯಲ್ಲಿ ಹಿರಿಯರ ಪಾದಕ್ಕೆ ಬಿದ್ದು ಯುಧಿಷ್ಠಿರನು ತಾಯನ್ನೂ ನಾಲ್ವರು ತಮ್ಮಂದಿರನ್ನೂ ಒಡಗೊಂಡು ವಾರಣಾವತಕ್ಕೆ ಪಯಣಮಾಡಿದನು. ಹೊರಡುವ ಸಮಯದಲ್ಲಿ ವಿದುರನು ಗೋಪ್ಯವಾಗಿ, ಇತರರಿಗೆ ಬೋಧೆಯಾಗದ ಭಾಷೆಯಲ್ಲಿ, ಯುಧಿಷ್ಠಿರನಿಗೆ ದುರ್ಯೋಧನನ ದುರಾಶಯವನ್ನು ಸೂಚಿಸಿದನು. ಯುಧಿಷ್ಠಿರನು, "ತಿಳಿಯಿತು" ಎಂದು ಹೇಳಿ, ವಾರಣಾವತದಲ್ಲಿ ಎಚ್ಚರದಿಂದಿರಬೇಕೆಂದುಕೊಂಡನು.

ಇದ್ದುದಿದ್ದ ಹಾಗೆಯೇ ಪಾಂಡವರಿಗೆ ನಿವಾರಿಸಲಾಗದ ಕಷ್ಟವು ಕೈಗಟ್ಟಿತೆಂದು ಭೀಷ್ಮನು ವ್ಯಥೆಪಟ್ಟನು. ದುರ್ಯೋಧನನ ದುಷ್ಟ ಚರ್ಯವನ್ನೂ ಧೃತರಾಷ್ಟ್ರನ ದುಷ್ಟ ಬುದ್ಧಿಯನ್ನೂ ಕಂಡು ಅವನು ಚಿಂತಾಕುಲನಾದನು. ಹಿಂದೆ ನಡೆದ ಘಟನೆಗಳೆಲ್ಲವೂ ಒಂದೊಂದಾಗಿ ಅವನ ನೆನಪಿಗೆ ಬರಲಾರಂಭಿಸಿದುವು. ಅವನು ಪ್ರಯಾಸಪಟ್ಟು ವಿಚಿತ್ರವೀರ್ಯನನ್ನು ಸಾಕಿ ಸಲಹಿದುದನ್ನೂ, ಧೃತರಾಷ್ಟ್ರ ಪಾಂಡವರನ್ನು ಪ್ರೀತಿಪೂರ್ವಕವಾಗಿ ಸುಶಿಕ್ಷಿತರನ್ನು ಮಾಡಲು ಶ್ರಮಪಟ್ಟುದನ್ನೂ, ವಾತ್ಸಲ್ಯದಿಂದಲೂ ಅಧ್ಯವಸಾಯ ಪುರಸ್ಸರವಾಗಿಯೂ ಯುಧಿಷ್ಠಿರಾದಿ ಕುಮಾರರನ್ನು ಲಾಲಿಸಿ ಪಾಲಿಸಿದುದನ್ನೂ ನೆನೆನೆನೆದು ಅವನು ಕಣ್ಣೀರ ತುಂಬಿದನು. ಪಾಂಡುವು ತನ್ನ ಸುಖಕ್ಕೆಳಸದೆ ಧೃತರಾಷ್ಟ್ರನನ್ನು ಸುಖಪಡಿಸುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದನು; ರಾಜಸಿಂಹಾಸನಾರೂಢನಾಗಿದ್ದರೂ ರಾಜಕಾರ್ಯಗಳಲ್ಲಿ ಯಾವಾಗಲೂ ಧೃತರಾಷ್ಟ್ರನನ್ನು ಆಲೋಚನೆ ಕೇಳುತ್ತಿದ್ದನು; ಅಂತಹವನ ಮಕ್ಕಳಿಗೆ ಎರಡು ಬಗೆದು ಧೃತರಾಷ್ಟ್ರನು ಅನಿಷ್ಟವನ್ನು ಮಾಡಲುದ್ಯುಕ್ತನಾಗಿರುವನಲ್ಲಾ! ದುರ್ಯೋಧನನ ದುರ್ಮಂತ್ರದಿಂದ ಅವರ ಪ್ರಾಣಕ್ಕೆ ಹಾನಿಬರುವಂತಿದೆಯಲ್ಲಾ! ಎಂಬೀ ವಿಧವಾದ ಚಿಂತೆಗಳು ತರಂಗದೋಪಾದಿಯಲ್ಲಿ ಮೇಲೆ ಮೇಲೆ ಅವನ ಮನಸ್ಸಿಗೆ ಬರುತ್ತಿದ್ದುವು. ತನ್ನಿಂದ ಶಿಕ್ಷಿತನಾದ ದುರ್ಯೋಧನನ ದುಷ್ಟ ವ್ಯಾಪಾರ

ವನ್ನು ನೋಡಿ ಅವನು ಹಗಲಿರುಳೂ ಮರುಗಿದನು. ತಾನು ನಟ್ಟ ಮರದ ಫಲವು ವಿಷಪ್ರಾಯವಾಯಿತು. ದುಸ್ಸಹವಾದ ಮನೋವ್ಯಥೆಯಿಂದ ಅವನು ಬಳಲಿ ಬಡವಾದನು. ತಾನು ಪಾಂಡವಾದಿಗಳನ್ನು ಪಾಲಿಸುವ ಭಾರವನ್ನು ವಹಿಸಿದೆನೇಕೆ? ಹಸ್ತಿನಾಪುರವನ್ನು ತೊರೆದು ಸತ್ಯವತಿಯಂತೆಯೇ ವನವಾಸಕ್ಕೇಕೆ ಹೋಗಲಿಲ್ಲ? ಕುರುಕುಲದವರಿಂದ ಮರುಳಾಗಿ ತಾನು ಅವರ ಹಂಗಿಗೆ ಸಿಕ್ಕಿದುದೇಕೆ? ಕುರುರಾಜ್ಯದ ಹಿತ ಸಾಧನೆಗಾಗಿ ತಾನು ನಿಂತುದೇಕೆ? ಈಗೇನ ಮಾಡುವುದು? ಹೃದಯ ವಿದಾರಕವಾದ ಈ ಜ್ಞಾತಿ ವೈರವನ್ನು ನೋಡಿ ತಾನು ಹೇಗೆ ತಾನೆ ಸೈರಿಸಬಹುದು? ತನ್ನ ಬಾಳು ಬಾಳಲ್ಲ. ಹಗಲು ಮನಸ್ಸಿಗೆ ಶಾಂತಿಯಿಲ್ಲ; ಇರುಳು ನಿದ್ದೆಯಿಲ್ಲ. ತಾನು ರಾಜಪದವಿಯನ್ನು ಬಿಟ್ಟೆನು; ರಾಜಕಾರ್ಯಗಳಲ್ಲಿ ಕೈಹಾಕುವ ಅಧಿಕಾರವನ್ನು ತಾನಿಟ್ಟುಕೊಳ್ಳಲಿಲ್ಲ; ಅಂತಃಕಲಹದಿಂದ ಕುಲ ಕ್ಷಯವಾಗುವುದನ್ನು ತಾನು ಕಣ್ಣಾರೆ ನೋಡುವ ನಿಮಿತ್ತವಾಗಿಯೇ ವಿಧಾತನು ತನ್ನನ್ನು ಜೀವ ಸಹಿತ ಇಟ್ಟಿರುವನೇನೊ!—ಎಂದು ಈ ಬಗೆಯಾಗಿ ಹಂಬಲಿಸುತ್ತಿದ್ದನು.

ಇತ್ತ, ಯುಧಿಷ್ಠಿರಾದಿಗಳು ವಾರಣಾವತವನ್ನು ಸೇರಿದರು. ನಗರವಾಸಿಗಳು ಅವರನ್ನು ಆದರ ಪೂರ್ವಕವಾಗಿ ಬರಮಾಡಿಕೊಂಡರು. ಸಮದರ್ಶಿ ಯುಧಿಷ್ಠಿರನು ಅಹಂಕಾರಿಯಲ್ಲ; ಅವನು ಯಥಾ ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಮನೆಗೆ ಹೋಗಿ ಪ್ರೀತಿ ಪೂರ್ವಕವಾದ ಸಂಭಾಷಣದಿಂದ ಎಲ್ಲರನ್ನೂ ಆಪ್ಯಾಯಿತರನ್ನಾಗಿ ಮಾಡಿದನು. ಪುರ ಜನರು ಈ ವಿಧವಾದ ಅವನ ಸದಾಚರಣೆಯಿಂದ ಪ್ರೀತರಾದರು. ವಾರಣಾವತದಲ್ಲಿ ಅರಗಿನ ಮನೆಯನ್ನು ಕಟ್ಟುವುದಕ್ಕೆ ದುರ್ಯೋಧನನು ತನ್ನ ಸೇವಕನಾದ ಪುರೋಚನನ್ನು ಮೊದಲೇ ಕಳುಹಿಸಿದ್ದನು. ಅವನು ಕ್ರೂರ ಪ್ರಕೃತಿಯುಳ್ಳವನು; ದುರ್ಯೋಧನನ ಅಪ್ಪಣೆಗೆ ಅನುರೂಪವಾದ ಕಪಟ ಸೌಜನ್ಯವನ್ನು ತೋರಿಸುತ್ತ ಪಾಂಡವರನ್ನು ರಮಣೀಯವಾದ ಒಂದು ಪ್ರಾಸಾದಕ್ಕೆ ಕರೆದುಕೊಂಡು ಹೋದನು. ಆ ಜಡದಿಯ ಮನೆಯಲ್ಲಿ ಅವರಿಗೆ ದಿವ್ಯ ಭಕ್ಷ್ಯ ಭೋಜ್ಯಗಳನ್ನೂ ಪಾನೀಯಗಳನ್ನೂ ಕೊಟ್ಟು ಸತ್ಕರಿಸಿ ಸಂತೋಷ

ಪಡಿಸಲು ಯತ್ನಿಸಿದನು. ಯುಧಿಷ್ಠಿರನು ದುರ್ಯೋಧನನ ದುರಭಿ ಸಂಧಿಯನ್ನು ತಿಳಿದಿದ್ದರೂ ಯಾವ ಮಾತನ್ನೂ ಆಡದೆ, ತಾಯಿ ತಮ್ಮಂದಿರ ಸಮೇತನಾಗಿ ಆ ಮನೆಯಲ್ಲಿ ಇಳಿದು ಜೋಕೆಯಿಂ ದಿದ್ದನು. ಹತ್ತು ದಿವಸಗಳಾಯಿತು ; ಪುರೋಚನನು ತಾನು ನಿರ್ಮಾಣ ಮಾಡಿದ ಹೊಸ ಮನೆಗೆ ಅವರನ್ನು ಕರೆದುಕೊಂಡು ಹೋಗಿ ಅಲ್ಲಿ ಅವರನ್ನು ಇಳಿಸಿದನು. ಯುಧಿಷ್ಠಿರನು ತಾಯಿ ತಮ್ಮಂದಿರೊಡನೆ ಆ ಮನೆಯನ್ನು ಹೊಕ್ಕನು. ಅರಗು, ಸಜ್ಜರಸ, ಎಣ್ಣೆ, ತುಪ್ಪ ಮೊದಲಾದ ಪದಾರ್ಥಗಳ ವಾಸನೆಯನ್ನು ಹಿಡಿದು, ಆ ಮನೆಯ ಲ್ಲಿರುವುದು ಅಪಾಯಕರವೆಂದು ತಿಳಿದರೂ ಪಾಂಡವರು ಆ ಸಂಗತಿ ಯನ್ನು ಕುರಿತು ಪುರೋಚನನ ಸಂಗಡ ಒಂದು ಮಾತನ್ನೂ ಆಡದೆ ಸುಮ್ಮನಿದ್ದರು. ಅವರು ಅವನಲ್ಲಿ ವಿಶ್ವಾಸವಿಲ್ಲದವರಾದರೂ ವಿಶ್ವಾಸವುಳ್ಳವರಂತೆ ತೋರ್ಪಡಿಸಿಕೊಂಡರು ; ಅಸಂತುಷ್ಟರಾದರೂ ಸಂತುಷ್ಟರಾಗಿರುವಂತೆ ಕಾಣಿಸಿಕೊಂಡರು ; ವಿಸ್ಮಯಪಡುತ್ತಿದ್ದರೂ ವಿಸ್ಮಯಪಡದವರಂತಿದ್ದರು ; ಅಲ್ಲದೆ, ನೈಮರೆತಿರದೆ ರಹಸ್ಯವಾಗಿ ಆತ್ಮರಕ್ಷಣೆಗೆ ತಕ್ಕ ಉಪಾಯಗಳನ್ನು ಆಲೋಚಿಸುತ್ತಿದ್ದರು. ತಾವು ಅಪಾಯವನ್ನು ಶಂಕಿಸುತ್ತಿರುವ ವಿಷಯವು ಪುರೋಚನನಿಗೆ ತಿಳಿಯ ದಿರುವಂತೆ ಅವರು ಪ್ರತಿ ದಿವಸವೂ ಬೇಟೆಯ ನೆವ ಮಾಡಿಕೊಂಡು ಹಗಲು ಅಡವಿಯಲ್ಲಿ ತಿರುಗಾಡುತ್ತಿದ್ದು ಹೊತ್ತು ಮುಳುಗುತ್ತಲೆ ಮನೆಗೆ ಬರುತ್ತಿದ್ದರು. ಹೀಗೆ ಅವರು ಅರಗಿನ ಮನೆಯಲ್ಲಿ ವಾಸಮಾಡುತ್ತಿ ರಲು ಒಂದು ದಿನ, ವಿದುರನಿಗೆ ಆಪ್ತನಾದ ಒಬ್ಬ ಕೆಲಸಗಾರನು ಬಂದು ಪಾಂಡವರನ್ನು ಕಂಡು ವಿದುರನು ಹೇಳಿ ಕಳುಹಿಸಿದ ಅಂತರಂಗವನ್ನು ಏಕಾಂತವಾಗಿ ತಿಳಿಸಿ ಅರಗಿನ ಮನೆಯಿಂದ ಅವರು ತಪ್ಪಿಸಿಕೊಂಡು ಹೋಗುವುದಕ್ಕೆ ಸುರಂಗವನ್ನು ಕೊರೆದು ದಾರಿ ಯನ್ನು ಮಾಡಿದನು. ಇತ್ತ, ಪುರೋಚನನು ಪಾಂಡವರು ನಿಶ್ಚಿಂತ ರಾಗಿರುವಂತೆ ಹೊರಗೆ ತೋರ್ಪಡಿಸಿಕೊಂಡು ಓಡಾಡುತ್ತಿರುವುದನ್ನು ಕಂಡು ಆಹ್ಲಾದಪಡುತ್ತ ಅರಗಿನ ಮನೆಗೆ ಬೆಂಕಿಯನ್ನಿಡುವ ಸಮಯ ವನ್ನೇ ಕಾಯುತ್ತಿದ್ದನು.

ಒಂದು ದಿನ ಅರ್ಧರಾತ್ರಿಯಲ್ಲಿ ವಾರಣಾವತದ ಜನರೆಲ್ಲರೂ ಗಾಢನಿದ್ರೆ ಹೋಗುತ್ತಿದ್ದರು. ಸಮೀರಣನು ವೃಕ್ಷಶಾಖೆಗಳನ್ನು ಕೊಂಚ ಅಲ್ಲಾಡಿಸುತ್ತ, ಶಾಖೆಗಳಲ್ಲಿ ನಿದ್ದೆಹೋಗುತ್ತಿದ್ದ ಪಕ್ಷಿಗಳ ಶಾಂತಿ ಸುಖವನ್ನು ಕೊಂಚ ಕೆಡಿಸುತ್ತ, ಜನ ಕೋಲಾಹಲ ಶೂನ್ಯವಾದ ನಿಸ್ತಬ್ಧತೆಯನ್ನು ಕೊಂಚ ಭಂಗಪಡಿಸುತ್ತ ಸುಳಿದಾಡುತ್ತಿದ್ದನು. ಪುರೋಚನನು ಸುಖವಾಗಿ ನಿದ್ದೆಹೋಗುತ್ತಿದ್ದನು. ಆ ಸಮಯದಲ್ಲಿ ಭೀಮಸೇನನು ಪುರೋಚನನು ಮಲಗಿದ್ದ ಚಿಕ್ಕಮನೆಗೂ ಅರಗಿನ ಮನೆಯ ಬಾಗಲಿಗೂ ಬೆಂಕಿಯಿಟ್ಟನು. ಬಿರುಗಾಳಿಯೂ ಎದ್ದಿತು. ಮುಹೂರ್ತ ಮಾತ್ರದಲ್ಲಿ ಅರಗಿನ ಮನೆಯ ನಾಲ್ಕು ದಿಕ್ಕಿನಲ್ಲಿಯೂ ಉರಿಯೆದ್ದಿತು. ಒಡನೆಯೇ, ಪಾಂಡವರು ತಾಯಿಯೊಡನೆ ಸುರಂಗದ ಮಾರ್ಗವಾಗಿ ಅರಗಿನ ಮನೆಯನ್ನು ಬಿಟ್ಟು ಹೊರಟರು. ಬರುತ ಬರುತ ಅಗ್ನಿಜ್ವಾಲೆಯು ಮೇಲಕ್ಕೇರಿತು; ಕಿಡಿಗಳು ಗಗನಕ್ಕೆ ನೆಗೆದುವು. ಆ ಕಾಳರಾತ್ರಿಯಲ್ಲಿ ಆ ಅಗ್ನಿಜ್ವಾಲೆಯು ಪ್ರಜ್ವಲಿಸಿ ನಗರವನ್ನು ಬೆಳಗಿತು. ಪುರವಾಸಿಗಳು ಬೆರಗಾಗಿ ಹೆದರಿ ಹಾಸಿಗೆಯಿಂದೆದ್ದು ನೋಡಿದರು. ಅರಗಿನ ಮನೆಯು ಭಯಂಕರವಾಗಿ ಉರಿಯುತ್ತಿದ್ದಿತು. ಗಾಳಿಯು ಬಿರುಸಾದಹಾಗೆಲ್ಲ ಉರಿಯು ಹಬ್ಬುತ್ತ ಹೋಯಿತು. ಮನೆಯ ಮೇಲೆ ಮನೆ ಭಸ್ಮವಾಗುತ್ತ ಬಂದಿತು. ಪಾಂಡವರು ತಾಯಿಯೊಡನೆ ಸುರಕ್ಷಿತವಾಗಿ ಅರಗಿನ ಮನೆಯನ್ನು ಬಿಟ್ಟು ಹೋದ ಸಂಗತಿಯನ್ನು ಯಾರೂ ಅರಿಯದಿದ್ದರು. ಅವರು ಕುಂತಿಯ ಸಮೇತರಾಗಿ ಕಿಚ್ಚಿನಲ್ಲಿ ಮಡಿದರೆಂದೇ ಪುರವಾಸಿಗಳೆಲ್ಲರೂ ಭಾವಿಸಿದರು. ಅವರು ಹೋದರಲ್ಲಾ ಎಂದು ಎಲ್ಲರೂ ಗೋಳಿಡಲಾರಂಭಿಸಿದರು. ಬೆಳಗಾಗುತ್ತಲೆ ಎಲ್ಲರೂ ಕುಂತೀ ಪಾಂಡವರ ಅಸ್ಥಿಗಳನ್ನು ಹುಡುಕುವ ಸಲುವಾಗಿ ಭಸ್ಮರಾಶಿಯನ್ನು ಬಗೆದರು. ಸುಟ್ಟು ಕರಿಯಾಗಿದ್ದ ಆರ್ರು ಕಂಕಾಳಗಳು ಕಣ್ಣಿಗೆ ಬಿದ್ದುವು. ಒಬ್ಬ ಬೇಡಿತಿಯೂ ಅವಳ ಐವರು ಮಕ್ಕಳೂ ಆ ರಾತ್ರಿ ಅರಗಿನ ಮನೆಯಲ್ಲಿ ಮಲಗಿದ್ದರು. ಅವರನ್ನೇ ಎಲ್ಲರೂ ಕುಂತೀಪಾಂಡವರೆಂದೆಣಿಸಿ ಪಾಂಡವರು ತಾಯಿಯೊಡನೆ ಬೆಂದುಹೋದರೆಂದುಕೊಂಡು ಪರಿತಪಿಸಿ ಗೋಳಾಡಿದರು. ಈ

ಸಂದಣಿಯಲ್ಲಿ ಆ ಕೆಲಸಗಾರನು ಸುರಂಗದ ಬಿಲವನ್ನು ಬೂದಿಯಿಂದ ಮುಚ್ಚಿ, ಯಾರೂ ಕಾಣದಂತೆ ಹೊರಟುಹೋದನು. ಪುರೋಚನನ ದಗ್ಧಾವಶಿಷ್ಟ ಕಂಕಾಳವು ಆ ಭಸ್ಮರಾಶಿಯಲ್ಲಿ ಕಂಡುಬಂದಿತು. ತರು ವಾಯ, ಪಾಂಡವರೂ ಕುಂತಿಯೂ ಬೆಂದುಹೋದರೆಂಬುದರಲ್ಲಿ ಅಣು ಮಾತ್ರವೂ ಸಂಶಯಪಡದೆ ಪುರಜನರು, "ಲಾಕ್ಷಾಭವನವು ಬೆಂದು ಹೋಯಿತು, ಪಾಂಡವರೂ ಕುಂತಿಯೂ ಸುಟ್ಟುಹೋದರು, ಪುರೋ ಚನನೂ ಸತ್ತನು" ಎಂದು ಧೃತರಾಷ್ಟ್ರನಿಗೆ ವರ್ತಮಾನವನ್ನು ಕೊಟ್ಟರು. ಆ ಸುದ್ದಿಯನ್ನು ಕೇಳಿ ಒಬ್ಬೊಬ್ಬರು ಒಂದೊಂದು ಬಗೆ ಯಾಗಿ ಪ್ರಲಾಪಿಸುತ್ತ ಅತ್ತರು.

ಧೃತರಾಷ್ಟ್ರನು—"ಈ ದಿವಸ ನನ್ನ ತಮ್ಮ ಯಶೋವಂತನಾದ ಪಾಂಡುರಾಯನು ಸತ್ತನು. ವಂಶವಿವರ್ಧನರಾದ ಪಾಂಡವರೂ ಕುಂತಿಯ ಸಮೇತರಾಗಿ ಹೋದರು ; ಇನ್ನು, ಧನದ ಮೂಲಕವಾಗಿ ಅವರಿಗೆ ಯಾವಯಾವ ಹಿತವನ್ನು ಮಾಡಲು ಶಕ್ಯವೋ ಅದೆಲ್ಲವನ್ನು ಮಾಡುವೆನು" ಎಂದು ಕಪಟ ಶೋಕವನ್ನು ತೋರಿಸಿ ಪಾಂಡವಾದಿ ಗಳಿಗೆ ಉದಕ ಕ್ರಿಯೆಗಳನ್ನು ಮಾಡುವ ಸಲುವಾಗಿ ಬಂಧುಬಳಗ ದೊಡನೆ ಗಂಗಾತೀರಕ್ಕೆ ಹೋದನು. ಉದಕ ಕ್ರಿಯೆಗಳು ನಡೆಯು ತ್ತಿರುವಲ್ಲಿ, ವಿದುರನು ಧೃತರಾಷ್ಟ್ರನ ಮನೋಗತವನ್ನು ಬಲ್ಲವ ನಾದುದರಿಂದ, ಕುಟಿಲನೂ ಕಪಟಿಯೂ ಆದ ಆ ಧೃತರಾಷ್ಟ್ರನು ಏಕೆ ಹುಟ್ಟಿದನೋ ಎಂದು ಮನಸ್ಸಿನಲ್ಲಿ ಚಿಂತಿಸುತ್ತ, ಪಾಂಡವರು ಸುರ ಕ್ಷಿತರಾಗಿರುವರೆಂದು ತಿಳಿದಿದ್ದರೂ, ಅಳುತ್ತಿರುವ ಬಂಧುಮಿತ್ರರ ಸಂಗಡ ತಾನೂ ದುಃಖಪಡುತ್ತಿರುವವನಂತೆ ಕಾಣಿಸಿಕೊಂಡನು ; ಮನಸ್ಸಿನಲ್ಲಿ ಮಾತ್ರ ಪಾಂಡವರು ಅರಗಿನ ಮನೆಯಿಂದ ತಪ್ಪಿಸಿ ಕೊಂಡು ಎಷ್ಟು ದೂರ, ಎಲ್ಲಿಗೆ ಹೋಗಿರಬಹುದೆಂದು ಚಿಂತಿಸು ತ್ತಿದ್ದನು.

ಭೀಷ್ಮನಾದರೋ—"ಹಾ ಯುಧಿಷ್ಠಿರ! ಹಾ ಭೀಮ! ಹಾ ಧನಂಜಯ! ಹಾ ನಕುಲ! ಹಾ ಸಹದೇವ! ಹಾ ಪೃಥೆ! ನೀವೆಲ್ಲರೂ

ಒಂದೇ ರಾತ್ರಿಯಲ್ಲಿ ಸ್ವರ್ಗಸ್ಥರಾದಿರಲ್ಲಾ! ಭೀಮಸೇನ ಧನಂಜಯರು ಬೆಂದುಹೋದರೆಂದು ನಾನು ಹೇಗೆ ನಂಬಲಿ? ಯುಧಿಷ್ಠಿರನು ಬ್ರಾಹ್ಮಣರಿಂದ ಧರ್ಮರಾಯನೆನಿಸಿಕೊಂಡನು, ಅವನು ಸತ್ಯ ವ್ರತನು, ಸತ್ಯ ವಾಕ್ಯನು, ಶುಭ ಲಕ್ಷಣ ಸಂಪನ್ನನು; ಅಂತಹವನು ಹೇಗೆ ಕಾಲ ವಶನಾದನು? ಅವನು ಯುವರಾಜನಾದ ತರುವಾಯ ಸತ್ಯ ಧರ್ಮ ಪ್ರವೃತ್ತಿಗಳಿಂದ ತಂದೆಗೂ ನನಗೂ ಕೀರ್ತಿಬರುವಂತೆ ನಡೆಯುತ್ತಿದ್ದನು. ಬಹು ಕಾಲ ಬೆಳೆಯಿಸಿದ ಮರವು ಫಲ ಕಾಲಕ್ಕೆ ಮುರಿದು ಬಿದ್ದಂತಾಯಿತಲ್ಲಾ! ಕುಂತಿಯು ಮಕ್ಕಳ ಮೇಲಣ ಪ್ರೀತಿಯಿಂದ ಸಹಗಮನ ಮಾಡುವ ಸಂಕಲ್ಪವನ್ನು ಬಿಟ್ಟಳು; ಈಗ ಅಪೂರ್ಣ ಮನೋರಥೆಯಾಗಿ ಮಕ್ಕಳೊಂದಿಗೆ ಬೆಂದುಹೋದಳು. ಭೀಮನು ಮಡಿದನೇ? ಅದು ಹೇಗೆ? ಅವನು ಮಹಾಬಾಹು, ಪರಾಕ್ರಮಶಾಲಿ. ಅವನು ಉರಿದು ಹೋದ ವ್ಯಥೆಯನ್ನು ನಾನು ಹೇಗೆ ಸಹಿಸಲಿ? ಅರ್ಜುನನೋ? ಅವನು ಮಹಾವೀರನು, ಧನುರ್ಧರ ಶ್ರೇಷ್ಠನು, ದೃಢಾಯುಧನು; ಅಷ್ಟೇ ಅಲ್ಲ, ಅತಿ ತ್ಯಾಗಿ. ಆ ಶೂರನು ಹೇಗೆ ಕಾಲವಶನಾದನು? ಸಿಂಹ ವಿಕ್ರಾಂತರಾದ ನಕುಲ ಸಹದೇವರು ಮಡಿದರೆಂದು ನಂಬಬಹುದೆ? ಮಕ್ಕಳಿರಾ! ವೃದ್ಧನೂ ದುರ್ಬಲನೂ ಆದ ನನ್ನನ್ನು ಬಿಟ್ಟು ಎಲ್ಲಿ ಹೋದಿರಿ? ಎಲೌ ಕುಂತೀ! ನೀನೆಲ್ಲಿ ಹೋದೆ? ವಾರಣಾವತಕ್ಕೆ ಹೋಗುತ್ತಿರುವಾಗ ದಾರಿಯಲ್ಲೇನು ಅಪಶಕುನಗಳಾದುವು? ಸಿಂಹ ಶಾರ್ದೂಲಗಳಿರಾ! ನನ್ನ ನಾಥರೇ! ನೀವು ಹೋಗಲಾಗಿ ನನಗೆ ಲೋಕವು ಕತ್ತಲೆ ಕವಿದಂತಿರುವುದು. ತರುಣಾದಿತ್ಯನಂತೆ ವರ್ಚಸ್ವಿಗಳಾದ ನಿಮ್ಮನ್ನು ನಾನು ಕಾಣುವುದೆಂದಿಗೆ? ನನಗೇನು ಗತಿ? ನಾನೆತ್ತ ಹೋಗಲಿ? ನನ್ನ ಮಕ್ಕಳನ್ನು ಎಲ್ಲಿ ನೋಡಲಿ? ಮಕ್ಕಳಿರಾ! ಹೋಗಬೇಡಿರಿ, ಬನ್ನಿರಿ, ನನ್ನಲ್ಲಿ ಕೋಪವನ್ನು ಬಿಡಿರಿ'' ಎಂದು ಪ್ರಲಾಪಿಸಿದನು.

ಭೀಷ್ಮನು ಈ ತೆರವಾಗಿ ರೋದನ ಮಾಡುತ್ತಿರುವುದನ್ನು ನೋಡಿ, ವಿದುರನು—''ನರವ್ಯಾಘ್ರನೇ! ಧೈರ್ಯವನ್ನು ತಂದುಕೊ, ಶೋಕವನ್ನು ಬಿಡು'' ಎಂದು ಹೇಳಿ ಅಂತರಂಗವಾಗಿ, ಪಾಂಡವರು

ಸುರಕ್ಷಿತವಾಗಿದ್ದಾರೆಂದು ಸೂಚಿಸಿ, ಅವರಿಗೆ ಬಂದ ಗಂಡವು ತೊಲಗುವಂತೆ ತಾನು ಮಾಡಿದ ಸಂಚನ್ನು ವಿವರಿಸಿದನು. ಅದೆಲ್ಲವನ್ನು ಕೇಳಿ ಭೀಷ್ಮನು ಶೋಕವನ್ನು ಬಿಟ್ಟು, ವಿದುರನು ಮಾಡಿದ ಉಪಕಾರಕ್ಕೆ ಅವನನ್ನು ಬಹುವಾಗಿ ಶ್ಲಾಘಿಸಿದನು.

ಇತ್ತ, ಯುಧಿಷ್ಠಿರನು ತಾಯಿಯನ್ನೂ ತಮ್ಮಂದಿರನ್ನೂ ಕರೆದುಕೊಂಡು ಲಾಕ್ಷಾಭವನದಿಂದ ಹೊರಟು, ಯಾರೂ ಕಾಣದಂತೆ ಭಾಗೀರಥಿಯ ದಕ್ಷಿಣ ತೀರವನ್ನು ಸೇರಿ, ವಿದುರನು ಕಳುಹಿಸಿಕೊಟ್ಟ ಒಂದು ಓಡೆಯು ಸಿದ್ಧವಾಗಿರಲು, ಅದನ್ನು ಹತ್ತಿ ಭಾಗೀರಥಿಯನ್ನು ದಾಟಿ, ತಟವರ್ತಿಯಾದೊಂದು ವನವನ್ನು ಹೊಕ್ಕರು. ದುಷ್ಟ ದುರ್ಯೋಧನನ ದೆಸೆಯಿಂದ ಅವರ ಶಂಕೆಗೆ ಅವಧಿಯಿಲ್ಲವಾಯಿತು; ಚಿಂತೆಗೆ ಅಂತ್ಯವಿಲ್ಲವಾಯಿತು, ಕಷ್ಟಕ್ಕೆ ಪಾರವಿಲ್ಲವಾಯಿತು. ಭೀಮಬಲನಾದ ವೃಕೋದರನು ತಾಯಿಯನ್ನೂ ಅಣ್ಣ ತಮ್ಮಂದಿರನ್ನೂ ಕರೆದುಕೊಂಡು ಕ್ರೂರ ಮೃಗ ಪಕ್ಷಿಗಳಿಂದ ಸಮೃದ್ಧವಾದ ವನಗಳಲ್ಲಿ ನಡೆಯುತ್ತ ದಾರಿಯಲ್ಲಿ ಮೇಲೆ ಬಿದ್ದ ಹಿಡಿಂಬನೊಡನೆ ಹೆಣಗಿ ಅವನನ್ನು ಕೊಂದು, ಒಲಿದು ಬಂದ ಅವನ ತಂಗಿ ಹಿಡಿಂಬೆಯನ್ನು ಮದುವೆಯಾದನು. ಅಲ್ಲಿಂದ ಐವರು ಸೋದರರೂ ಬ್ರಾಹ್ಮಣ ವೇಷವನ್ನು ತಾಳಿ ಜಟಾವಲ್ಕಲ ಕೃಷ್ಣಾಜಿನಗಳಿಂದ ತಮ್ಮ ಕ್ಷಾತ್ರ ತೇಜಸ್ಸನ್ನು ಮರೆಮಾಜಿ ಏಕಚಕ್ರ ನಗರವನ್ನು ಸೇರಿದರು. ಅಲ್ಲಿ ಪ್ರತಿ ದಿನವೂ ಉಷಃಕಾಲಕ್ಕೆದ್ದು ಸ್ನಾನಾದಿ ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಭಿಕ್ಷಾನ್ನವನ್ನೆತ್ತಿ ಹೊಟ್ಟೆಹೊರೆಯುತ್ತ, ಭೋಜನಾನಂತರದಲ್ಲಿ ಕೊಂಚ ಹೊತ್ತು ಒಬ್ಬ ಬ್ರಾಹ್ಮಣನ ಮುಖದಿಂದ ತೀರ್ಥಕ್ಷೇತ್ರಗಳ ಮಾಹಾತ್ಮ್ಯವನ್ನೂ ಪುಣ್ಯಶ್ಲೋಕರ ಕಥೆಗಳನ್ನೂ ಕೇಳುತ್ತ, ಕೊಂಚ ಹೊತ್ತು ಸುತ್ತುಮುತ್ತಲಿದ್ದ ಸರಿತ್ಸರೋವರಗಳನ್ನು ನೋಡಿ ತಮ್ಮ ಕಷ್ಟ ನಷ್ಟಗಳನ್ನು ಮರೆಯುತ್ತ ಇದ್ದು ಹಲವು ಕಾಲ ತಳ್ಳಿದರು.

ಈ ರೀತಿಯಲ್ಲಿ, ಕುಂತಿಭೋಜನ ಮಗಳೆನಿಸಿಕೊಂಡು, ಸರ್ವಲಕ್ಷಣ ಸಂಪನ್ನೆಯಾಗಿ, ಮಹಾರಾಜ ಪಾಂಡುವಿನ ಪಟ್ಟದರಸಿಯಾಗಿ,

ಪಾಂಡವರ ವೀರಮಾತೆಯಾಗಿಯೂ ಕೂಡ ಕುಂತಿಯೂ, ತ್ರಿಲೋಕಾಧಿಪತ್ಯಕ್ಕೆ ಅರ್ಹನೆಂದು ಹೆಸರುಗೊಂಡೂ ಕೂಡ ಧರ್ಮರಾಯನೂ, ಅತುಲ ಭುಜ ಬಲನೆಂದು ಪ್ರಸಿದ್ಧನಾಗಿದ್ದೂ ಕೂಡ ಭೀಮನೂ, ಅನುಪಮ ಧನುಷ್ಮಂತನೆಂದು ಪ್ರಶಂಸೆಯನ್ನು ಪಡೆದೂ ಕೂಡ ಅರ್ಜುನನೂ, ಅಶ್ವಿನಿ ಕುಮಾರರಂತೆ ರೂಪಸಂಪನ್ನರಾಗಿದ್ದೂ ಕೂಡ ನಕುಲ ಸಹದೇವರೂ ಏಕಚಕ್ರ ನಗರದಲ್ಲಿ ಭಿಕ್ಷಾನ್ನದಿಂದ ಜೀವಿಸುತ್ತಿದ್ದರು. ಹೀಗಿರುವಲ್ಲಿ, ಪಾಂಚಾಲ ದೇಶದ ಮಹಾರಾಜ ದ್ರುಪದರಾಯನು ಕೃಷ್ಣೆಯೆಂಬ ತನ್ನ ಮಗಳಿಗೆ ತಕ್ಕ ವರನನ್ನು ಹವಣಿಸುವ ಪ್ರಯತ್ನದಲ್ಲಿದ್ದನು. ಈ ಶುಭ ವರ್ತಮಾನವನ್ನು ಭಿಕ್ಷೋಪಜೀವಿಗಳಾಗಿದ್ದ ಆ ರಾಜಪುತ್ರರೂ ರಾಜಮಹಿಷಿಯೂ ಕೇಳಿದರು.

ಆ ಕಾಲದ ರಮಣಿಯರಲ್ಲಿ ಕೃಷ್ಣೆಗೆಣೆಯಾದ ಲಾವಣ್ಯವತಿಯರಾರೂ ಇರಲಿಲ್ಲ. ಆ ನಿರುಪಮ ಸುಂದರಿಯನ್ನು ದ್ರುಪದನು ಧನುರ್ವಿದ್ಯಾ ವಿಶಾರದನಾದ ವರನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದನು. ತನ್ನಿಮಿತ್ತವಾಗಿ ಆ ರಾಜನು, "ಕುಲರೂಪ ಸಮನ್ವಿತನಾದ ಯಾವ ಕ್ಷತ್ರಿಯನು ಐದು ಬಾಣಗಳಿಂದ ನಾಟಿಟ್ಟಿರುವ ಲಕ್ಷ್ಯವನ್ನು ಛೇದಿಸಬಲ್ಲನೋ ಆ ಕ್ಷತ್ರಿಯನು ಪಾಂಚಾಲಿಯ ಪಾಣಿಗ್ರಹಣಕ್ಕೆ ಉಚಿತ ಪಾತ್ರನೆನಿಸಿಕೊಳ್ಳುವನು" ಎಂದು ರಾಜಮಂಡಲಿಯಲ್ಲಿ ಡಂಗುರ ಹೊಯ್ಸಿದನು. ಆ ಸುದ್ದಿಯನ್ನು ಕೇಳಿ, ಕನ್ಯಾರ್ಥಿಗಳಾದ ಅನೇಕ ರಾಜರು ಪಾಂಚಾಲ ನಗರಕ್ಕೆ ಹೊರಟರು. ಏಕಚಕ್ರ ನಗರದಲ್ಲಿ ಬ್ರಾಹ್ಮಣ ವೇಷಧಾರಿಗಳಾಗಿ ಭಿಕ್ಷಾಟನದಿಂದ ಜೀವಿಸುತ್ತಿದ್ದ ಪಾಂಡವರೂ, ಸ್ವಯಂವರವನ್ನು ನೋಡುವುದಕ್ಕೆ ಹೋಗುತ್ತಿದ್ದ ಬ್ರಾಹ್ಮಣರ ಜತೆಯಲ್ಲಿ, ಪಾಂಚಾಲ ನಗರಕ್ಕೆ ಹೋಗಿ, ಅಲ್ಲಿ ಒಬ್ಬ ಕುಂಬಾರನ ಮನೆಯಲ್ಲಿಳಿದುಕೊಂಡು, ಭಾಂಡದಲ್ಲಿ ಭಿಕ್ಷಾನ್ನವೆತ್ತಿ ಉದರ ಭರಣ ಮಾಡುತ್ತಿದ್ದರು.

ದ್ರುಪದರಾಯನು ನಗರದ ಈಶಾನ್ಯ ಭಾಗದಲ್ಲಿ ಸ್ವಯಂವರ ಮಂಟಪವನ್ನು ಕಟ್ಟಿಸಿದನು. ಆ ಮಂಟಪದ ನಾಲ್ಕು ದಿಕ್ಕುಗಳಲ್ಲಿಯೂ ದೇಶ ದೇಶಗಳಿಂದ ಬಂದ ರಾಜರು ಇಳಿಯುವುದಕ್ಕೆ ಕಟ್ಟಿದ ಪ್ರಾಸಾದ

ಗಳು ಶುಭ್ರವಾಗಿಯೂ ಉನ್ನತವಾಗಿಯೂ ಕಣ್ಗೊಳಿಸುತ್ತಿದ್ದುವು. ಸಭಾ ಮಂಟಪವು ಚಂದ್ರಾತಪದಿಂದಲೂ ಸುಗಂಧ ಪುಷ್ಪ ಮಾಲೆಗಳಿಂದಲೂ ಅಲಂಕೃತವಾಗಿದ್ದಿತು; ದ್ವಾರಗಳು ತೋರಣಗಳಿಂದ ವಿರಾಜಿಸುತ್ತಿದ್ದುವು; ರಂಗಭೂಮಿಯೆಲ್ಲವೂ ಅಗುರು ಧೂಪದಿಂದಲೂ ಗಂಧ ಮಾಲ್ಯಗಳಿಂದಲೂ ಘಮ ಘಮಿಸುತ್ತಿದ್ದಿತು; ಮಂಗಳ ವಾದ್ಯವೂ ಮೊಳಗುತ್ತಿದ್ದಿತು.

ಇಟ್ಟಿದ್ದ ಮುಹೂರ್ತಕ್ಕೆ ಸರಿಯಾಗಿ ಸ್ವರಾಷ್ಟ್ರ ರಕ್ಷಕರೂ ಶುಭ ಕರ್ಮನಿಷ್ಠರೂ ಆದ ರಾಜರು ವಿಚಿತ್ರ ವೇಷ ಭೂಷಣಗಳಿಂದಲಂಕೃತರಾಗಿ ಸ್ವಯಂವರ ಮಂಟಪವನ್ನು ಹೊಕ್ಕು ಮಣಿಮಯ ಮಂಚಗಳ ಮೇಲೆ ಕುಳಿತುಕೊಂಡರು. ಯಥಾ ಸ್ಥಾನದಲ್ಲಿ ಪುರ ಜನರೂ ಜನಪದ ವಾಸಿಗಳೂ ಬಂದು ಕುಳಿತು ಮಂಟಪದ ವೈಚಿತ್ರ್ಯ ವೈಭವಗಳನ್ನು ನೋಡಿ ವಿಸ್ಮಯಪಡುತ್ತಿದ್ದರು. ಋಷಿಗಳೂ ಬ್ರಾಹ್ಮಣರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು ಸ್ವಸ್ತಿವಾಚನ ಮಾಡುತ್ತಿದ್ದರು. ಪಾಂಡುತನಯರು ಬಡ ಬ್ರಾಹ್ಮಣರಂತೆ ಉಟ್ಟು ತೊಟ್ಟು ಬ್ರಾಹ್ಮಣ ಗೋಷ್ಠಿಯಲ್ಲಿ ಸೇರಿದ್ದರು. ದುರ್ಯೋಧನಾದಿ ಕೌರವರಾಯರು ಸುಸಜ್ಜಿತ ಭೂಪಾಲಕರ ನಡುವೆ ಅಟ್ಟಹಾಸದಿಂದ ಉನ್ನತ ಮಂಚಗಳ ಮೇಲೆ ಸುಖಾಸೀನರಾಗಿದ್ದರು.

ಅನಂತರ, ಮಂತ್ರವೇತ್ತರಾದ ಪುರೋಹಿತರು ವಿಧ್ಯುಕ್ತವಾಗಿ ಮಂಗಳಾಚರಣವನ್ನು ಮಾಡಲು, ಕೃಷ್ಣೆಯು ಸರ್ವಾಭರಣ ಭೂಷಿತೆಯಾಗಿ ಸುವರ್ಣ ವರಣಮಾಲೆಯನ್ನು ಕೈಯಲ್ಲಿ ಹಿಡಿದು ಒಡಹುಟ್ಟಿದ ಧೃಷ್ಟದ್ಯುಮ್ನನನ್ನೊಡಗೊಂಡು ಸಭಾ ಮಂಟಪವನ್ನು ಪ್ರವೇಶ ಮಾಡಿದಳು. ಅಲ್ಲಿ ಕುಳಿತಿದ್ದ ರಾಜಕುಮಾರರೊಳಗೆ ಯಾರ ಪುಣ್ಯವು ಚೆನ್ನಾಗಿರುವುದೋ ಎಂದು ನೋಡಲು ಸಭಾಸದರು ಕುತೂಹಲರಾದರು. ಪಾಂಚಾಲ ರಾಜಕುಮಾರನು ತಂಗಿಯೊಂದಿಗೆ ಸಭೆಯು ಮುಂದೆ ನಿಂತು ಮೇಘ ಗಂಭೀರ ಸ್ವರದಿಂದ ಆ ರಾಜರನ್ನು ಸಂಬೋಧಿಸಿ—"ರಾಜವರ್ಯರೇ! ಲಾಲಿಸಿರಿ; ಇಲ್ಲಿ ಈ ಬಿಲ್ಲೂ ಶರ ಪಂಚಕವೂ ಇರುವುವು. ಅಂತರಿಕ್ಷದಲ್ಲಿ ಕಟ್ಟಿರುವ ಆ ಕೃತಕ ಮತ್ಸ್ಯವೇ

ಲಕ್ಷ್ಯವು. ಅದರ ಕೆಳಗಿರುವ ಯಂತ್ರದ ಮಧ್ಯದಲ್ಲಿ ಒಂದು ಕಂಡಿಯು ಕಾಣುತ್ತಿರುವುದು. ಇಲ್ಲಿ ನೀರಿನೊಳಗೆ ಕಾಣಿಸುವ ಆ ವಿಮಾನಿನ ನೆರಳನ್ನು ನೋಡಿ ಯಂತ್ರದ ಮೇಲಿರುವ ವಿಮಾನನ್ನು ಈ ಪಂಚ ಶರದಿಂದ ಗುರಿಯಿಟ್ಟು ಯಾವ ಭೂಪನು ಹೊಡೆಯುವನೋ, ಆ ಭೂಪನ ಕೊರಳಿಗೆ ನನ್ನ ತಂಗಿ ಕೃಷ್ಣೆಯು ವರಣ ಮಾಲೆಯನ್ನು ಸಮರ್ಪಿಸು ವಳು'' ಎಂದು ನುಡಿದು, ಅಲ್ಲಿ ನೆರೆದಿದ್ದ ಭೂಪತಿಗಳ ನಾಮ ಕುಲ ಗೋತ್ರಗಳನ್ನು ಹೇಳಿ ತಂಗಿಯ ಕಡೆಗೆ ತಿರುಗಿ—''ಭದ್ರೆ! ಖ್ಯಾತರಾದ ಕ್ಷತ್ರಿಯರು ನಿನ್ನನ್ನು ಬಯಸಿ ಬಂದಿರುವರು. ಶುಭೆ! ಯಾರು ಲಕ್ಷ್ಯಭೇದವನ್ನು ಮಾಡುವರೋ ಅವರನ್ನು ವರಿಸು'' ಎಂದನು.

ಧೃಷ್ಟದ್ಯುಮ್ನನು ಘಂಟಾ ಘೋಷವಾಗಿ ಆ ಮಾತನ್ನು ಹೇಳಿ ಹಿಂದಕ್ಕೆ ಹೋಗುತ್ತಲೆ ಸಭಾಮಂಟಪದಲ್ಲಿ ಕಲ ಕಲ ಶಬ್ದವು ಹುಟ್ಟಿತು. ಎಲ್ಲರೂ ಲಕ್ಷ್ಯವನ್ನು ನೋಡುವ ಸಲುವಾಗಿ ಕಣ್ಣೆತ್ತಿದರು. ಶಬ್ದವು ಶಾಂತವಾಗುತ್ತಲೆ ರಾಜರು ಒಬ್ಬೊಬ್ಬರಾಗಿ ಲಕ್ಷ್ಯ ಭೇದ ವನ್ನು ಮಾಡಲು ಯತ್ನಿಸಿದರು. ಆದರೆ, ಯಾರೂ ಬಿಲ್ಲನ್ನು ಬಗ್ಗಿಸಿ ಹೆದೆಯನ್ನೇರಿಸಲಾರದೆ ನಾಚಿ ತಂತಮ್ಮ ಸ್ಥಾನಕ್ಕೆ ಹೋಗಿ ಕುಳಿತರು. ಅಲ್ಲಿದ್ದ ದುರ್ಯೋಧನ ಪ್ರಭೃತಿಗಳೂ ಶರ ಸಂಧಾನದಲ್ಲಿ ಭಗ್ನಮನೋ ರಥರಾದರು. ಛದ್ಮ ವೇಷಧಾರಿಯಾದ ಅರ್ಜುನನ ಗುರುತನ್ನು ಯಾರೂ ಹಿಡಿಯಲಾರದಿದ್ದರು; ದುರ್ಯೋಧನಾದಿಗಳಿಗೂ ಅದು ಸಾಧ್ಯವಾಗ ಲಿಲ್ಲ. ಬಲದೃಪ್ತರಾದ ಕ್ಷತ್ರಿಯರು ಒಬ್ಬೊಬ್ಬರಾಗಿ ಹತೋದ್ಯಮರೂ ಹತಾಶರೂ ಆದ ಬಳಿಕ, ಬ್ರಾಹ್ಮಣ ವೇಷಧಾರಿಯಾದ ಅರ್ಜುನನು ಪಂಜೆಯನ್ನು ಕೊಡವಿಕೊಂಡು ಧನುಸ್ಸಿನ ಬಳಿಗೆ ಹೋಗುತ್ತಿರು ವುದನ್ನು ನೋಡಿ ಎಲ್ಲರೂ ಗುಲ್ಲೆಬ್ಬಿಸಿದರು. ಅಲ್ಲಿದ್ದ ಕೆಲ ಬ್ರಾಹ್ಮಣರು —''ಅಸ್ತ್ರ ವಿದ್ಯಾ ವಿಶಾರದರಾದ ಮಹಾರಥರು ಆ ಧನುಸ್ಸನ್ನು ಬಗ್ಗಿಸ ಲಾರದೆ ಹೋದರು; ಈ ಬಡ ಬ್ರಾಹ್ಮಣನು ಆ ವಿದ್ಯೆಯ ಗಂಧವನ್ನೇ ಕಾಣನು; ಅದರ ಮೇಲೆ ದುರ್ಬಲನು; ಇನ್ನು, ಧನುಸ್ಸನ್ನು ಬಗ್ಗಿಸ ಲಾಪನೆ? ಈ ವಟುವಿಗೆ ಇದೆಲ್ಲಿಯ ಚಾಪಲ್ಯ? ಇವನೇಕೆ ಈ ಸಾಹಸಕ್ಕೆ ಹೋಗುವನು? ಈ ಭೂಪತಿಗಳ ನಡುವೆ ನಾವೆಲ್ಲರೂ ಹಾಸ್ಯಾಸ್ಪದ

ರಾಗುವೆವು; ಆದಕ್ಕೆ ಸಂದೇಹವಿಲ್ಲ'' ಎಂದು ಮಾತನಾಡಿಕೊಂಡರು. ಇನ್ನು ಕೆಲವರು, ಬ್ರಾಹ್ಮಣರಿಗೆ ಯಾವುದು ಅಸಾಧ್ಯ? ಜಲಪಾನದಿಂದಲೋ ವಾಯು ಭಕ್ಷಣದಿಂದಲೋ ಫಲಾಹಾರದಿಂದಲೋ ಪ್ರಾಣಧಾರಣೆಮಾಡಿ ನವೆದಿದ್ದರೂ ಅವರು ದೃಢ ವ್ರತರಾಗಿ ತಪೋನಿಷ್ಠೆಯಿಂದ ಬಲಿಷ್ಠರಾಗಿರುವರು. ಜಾಮದಗ್ನ್ಯನು ಯುದ್ಧದಲ್ಲಿ ಕ್ಷತ್ರಿಯರನ್ನು ಸಂಹಾರ ಮಾಡಲಿಲ್ಲವೆ? ಅಗಸ್ತ್ಯನು ಬ್ರಹ್ಮ ತೇಜಸ್ಸಿನಿಂದ ಅಗಾಧ ಸಮುದ್ರವನ್ನು ಪಾನಮಾಡಿಬಿಡಲಿಲ್ಲವೆ?'' ಎಂದುಕೊಂಡರು. ಮತ್ತೆ ಕೆಲವರು—''ಈ ಬ್ರಾಹ್ಮಣ ವಟುವು ವರ್ಚಸ್ವಿ, ದೃಢ ಕಾಯನು, ಉತ್ಸಾಹಶಾಲಿ; ಇವನ ಸಾಹಸವನ್ನು ನೋಡಿದರೆ ಇವನು ಗೆದ್ದರೂ ಗೆಲ್ಲಬಹುದು'' ಎಂದು ಹೇಳಿಕೊಳ್ಳುತ್ತಿದ್ದರು.

ಹೀಗೆ ಹಲವರು ಹಲವು ಬಗೆಯಲ್ಲಿ ಬಾಯಿಗೆ ಬಂದಂತೆ ಮಾತನಾಡಿಕೊಳ್ಳುತ್ತಿದ್ದ ಹಾಗೆಯೇ ಧನುಸ್ಸಿನ ಹತ್ತಿರ ನಿಂತಿದ್ದ ಅರ್ಜುನನು—''ಬ್ರಾಹ್ಮಣನು ಈ ಧನುಸ್ಸನ್ನು ಏರಿಸಬಹುದೋ?'' ಎಂದು ಧೃಷ್ಟದ್ಯುಮ್ನನನ್ನು ಕೇಳಿದನು.

ಅದಕ್ಕವನು, ಆಗಬಹುದೆನ್ನುತ್ತಲೆ ಅರ್ಜುನನು ಶ್ರೀಕೃಷ್ಣನ ಸ್ಮರಣೆಮಾಡಿ, ಆಟವಾಡುವನಂತೆ ಬಿಲ್ಲಿಗೆ ಹೆದೆಯನ್ನೇರಿಸಿ ಪಂಚ ಬಾಣಗಳನ್ನು ತೊಡಿಸಿ ಧೃಷ್ಟದ್ಯುಮ್ನನು ಹೇಳಿದಂತೆಯೇ ಲಕ್ಷ್ಯವನ್ನು ಭೇದಿಸಿ ನೆಲಕ್ಕೆ ಕೆಡವಿದನು. ಒಡನೆಯೇ, ಸಭೆಯಲ್ಲಿ ಮಹಾ ಕೋಲಾಹಲವುಂಟಾಯಿತು. ಬ್ರಾಹ್ಮಣರು ತಂತಮ್ಮ ಉತ್ತರೀಯವನ್ನಾಡಿಸುತ್ತ ತಮ್ಮ ಉಲ್ಲಾಸವನ್ನು ತೋರಿದರು. ವಾದಕರು ಉತ್ಸಾಹದಿಂದ ತೂರ್ಯ ಧ್ವನಿಯನ್ನು ಮಾಡಿದರು. ಸ್ತುತಿ ಪಾಠಕರು ಮಧುರ ಸ್ವರದಿಂದ ಹಾಡಿದರು; ಮಣಿಮಯ ಮಂಚದ ಮೇಲೆ ಅಟ್ಟಹಾಸದಿಂದ ಕುಳಿತಿದ್ದ ರಾಜರು ಲಜ್ಜೆಯಿಂದ ಅಧೋವದನರಾಗಿ ತಮ್ಮನ್ನು ತಾವೇ ಹೀಯಾಳಿಸಿಕೊಂಡರು. ಕೃಷ್ಣೆಯು ಲಕ್ಷ್ಯ ಭೇದದಲ್ಲಿ ಅದ್ವಿತೀಯನೆನಿಸಿಕೊಂಡು ರಣ ದುರ್ಜಯನಾಗಿದ್ದ ಪಾರ್ಥನ ಸಮೀಪಕ್ಕೆ ಹೋಗಿ ಆ ರಾಜಕುಮಾರನ ಕೊರಳಿಗೆ ಕೈಯಲ್ಲಿದ್ದ ಪುಷ್ಪ ಮಾಲೆಯನ್ನು ಸಮರ್ಪಿಸಿದಳು.

ಅದನ್ನು ನೋಡಿ, ಅಲ್ಲಿ ಸೇರಿದ್ದ ಕ್ಷತ್ರಿಯ ವೀರರು, ದ್ರುಪದ ರಾಯನು ತಮ್ಮೆಲ್ಲರನ್ನೂ ತಿರಸ್ಕರಿಸಿ ಒಬ್ಬ ಬಡ ಬ್ರಾಹ್ಮಣನಿಗೆ ತನ್ನ ಮಗಳನ್ನು ಕೊಟ್ಟನೆಂದು ಕೋಪಗೊಂಡು ಅವನನ್ನು ದಂಡಿಸಬೇಕೆಂದು ಹೊರಟರು. ದ್ರುಪದನು ರಕ್ಷಿಸಿಕೊಳ್ಳಲು ಶಕ್ತನಾಗಿದ್ದರೂ, ಪಾಂಡು ಪುತ್ರರು ಅವರ ಮೇಲೆ ಕಾಳಗಕ್ಕೆ ನಿಂತರು. ಬ್ರಾಹ್ಮಣ ವೇಷಧಾರಿಯಾದ ಅರ್ಜುನನು ಕರ್ಣನನ್ನು ಓಡಿಸಿದನು; ಭೀಮನು ಶಲ್ಯನ ಸಂಗಡ ಕಾದಿ ಅವನನ್ನು ನೆಲಕ್ಕೆ ಕೆಡವಿದನು; ಧರ್ಮರಾಯನು ದುರ್ಯೋಧನನನ್ನು ಗೆದ್ದನು; ನಕುಲ ಸಹದೇವರು ದುಃಶಾಸನಾದಿಗಳನ್ನು ಸೋಲಿಸಿದರು. ತರುವಾಯ, ರಣವೀರರಾದ ಪಾಂಡವರು ದ್ರೌಪದಿಯನ್ನು ಕರೆದುಕೊಂಡು ತಾವು ಇಳಿದಿದ್ದ ಕುಂಬಾರನ ಮನೆಗೆ ಹೋದರು.

ದ್ರೌಪದಿಯು ಬ್ರಾಹ್ಮಣವೇಷವನ್ನು ಧರಿಸಿದ್ದ ಅರ್ಜುನನ ಕಂಠಕ್ಕೆ ಹಾರವನ್ನು ಹಾಕಿದುದನ್ನು ನೋಡಿ, ದ್ರುಪದರಾಯನು ತನ್ನ ಮಗಳು ಒಬ್ಬ ಬಡ ಬ್ರಾಹ್ಮಣನನ್ನು ಕೈಹಿಡಿದಳೆಂದು ಕೊರಗಿದನು. ಕಾಲ ಕ್ರಮದಲ್ಲಿ ಅವನು ಕ್ಷತ್ರಿಯ ಕುಲ ಪ್ರದೀಪನಾದ ಪಾರ್ಥನೆಂದು ತಿಳಿಯುತ್ತಲೆ ಸಂತೋಷಭರಿತನಾಗಿ ದ್ರೌಪದಿಯನ್ನು ಅತಿ ವೈಭವದಿಂದ ಪಾಂಡವರೈವರಿಗೂ ಧಾರೆಯೆರೆದುಕೊಟ್ಟನು.

ರೂಪಲಕ್ಷಣ ಸಮನ್ವಿತೆಯೂ ಸದಾಚಾರ ಸಂಪನ್ನೆಯೂ ಆದ ದ್ರೌಪದಿಯು ಅತ್ತೆಗೆ ನಮಸ್ಕಾರ ಮಾಡಿ ಕೈಜೋಡಿಸಿಕೊಂಡು ನಿಂತುಕೊಳ್ಳಲು, ಕುಂತಿಯು—"ರೋಹಿಣಿಯು ಚಂದ್ರನಿಗೂ, ದಮಯಂತಿಯು ನಳನಿಗೂ, ಲಕ್ಷ್ಮಿಯು ನಾರಾಯಣನಿಗೂ ಇರುವಂತೆ ನೀನು ನಿನ್ನ ಗಂಡಂದಿರಿಗೆ ಪತ್ನಿಯಾಗಿರು; ಸುಪುತ್ರರನ್ನು ಪಡೆ; ಭೋಗೈಶ್ವರ್ಯ ಸಂಪನ್ನೆಯಾಗಿ ಪತಿವ್ರತೆಯಾಗಿ ಅತಿಥಿಗಳನ್ನೂ ಸಾಧುಗಳನ್ನೂ ವೃದ್ಧರನ್ನೂ ಗುರುಜನರನ್ನೂ ಯಥಾ ನ್ಯಾಯವಾಗಿ ಪೂಜಿಸುತ್ತ ಶತಾಯುಷ್ಮಂತೆಯಾಗಿರು" ಎಂದು ಸೊಸೆಯನ್ನು ಹರಸಿದಳು. ವಿವಾಹವಾದನಂತರ ಪಾಂಡವರು ತಾಯಿಯ ಸಮೇತರಾಗಿ

ಕೆಲವು ಕಾಲ ದ್ರುಪದರಾಯನ ಮನೆಯಲ್ಲಿ ಸುಖದಿಂದ ವಾಸಮಾಡು ತ್ತಿದ್ದರು.

ಇತ್ತ, ಕುಂತಿಯೂ ಕುಂತೀಪುತ್ರರೂ ಅರಗಿನ ಮನೆಯಿಂದ ತಪ್ಪಿಸಿಕೊಂಡು ಹೋಗಿ ಜೀವಸಹಿತವಿರುವ ಸಂಗತಿಯೂ ಪಾಂಚಾಲ ನಗರದಲ್ಲಿ ಅರ್ಜುನನು ಕೃತಕ ಮತ್ಸ್ಯವನ್ನು ಭೇದಿಸಿ ತನ್ನ ಭ್ರಾತೃ ಗಳನ್ನು ಕೂಡಿ ದ್ರೌಪದಿಯನ್ನು ಮದುವೆಯಾದ ಸುದ್ದಿಯೂ ಹೊರ ಬಿದ್ದು, ಸ್ವಯಂವರಕ್ಕೆ ಬಂದಿದ್ದ ವೀರರೆಲ್ಲರಿಗೂ ಬೇಹುಕಾರರಿಂದ ತಿಳಿಯಬಂದಿತು. ಈ ಶುಭ ವಾರ್ತೆಯು ಊರೂರಿಗೂ ಕೇರಿ ಕೇರಿಗೂ ಹರಡಿತು.

ಆ ಶುಭ ವಾರ್ತೆಯು ಉಭಯ ಕುಲ ಪಿತಾಮಹನಾದ ವೃದ್ಧ ಭೀಷ್ಮನ ಕಿವಿಗೂ ಬಿದ್ದಿತು. ಆ ವೃದ್ಧನ ಆಹ್ಲಾದಕ್ಕೆ ಮೇರೆಯಿಲ್ಲ ದಂತಾಯಿತು. ಅಂದಿನ ವರೆಗೆ, ಅವನ ವ್ಯಥೆಗೆ ಪಾರವಿಲ್ಲದೆ ಇದ್ದಿತು; ಅವನ ಮುಖಮಂಡಲದಲ್ಲಿ ಗೆಲವಿರಲಿಲ್ಲ; ಹೃದಯದಲ್ಲಿ ಶಾಂತಿಯಿರ ಲಿಲ್ಲ; ಧೃತರಾಷ್ಟ್ರ ದುರ್ಯೋಧನಾದಿಗಳ ದುರಾಲೋಚನೆಗಳನ್ನೂ ದುಷ್ಕೃತ್ಯಗಳನ್ನೂ ಕಂಡು ಕಂಡು ಮರುಗುತ್ತಿದ್ದನು; ಅವರ ದುರ್ವರ್ತನದಿಂದ ಕುರುಕುಲಕ್ಕೆ ಬಂದ ದುರ್ಗತಿಯನ್ನು ನೆನೆ ನೆನೆದು ಮೃತಪ್ರಾಯನಾಗಿದ್ದನು; ಮೂರ್ಖರಾದ ಅವರ ರಾಜಕೀಯ ಕಾರ್ಯಗಳು ನಿಂದನೀಯವಾದುವೆಂದು ತಿಳಿದಿದ್ದರೂ, ತನ್ನ ಯತ್ನವು ನಡೆಯದೆಂದು ಉದಾಸೀನನಾಗಿ ಕಂಡೂ ಕಾಣದವನಂತಿದ್ದು ಸಮಯ ಬಂದಾಗ ಸ್ಪಷ್ಟೋಕ್ತಿಯನ್ನಾಡದೆ ಬಿಡುತ್ತಿರಲಿಲ್ಲ. ದುರ್ಯೋಧನನು ಅವನ ಬುದ್ಧಿವಾದವನ್ನು ಕೇಳುತ್ತಿರಲಿಲ್ಲ. ಆದರೂ ಬೇಸರದೆ, ಭೀಷ್ಮನು ಅವನ ಚಿತ್ತವನ್ನು ಶುದ್ಧಿಮಾಡುವುದರಲ್ಲಿದ್ದನೇ ಹೊರತು ಅವನನ್ನು ಪದಭ್ರಷ್ಟನನ್ನು ಮಾಡಿ ಕೆಡಿಸುವ ಆಲೋಚನೆ ಮಾಡಲಿಲ್ಲ. ಅವನು ತನಗೆ ಅನ್ನದಾತನು, ತನ್ನನ್ನು ಪಾಲಿಸುತ್ತಿರುವ ಪ್ರಭು, ಅವನಿಗೆ ವಿರೋಧವಾಗಿ ನಡೆಯುವುದು ತನಗೆ ಧರ್ಮವಲ್ಲ ಎಂದೆಣಿಸು ತ್ತಿದ್ದನು; ಪಾಂಡವರ ವಿಷಯದಲ್ಲಿ ಅವನು ಮಾಡಿದ ಅನ್ಯಾಯ ಗಳನ್ನೂ, ಅವರನ್ನು ಪಡಿಸಿದ ಪಾಡನ್ನೂ ನೋಡಿ ಮಮಾಹತ

ನಾದನು. ಆದರೂ, ಲೋಕೋತ್ತರವಾದ ಅವನ ಚರಿತೆಯು ಸರ್ವಾವಸ್ಥೆ
ಯಲ್ಲಿಯೂ ನಿರ್ದುಷ್ಟವಾಗಿದ್ದಿತು, ಪರಮ ಪವಿತ್ರವಾಗಿದ್ದಿತು. ಅವನ
ಒಂದೊಂದು ಕಾರ್ಯವೂ ಅವನ ಮಹತ್ತರವಾದ ಪರಾರ್ಥ ಪರತೆಗೂ
ನಿಶ್ಚಲವಾದ ಕರ್ತವ್ಯಬುದ್ಧಿಗೂ ನಿದರ್ಶನವಾಗಿದ್ದಿತು. ಆ ವೃದ್ಧ
ವೀರನು ಪಾಂಡವರು ಸುರಕ್ಷಿತವಾಗಿರುವುದೇ ಅಲ್ಲದೆ, ಅರ್ಜುನನ ಬಲ
ವೀರ್ಯ ಪ್ರತಾಪಗಳಿಂದ ಅವರಿಗೆ ಪಾಂಚಾಲಿಯ ಪಾಣಿಗ್ರಹಣವೂ
ಆಯಿತೆಂಬುದನ್ನು ಕೇಳಿ ಆನಂದಾಶ್ರುಪೂರ್ಣನಾಗಿ ಸರ್ವಸಿದ್ಧಿ
ಪ್ರದಾಯಕನಾದ ಸ್ವಾಮಿಯ ಸನ್ನಿಧಿಯಲ್ಲಿ ಮಾತೃ ಸಮೇತರಾದ
ಪಾಂಡವರಿಗೆ ಕುಶಲವಾಗಲೆಂದು ಶುದ್ಧಾಂತಃಕರಣದಿಂದ ಪ್ರಾರ್ಥಿಸು
ತ್ತಿದ್ದನು.

ಪಾಂಡವರ ಅಭ್ಯುದಯವನ್ನು ಕೇಳಿ ಭೀಷ್ಮ ದ್ರೋಣ ವಿದುರಾದಿ
ಗಳು ಎಷ್ಟು ಸಂತೋಷಪಟ್ಟರೋ ಅಷ್ಟಕ್ಕೆ ಇಮ್ಮಡಿಯಾಗಿ
ಧೃತರಾಷ್ಟ್ರ ದುರ್ಯೋಧನಾದಿಗಳು ದುಃಖಪಟ್ಟರು. ಯಾರು ಬೆಂದು
ಬೂದಿಯಾದರೆಂದು ಆ ದುಷ್ಟರು ಸಂತೋಷಪಟ್ಟರೋ ಅವರು ಇನ್ನೂ
ಬದುಕಿರುವರು; ಸ್ವಯಂವರ ಸಭೆಯಲ್ಲಿ ಲಕ್ಷ್ಯಭೇದವನ್ನು ಮಾಡಿ
ಪಾಂಚಾಲಿಯನ್ನು ಪಡೆದ ಆ ಬಡ ಬ್ರಾಹ್ಮಣ ವಟುವೇ ಅರ್ಜುನನು;
ಯಾವ ಬ್ರಾಹ್ಮಣ ವೇಷಧಾರಿಗಳ ವಿಕ್ರಾಂತಿಗೆ ಹೆದರಿ ಕರ್ಣ ಶಲ್ಯ
ದುರ್ಯೋಧನ ದುಃಶಾಸನಾದಿಗಳು ಪಲಾಯನ ಮಾಡಿದರೋ ಆ
ಪ್ರಚಂಡರೇ ಪಾರ್ಥ ಭೀಮಸೇನ ಯುಧಿಷ್ಠಿರ ನಕುಲ ಸಹದೇವರು—
ಎಂದು ಕೇಳಿ ಅವರು ಬೆಚ್ಚಿ ಬೆದರಿ ಸ್ತಂಭೀಭೂತರಾದರು. ಇತರ
ರಾಷ್ಟ್ರಾಧಿಪತಿಗಳೂ ಕೂಡ, ಧೃತರಾಷ್ಟ್ರ ದುರ್ಯೋಧನಾದಿಗಳ
ಕುಹಕೋಪಾಯದಿಂದ ಪಾಂಡವರು ತಾಯಿಯ ಸಮೇತರಾಗಿ
ವಾರಣಾವತದಲ್ಲಿ ಮಡಿದರೆಂದು ಕೇಳಿ ಎಷ್ಟು ಶೋಕಪಡುತ್ತಿದ್ದರೋ,
ಈಗ ಆ ಧಾರ್ಮಿಕರೂ ವೃತ್ತ ಸಂಪನ್ನರೂ ಆದ ಯುಧಿಷ್ಠಿರಾದಿಗಳು
ಸತ್ತು ಹುಟ್ಟಿದಂತಾಯಿತೆಂದು ಅಷ್ಟು ಸಂತೋಷಪಟ್ಟು, ಧೃತ
ರಾಷ್ಟ್ರಾದಿಗಳನ್ನು ಧಿಕ್ಕರಿಸಿದರು. ನಿಸ್ಪೃಹನಾಗಿದ್ದರೂ, ಅವರ ಸಹ
ವಾಸದಲ್ಲಿದ್ದುದರಿಂದ, ಭೀಷ್ಮನೂ ಆ ಧಿಕ್ಕಾರಕ್ಕೆ ಗುರಿಯಾದನು.

ಈ ಸ್ಥಿತಿಯಲ್ಲಿ ದುರ್ಯೋಧನಾದಿಗಳು ಮುಂದೆ ಮಾಡತಕ್ಕುದೇ ನೆಂದು ಶಕುನಿ ಶಲ್ಯ ಮೊದಲಾದವರನ್ನು ಕೂಡಿ ಆಲೋಚನೆ ಮಾಡ ತೊಡಗಿದರು. ಶಕುನಿಯು—“ಪಾಂಡವರು ಹೀನ ಸ್ಥಿತಿಯಲ್ಲಿರುವರು ; ದ್ರುಪದರಾಯನು ಕೂಡ ಅಲ್ಪ ಬಲ ವೀರ್ಯವುಳ್ಳವನು. ಪಾಂಡವ ರನ್ನು ನಾಶಮಾಡಿಯೇ ತೀರಬೇಕು ; ಅದಕ್ಕೆ ಇದೇ ಸಮಯ ; ಅವರು ಎಷ್ಟರವರೆಂದು ಬಿಟ್ಟರೆ ಮುಂದೆ ಅವರನ್ನು ಸಂಹರಿಸುವುದು ಕಷ್ಟವಾಗುವುದು” ಎಂದು ನುಡಿದನು.

ದುರ್ಮತಿಯಾದ ಶಕುನಿಯ ಮಾತನ್ನು ಕೇಳಿ ಸೋಮದತ್ತನ ಮಗನಾದ ಭೂರಿಶ್ರವನು—“ನಮಗಿರುವ ಸಾಹಾಯ್ಯ ಸಂಪತ್ತಿ ಯನ್ನೂ ನಮ್ಮ ಶತ್ರುಗಳ ಸಾಹಾಯ್ಯ ಸಂಪತ್ತಿಯನ್ನೂ ವಿಚಾರಮಾಡಿ ಕಾರ್ಯ ಮಾಡಬೇಕು. ಈಗ ಪಾಂಡವರಿಗೆ ಮಿತ್ರಬಲವಿದೆ, ಕೋಶ ಬಲವಿದೆ, ಸ್ವಯಂ ಬಲಿಷ್ಠರು, ಪರಾಕ್ರಮಶಾಲಿಗಳು. ಅರ್ಜುನನು ಸರ್ವ ಜನ ಪ್ರಿಯನಾಗಿದ್ದಾನೆ ; ಅವನು ಅಯುಕ್ತವನ್ನಾಗಲಿ, ಅನೃತ ವನ್ನಾಗಲಿ, ಅಪ್ರಿಯವನ್ನಾಗಲಿ ಆಡುವನಲ್ಲ. ಇಂತಹ ಗುಣ ಸಂಪನ್ನರೂ ರಾಜಲಕ್ಷಣ ಸಂಪನ್ನರೂ ಆದವರನ್ನು ನಿರ್ಮೂಲ ಮಾಡ ಬಲ್ಲವರನ್ನು ನಾನು ಕಾಣೆನು. ಅವರ ಶಕ್ತಿ ಪ್ರಭಾವವು ವಿಪುಲವಾದುದು. ಯುಧಿಷ್ಠಿರನು ಸಾಮ ದಾನ ಭೇದ ದಂಡೋಪಾಯಗಳನ್ನು ಬಲ್ಲವನು. ದ್ರುಪದನು ಸಕಲ ಸಾಹಿತ್ಯವನ್ನುಳ್ಳವನು. ಅವನ ಮೇಲೆ ನಮ್ಮ ಕೈ ನಡೆಯದು. ಆದುದರಿಂದ, ಪಾಂಡವರ ಸಂಗಡ ಸಂಧಿಮಾಡಿ ಕೊಳ್ಳುವುದು ಸುಕರವಾಗಿಯೂ ಕ್ಷೇಮಕರವಾಗಿಯೂ ನನಗೆ ತೋರುವುದು” ಎಂದನು.

ಕರ್ಣನು ಭೂರಿಶ್ರವನ ಮಾತನ್ನು ಕೇಳಿ—“ಭೂರಿಶ್ರವನು ಕಾಲಜ್ಞನೇ ಅಹುದು ; ಅವನು ಹೇಳಿದುದೆಲ್ಲವೂ ನೀತಿಪೂರ್ವಕ ವಾಗಿಯೂ ಅರ್ಥವತ್ತಾಗಿಯೂ ಇದೆ. ಅವನ ಮಾತನ್ನು ಕುರಿತು ನಾನು ಅಸೂಯೆ ಪಡೆನು. ಆದರೂ ನಾನು ಹೇಳುವುದನ್ನು ಕೇಳಿರಿ. ಮನುಷ್ಯನು ಹೀಗೋ ಹಾಗೋ ಎಂದು ದ್ವೈಧೀಭಾವದಿಂದ ಯಾವ ಕಾರ್ಯಕ್ಕೂ ಹೋಗಬಾರದು. ಮನಸ್ಸು ಇಬ್ಬಗೆಯಾಗಿದ್ದಲ್ಲಿ

ಕಾರ್ಯಸಿದ್ಧಿಯಾಗದು. ಈಗ ಯುದ್ಧಕ್ಕೆ ಹೋಗುವುದೇ ಕರ್ತವ್ಯವು'' ಎಂದು ಹೇಳಿದನು.

ಅವನ ಮಾತಿನಂತೆಯೇ ದುರ್ಯೋಧನಾದಿಗಳು ಪಾಂಚಾಲ ನಗರಕ್ಕೆ ಹೋಗಿ ಯುದ್ಧದಲ್ಲಿ ಪಾಂಚಾಲ ಪಾಂಡವರಿಗೆ ಸೋತು, ಬಂದ ದಾರಿಯನ್ನು ಹಿಡಿದರು.

ಇತ್ತ, ಪಾಂಡವರು ತಾಯಿಯೊಡನೆ ಅರಗಿನ ಮನೆಯಿಂದ ಸುರಕ್ಷಿತವಾಗಿ ಹೊರಟುಹೋದುದು ಮೊದಲ್ಗೊಂಡು ನಡೆದ ಸಂಗತಿಗಳೆಲ್ಲವನ್ನೂ ವಿದುರನು ಧೃತರಾಷ್ಟ್ರನಿಗೆ ತಿಳಿಸುತ್ತಲೆ, ಅವನು— ''ನಮ್ಮ ಪುಣ್ಯವೇ ಸರಿ. ಪಾಂಡವರು ಬದುಕಿದ್ದಾರೆಯೆ! ಅವರಿಗೆ ದ್ರುಪದರಾಯನ ಸಂಬಂಧವೂ ಆಯಿತೆ! ಅವನ ಮೂಲಕವಾಗಿ ಅನೇಕ ಬಲಶಾಲಿಗಳು ಅವರಿಗೆ ಮಿತ್ರರಾಗಿರಬಹುದು. ಸಂಪನ್ನರಾಗಲಿ, ವಿಪನ್ನರಾಗಲಿ ಯಾವ ರಾಜರು ತಾನೆ ದ್ರುಪದರಾಯನನ್ನೂ ಅವನ ಬಳಗವನ್ನೂ ಮಿತ್ರರನ್ನಾಗಿ ಬಯಸರು! ಇದು ನಮ್ಮ ಪುಣ್ಯೋದಯ'' ಎಂದು ತನ್ನ ಈರ್ಷ್ಯೆಯನ್ನು ಮರೆಮಾಚಿ ಸಂತೋಷಪಟ್ಟವನಂತೆ ಹೊರಗೆ ಕಾಣಿಸಿಕೊಂಡನು.

ಆಗ ವಿದುರನು—''ಮಹಾರಾಜನೇ! ಈ ಬುದ್ಧಿಯು ನಿನಗೆ ನೂರು ವರ್ಷಗಳು ಸ್ಥಿರವಾಗಿರಲಿ'' ಎಂದು ಹೇಳಿ ಮನೆಗೆ ಹೋದನು.

ವಿದುರನು ಹೊರಟುಹೋದುದನ್ನು ಕಂಡು ದುರ್ಯೋಧನ ಕರ್ಣರು ಧೃತರಾಷ್ಟ್ರನ ಸಮೀಪಕ್ಕೆ ಹೋಗಿ—''ಮಹಾರಾಜರೇ! ವಿದುರನ ಇದಿರಿಗೆ ನಾವು ಮಾತನಾಡಲಿಲ್ಲ; ಈಗ ನೀವೊಬ್ಬರೇ ಇರುವುದರಿಂದ ಮಾತನಾಡ ಬಂದೆವು. ನೀವು ಈಗ ಏನ ಮಾಡಬೇಕೆಂದಿದ್ದೀರಿ? ನಿಮ್ಮ ಶತ್ರುಗಳ ಏಳಿಗೆಯೇ ನಿಮ್ಮೇಳಿಗೆಯೆಂದು ಭಾವಿಸುತ್ತೀರಿ. ಯಾವುದು ಕರ್ತವ್ಯವೋ ಅದನ್ನು ಯೋಚಿಸದೆ ಇದ್ದೀರಿ. ಪಾಂಡವರ ಬಲವನ್ನು ಮುರಿಯುವುದೇ ನಮ್ಮ ಕರ್ತವ್ಯವು. ಅವರು ನಮ್ಮನ್ನೂ ನಮ್ಮ ಬಾಂಧವರನ್ನೂ ನಮ್ಮ ಬಲವನ್ನೂ ನಾಶಮಾಡು

ವುದಕ್ಕೆ ಮುಂಚೆಯೇ ನಾವು ಏನು ಮಾಡಬೇಕೋ ಅದನ್ನು ಆಲೋಚಿಸಬೇಕು'' ಎಂದರು.

ಅದಕ್ಕೆ ಧೃತರಾಷ್ಟ್ರನು—''ದುರ್ಯೋಧನ! ಕರ್ಣ! ನಿಮಗೆ ಯಾವುದು ಇಷ್ಟವೋ ನನಗೂ ಅದೇ ಇಷ್ಟವು. ನನ್ನ ಮನೋಗತವನ್ನು ವಿದುರನು ಊಹಿಸದಿರಲೆಂದು ನಾನು ಅವನಿದಿರಿಗೆ ಪಾಂಡವರ ಗುಣವನ್ನು ಹೊಗಳಿದೆನು'' ಎಂದನು.

ಅದಕ್ಕೆ ದುರ್ಯೋಧನನು—''ಅಯ್ಯಾ! ನಾನು ಹೇಳುವುದೇನೆಂದರೆ—ಕುಂತಿಯ ಮಕ್ಕಳಿಗೂ ಮಾದ್ರಿಯ ಮಕ್ಕಳಿಗೂ ಆಗದಂತೆ ಮಾಡುವುದು; ದ್ರುಪದರಾಯನ ಅಮಾತ್ಯರಿಗೆ ಲಂಚವನ್ನು ಕೊಟ್ಟು ವಶಮಾಡಿಕೊಂಡು ದ್ರುಪದರಾಯನಿಗೂ ಯುಧಿಷ್ಠಿರನಿಗೂ ವಿರೋಧವನ್ನು ತಂದುಹಾಕಿ ಯುಧಿಷ್ಠಿರನನ್ನು ಅವನ ಮನೆಯಿಂದ ಉಚ್ಚಾಟನೆ ಮಾಡಿಸುವುದು; ದ್ರೌಪದಿಯನ್ನು ಗಂಡಂದಿರ ಮೇಲೆ ಎತ್ತಿಡುವುದು; ಭೀಮನನ್ನು ಕೊಂದು ಅರ್ಜುನನ ಬೆಂಬಲವನ್ನು ಮುರಿಯುವುದು—ಇತ್ಯಾದಿ ಉಪಾಯಗಳಿಂದ ಅವರನ್ನು ನಿಗ್ರಹಿಸುವುದು ಶಕ್ಯವೆಂದು ನನ್ನ ಬುದ್ಧಿಗೆ ತೋರುತ್ತದೆ'' ಎಂದನು.

ದುರ್ಯೋಧನನ ಮಾತನ್ನು ಕೇಳಿ ಕರ್ಣನು ಇಂತೆಂದನು:— ''ದುರ್ಯೋಧನ! ನಿನ್ನ ಯೋಚನೆಯು ಸರಿಯೆಂದು ನಾನೆಣಿಸೆನು. ಅಜಾತಪಕ್ಷರಾಗಿ ಬಾಲರಾಗಿ ನಿನ್ನ ಸಮೀಪದಲ್ಲಿರುವಾಗಲೇ ಉಪಾಯಗಳಿಂದ ಆ ವೀರರನ್ನು ನೀನು ನಿಗ್ರಹಿಸಲಾರದೆ ಹೋದೆ. ಈಗ ಅವರು ರೆಕ್ಕೆಯುಳ್ಳವರು, ಹರೆಯದವರು, ವಿದೇಶದಲ್ಲಿರುವರು, ಸಾಹಿತ್ಯಸಂಪನ್ನರು, ಈಗ ಅವರು ಉಪಾಯಕ್ಕೆ ಸಾಧ್ಯರೆ? ಮಹಾತ್ಮನಾದ ಭರತನು ರಾಜ್ಯವನ್ನು ವಿಕ್ರಮದಿಂದ ಸಂಪಾದಿಸಿದನು; ದೇವೇಂದ್ರನು ತ್ರಿಲೋಕಾಧಿಪತ್ಯವನ್ನು ಸಂಪಾದಿಸಿದುದೂ ವಿಕ್ರಮದಿಂದಲೇ; ವಿಕ್ರಮವೇ ಶೂರರಿಗೆ ಸ್ವಧರ್ಮವು. ಆದುದರಿಂದಲೇ ದ್ರುಪದನನ್ನು ಗೆದ್ದು ಪಾಂಡವರನ್ನು ಸೆಳೆದುಕೊಂಡು ಬಾ. ಅವರನ್ನು ನಿಗ್ರಹಿಸುವುದಕ್ಕೆ, ಸಾಮವೂ ಅಲ್ಲ, ದಾನವೂ ಅಲ್ಲ, ಭೇದವೂ ಅಲ್ಲ, ದಂಡವೊಂದೇ ಉಪಾಯ.''

ಧೃತರಾಷ್ಟ್ರನು ಕರ್ಣನ ಮಾತನ್ನು ಕೇಳಿ—"ಕರ್ಣ! ನೀನು ವಿಕ್ರಮ ಸಂಪನ್ನನು, ನಿನ್ನ ಮಾತು ನಿನಗೆ ಅನುಗುಣವಾಗಿದೆ; ನಿನ್ನ ಆಲೋಚನೆಯು ನಮ್ಮ ಸುಖೋದಯಕ್ಕೆ ತಕ್ಕ ಉಪಾಯವಾಗಿರುವುದು. ಆದರೂ, ಭೀಷ್ಮ ದ್ರೋಣ ವಿದುರರನ್ನೂ ಕರೆದು ಕೇಳೋಣ" ಎಂದು ನುಡಿದನು.

ಧೃತರಾಷ್ಟ್ರನು ಎಷ್ಟೇ ಮಗನ ಪಕ್ಷಪಾತಿಯಾದರೂ ವೃದ್ಧ ಭೀಷ್ಮನ ಸಂಗಡ ಆಲೋಚನೆ ಮಾಡದೆ ದುಡುಕಿ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಕರೆಯಿಸಿ ಕೇಳಿದುದಕ್ಕೆ ಆ ಸಮದರ್ಶಿಯು ಶಾಂತನಾಗಿ ಗಂಭೀರ ಸ್ವರದಿಂದ ಇಂತೆಂದನು:—"ವತ್ಸ! ನನ್ನ ದೃಷ್ಟಿಯಲ್ಲಿ ನೀನೂ ಪಾಂಡುವೂ ಒಂದೇ; ನಾನು ಸಮಾನ ಪ್ರೀತಿಯಿಂದ ಇಬ್ಬರನ್ನೂ ಸಲಹಿದೆನು; ಸಮಾನ ಪ್ರಯತ್ನದಿಂದ ಇಬ್ಬರಿಗೂ ವಿದ್ಯಾ ಬುದ್ಧಿಯನ್ನು ಕಲಿಸಿದೆನು; ನಿನ್ನ ಮಕ್ಕಳು ಹೇಗೋ ಹಾಗೆ ಪಾಂಡುವಿನ ಮಕ್ಕಳೂ ನನಗೆ ಪ್ರೀತಿಪಾತ್ರರಾಗಿರುವರು; ಪಾಂಡವರನ್ನು ಪ್ರೀತಿಸಿ ರಕ್ಷಿಸುವುದು ನನ್ನ ಕರ್ತವ್ಯವು ಹೇಗೋ ಹಾಗೆ ನಿನ್ನ ಕರ್ತವ್ಯವೂ ಆಗಿರುವುದು. ಪಾಂಡವ ದುರ್ಯೋಧನಾದಿಗಳಾದ ಕೌರವರೆಲ್ಲರೂ ನನ್ನವರು. ಹೀಗಿರುವಲ್ಲಿ, ಪಾಂಡವರ ಸಂಗಡ ಕದನಕ್ಕೆ ಹೋಗುವುದೆಂದರೆ ನನಗೆ ಹೇಗೆ ತಾನೆ ರುಚಿಸುವುದು? ನಮ್ಮ ನಮ್ಮೊಳಗೇ ಕಲಹವು ಸರ್ವಾತ್ಮನಾ ಸರಿಯಲ್ಲ. ನೀವು ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಟ್ಟು ಅನ್ಯೋನ್ಯ ಭಾವದಿಂದಿರುವುದೇ ಉಚಿತವು."

ತರುವಾಯ, ದುರ್ಯೋಧನನ ಕಡೆಗೆ ತಿರುಗಿ ಭೀಷ್ಮನಿಂತೆಂದನು: —"ವತ್ಸ! ಈ ಅಖಂಡ ರಾಜ್ಯವು ನಮ್ಮ ಹಿರಿಯರದೆಂದು ನೀನು ಹೇಗೆ ಭಾವಿಸುತ್ತೀಯೋ ಹಾಗೆಯೇ ಪಾಂಡವರೂ ತಮ್ಮ ಹಿರಿಯರದೆಂದು ಎಣಿಸುವರು. ಯಶಸ್ವಿಗಳಾದ ಪಾಂಡವರಿಗೆ ರಾಜ್ಯವು ಸಲ್ಲದ ಪಕ್ಷದಲ್ಲಿ ನಿಮಗೆ ಸಲ್ಲುವುದು ಯಾವ ನ್ಯಾಯ? ನಿನ್ನ ತರುವಾಯ ಭರತ ವಂಶದಲ್ಲಿ ಹುಟ್ಟುವ ರಾಜಕುಮಾರರಿಗೆ ತಾನೆ ರಾಜ್ಯಪ್ರಾಪ್ತಿಯಾಗುವುದು ಹೇಗೆ? ಅಧರ್ಮದಿಂದ ನೀವು ರಾಜ್ಯವನ್ನು ಆಕ್ರಮಿಸಿದಿರಿ. ಅದಕ್ಕೆ

ಪೂರ್ವವೇ ರಾಜ್ಯವು ನ್ಯಾಯವಾಗಿ ಅವರದು. ನನ್ನ ಮತವೇನೆಂದು ಕೇಳುವೆಯೋ? ಹೇಳುವೆನು ಕೇಳು. ಜ್ಯೇಷ್ಠ ಭ್ರಾತನಾದ ಯುಧಿಷ್ಠಿರನಿಗೆ ಪ್ರೀತಿ ಪೂರ್ವಕವಾಗಿ ಅರ್ಧ ರಾಜ್ಯವನ್ನು ಕೊಡು. ವಿವಾದದಿಂದ ಪ್ರಯೋಜನವಿಲ್ಲ. ನಮ್ಮ ನಮ್ಮೊಳಗೆ ಕಲಹವಾಡುವುದು ಅನರ್ಥಕ್ಕೆ ಮೂಲವು. ಅರ್ಧ ರಾಜ್ಯವನ್ನು ಅವರಿಗೆ ಕೊಟ್ಟಲ್ಲಿ ಇಬ್ಬರಿಗೂ ಮಂಗಳವುಂಟು. ಕೊಡದ ಪಕ್ಷದಲ್ಲಿ ಯಾರಿಗೂ ಕ್ಷೇಮವಿಲ್ಲ; ಅಷ್ಟೇ ಅಲ್ಲ; ನಿಮಗೆ ಅಪಕೀರ್ತಿಯೂ ಬರುವುದು. ಅದುಕಾರಣ, ವತ್ಸ! ಕೀರ್ತಿಯನ್ನುಳಿಸಿಕೊಳ್ಳುವ ಪ್ರಯತ್ನ ಮಾಡು. ಲೋಕದಲ್ಲಿ ಮನುಷ್ಯರಿಗೆ ಕೀರ್ತಿಯೇ ಪರಮ ಧನವು. ಕೀರ್ತಿಹೀನರ ಬಾಳು ಹೇಯವಾದುದು. ಕೀರ್ತಿವಂತನು ಸತ್ತರೂ ಈ ಲೋಕದಲ್ಲಿ ಯಶಃಕಾಯನಾಗಿರುವನು; ಕೀರ್ತಿಹೀನನು ಬದುಕಿದ್ದರೂ ಸತ್ತಂತೆಯೇ. ನೀನು ಕೀರ್ತಿಯನ್ನುಳಿಸಿಕೊ, ಪೂರ್ವಿಕರು ಅವಲಂಬಿಸಿದ್ದ ಸನ್ಮಾರ್ಗವನ್ನು ಹಿಡಿದು ನಡೆ. ಪಾಂಡವರೂ ಅವರ ತಾಯಿಯೂ ಬೆಂದುಹೋದರೆಂದು ಕೇಳಿದಂದಿನಿಂದ ನಾನು ಯಾರಿಗೂ ಮೋರೆಯನ್ನು ತೋರಿಸಲಾರದೆ ದುಸ್ಸಹವಾದ ಮನೋವ್ಯಥೆಯಿಂದ ಜೀವನ್ಮೃತನಾಗಿದ್ದೆನು. ನಮ್ಮ ಪುಣ್ಯಕ್ಕೆ ತಾಯಿಯ ಸಮೇತರಾಗಿ ಪಾಂಡವರು ಜೀವಸಹಿತರಾಗಿದ್ದಾರೆ. ಈ ಕ್ಷಣವೇ ಅವರನ್ನು ಕರೆಯ ಕಳುಹಿಸಿ ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟು ನಿನ್ನ ಮೇಲಿರುವ ಕಳಂಕವನ್ನು ಹೋಗಲಾಡಿಸಿಕೊ. ಪಾಂಡವರು ಏಕ ಹೃದಯರಾಗಿ ಎಲ್ಲರೂ ಒಂದಾಗಿರುವರು; ಇದರ ಮೇಲೆ ಧರ್ಮನಿರತರು. ನೀನು ಧರ್ಮವನ್ನು ಸಲಹುವುದು ನಿನ್ನ ಕರ್ತವ್ಯವೆಂದೊಪ್ಪುವನಾದರೆ, ನನ್ನಿಷ್ಟದಂತೆ ನೀನು ನಡೆಯುವನಾದರೆ, ಕಡೆಯ ಪಕ್ಷ ನಿನ್ನ ಕ್ಷೇಮವನ್ನು ನೀನು ಬಯಸುವನಾದರೆ, ಈ ಕ್ಷಣವೇ ಪಾಂಡವರಿಗೆ ಅರ್ಧ ರಾಜ್ಯವನ್ನೊಪ್ಪಿಸು.''

ಈ ತೆರದಲ್ಲಿ ದುರ್ಯೋಧನನಿಗೆ ಬುದ್ಧಿ ಹೇಳಿ ಭೀಷ್ಮನು ತೂಷ್ಣೀಭಾವವನ್ನು ಅವಲಂಬಿಸಿದನು. ಅವನ ಧರ್ಮಸಮ್ಮತವಾದ ಉಪದೇಶವು ಫಲೋನ್ಮುಖವಾಯಿತು. ದ್ರೋಣಾಚಾರ್ಯನೂ ಧರ್ಮ

ವತ್ಸಲನಾದ ವಿದುರನೂ ಅವನ ವಾಕ್ಯವನ್ನು ಅನುಮೋದಿಸಿದರು. ಕರ್ಣನೊಬ್ಬನು ಇದಕ್ಕಾಗಿ ಅವರೆಲ್ಲರನ್ನೂ ನಿಂದಿಸಿದನು. ಆದರೆ, ಗಂಭೀರನಾದ ಭೀಷ್ಮನಾಗಲಿ, ವೀರ್ಯವಂತನಾದ ದ್ರೋಣಾಚಾರ್ಯನಾಗಲಿ, ಧರ್ಮವತ್ಸಲನಾದ ವಿದುರನಾಗಲಿ ಅವನ ನಿಂದೆಗೆ ಹೆದರಿ ನ್ಯಾಯ ಮಾರ್ಗವನ್ನು ಬಿಟ್ಟು ಸರಿಯಲಿಲ್ಲ; ಅವರು ಕರ್ಣನನ್ನು ಲಕ್ಷ್ಯೆಯೇ ಮಾಡಲಿಲ್ಲ.

ಧೃತರಾಷ್ಟ್ರನು ದ್ರೋಣಾಚಾರ್ಯನ ಅಭಿಪ್ರಾಯವನ್ನು ಕೇಳಿದುದಕ್ಕೆ ಆಚಾರ್ಯನು—"ಮಹಾರಾಜನೇ! ಮಂತ್ರಿ ಕಾರ್ಯದಲ್ಲಿರುವವರು ಹೇಳತಕ್ಕ ಆಲೋಚನೆಯು ಧರ್ಮಸಮ್ಮತವಾಗಿಯೂ ಅರಸರಿಗೆ ಸಂಪದವನ್ನೂ ಕೀರ್ತಿಯನ್ನೂ ತರತಕ್ಕುದಾಗಿಯೂ ಇರಬೇಕು. ಭೀಷ್ಮನ ಆಲೋಚನೆಯು ಆ ತೆರವಾಗಿರುವುದು. ಮಹಾತ್ಮ ಭೀಷ್ಮನ ಮತವೇ ನನ್ನ ಮತವು. ಕುಂತಿಯ ಮಕ್ಕಳಿಗೆ ಅರ್ಧ ರಾಜ್ಯವನ್ನು ಕೊಡುವುದೇ ಸನಾತನ ಧರ್ಮವು" ಎಂದನು.

ಅದನ್ನು ಕೇಳಿ ಕರ್ಣನು—"ನಾವು ಯಾರನ್ನು ಆಪ್ತರೆಂದು ಭಾವಿಸಿಕೊಂಡು ಇದ್ದೇವೊ ಅವರು ನಮ್ಮ ಶತ್ರುಗಳ ಕಡೆಯೇ ವಾದಿಸುತ್ತಿರುವರು. ನಿಮ್ಮಲ್ಲಿರುವ ಮಂತ್ರಿಗಳಲ್ಲಿ ಯಾರು ಸಾಧುಗಳು ಯಾರು ಸಾಧುಗಳಲ್ಲ, ಯಾರು ದುಷ್ಟರು ಯಾರು ದುಷ್ಟರಲ್ಲ ಎಂಬುದನ್ನು ವಿಚಾರ ಪೂರ್ವಕವಾಗಿ ತಿಳಿದುಕೊಳ್ಳಿರಿ" ಎಂದು ಧೃತರಾಷ್ಟ್ರನಿಗೆ ಹೇಳಿದನು.

ಅದಕ್ಕೆ ದ್ರೋಣಾಚಾರ್ಯನು—"ಕರ್ಣ! ನೀನು ದುಷ್ಟನು; ಪಾಂಡವರಲ್ಲಿ ಇಲ್ಲದ ದೋಷಗಳನ್ನು ಆರೋಪಿಸುತ್ತಿದ್ದೀಯೆ. ನಾನೇನೋ ಕುಲ ವೃದ್ಧಿಯನ್ನು ಕೋರಿ ಯಾವುದು ಪರಮ ಹಿತವೋ ಅದನ್ನು ಹೇಳಿದೆನು; ನೀನು ಅದರಲ್ಲಿ ದೋಷವನ್ನು ಕಂಡ ಪಕ್ಷಕ್ಕೆ ಯಾವುದು ಹಿತವೋ ನೀನೇ ಹೇಳು; ಪರಂತು, ನಾನು ಹೇಳಿದಂತೆ ಮಾಡದೆ ಹೋದರೆ ಕೌರವರು ಶೀಘ್ರವಾಗಿಯೇ ಕೆಡುವರು. ಇದು ನಿಶ್ಚಯವೆಂದು ತಿಳಿ" ಎಂದನು.

ತರುವಾಯ ವಿದುರನು—"ರಾಜನೇ! ನಾವು ನಿನ್ನ ಬಂಧುಗಳು; ನಿನಗೆ ಯಾವುದು ಶ್ರೇಯಸ್ಕರವೋ ಅದನ್ನೇ ಹೇಳುತ್ತೇವೆ; ಸಂಶಯ ಪಡಬೇಡ. ಭೀಷ್ಮ ದ್ರೋಣರು ನಿನಗೆ ಹಿತವಾದುದನ್ನೇ ಹೇಳಿದರು. ಅವರು ವಯಸ್ಸಿನಲ್ಲಿಯೂ ಜ್ಞಾನದಲ್ಲಿಯೂ ವೃದ್ಧರು, ಶಾಸ್ತ್ರವನ್ನು ಬಲ್ಲವರು; ನಿಮಗೂ ಪಾಂಡವರಿಗೂ ಸಾಮಾನ್ಯರಾದವರೇ ಹೊರತು ಪಕ್ಷಪಾತವನ್ನು ಮಾಡುವರಲ್ಲ. ನಿನ್ನ ಮಂತ್ರಿಗಳೊಳಗೆ ಯಾರು ಪಾಂಡವರಿಗೆ ಅಹಿತವನ್ನು ಕೋರುವರೋ ಅವರು ನಿನ್ನ ಹಿತವನ್ನು ಕೋರುವರಲ್ಲ. ನಿನಗೆ ದುರ್ಯೋಧನಾದಿಗಳಂತೆಯೇ ಪಾಂಡವರೂ ಅಲ್ಲವೆ? ಭೀಷ್ಮ ದ್ರೋಣರು ನಿನಗೆ ಆಪ್ತರು, ನಿನಗೆಂದಿಗೂ ಕೇಡನ್ನು ಮಾಡುವರಲ್ಲ. ಕರ್ಣ ಶಕುನಿ ಪ್ರಭೃತಿಗಳು ಧರ್ಮಿಷ್ಠರಲ್ಲ, ಪ್ರಾಜ್ಞರಲ್ಲ; ಅವರ ಬಾಲ ಭಾಷೆಯನ್ನು ನೀನು ಕೇಳಬೇಡ. ಅವರು ಹೇಳಿದಂತೆ ನಡೆದರೆ ಮಹಾನರ್ಥವುಂಟಾಗುವುದು. ಶೂರಾಗ್ರೇಸರರೂ ಸತ್ಯವಂತರೂ ಸಾಹಾಯ್ಯ ಸಂಪನ್ನರೂ ಆದ ಪಾಂಡವರನ್ನು ಯುದ್ಧದಲ್ಲಿ ಜಯಿಸುವುದು ಸಾಧ್ಯವಲ್ಲ. ನಾಮದಿಂದಾಗುವ ಕಾರ್ಯಕ್ಕೆ ಸಮರಕ್ಕೆ ಹೋಗುವುದು ದೈವ ಶಾಪದಿಂದಲ್ಲವೆ! ಭೀಷ್ಮನು ಹೇಳಿದಂತೆ ಯುದ್ಧದ ಚಿಂತೆಯನ್ನು ಬಿಟ್ಟು ಸಂಧಿಮಾಡಿಕೊ" ಎಂದು ನುಡಿದನು.

ಆ ಮಾತನ್ನು ಕೇಳಿ ಧೃತರಾಷ್ಟ್ರನು—"ವಿದುರ! ಭೀಷ್ಮ ದ್ರೋಣರು ಹೇಳಿದ ಮಾತು ಸತ್ಯವೇ ಸರಿ, ನಮಗೆ ಹಿತವಾದುದೇ ಅಹುದು. ನಿನ್ನ ವಚನವೂ ಹಿತವಾದುದು, ಸತ್ಯವಾದುದು. ಮಹಾರಥರಾದ ಕುಂತಿಯ ಮಕ್ಕಳು ಹೇಗೆ ಪಾಂಡುರಾಜನ ಮಕ್ಕಳೋ ಹಾಗೆಯೇ ಧರ್ಮದೃಷ್ಟಿಯಿಂದ ನೋಡಲಾಗಿ ನನ್ನ ಮಕ್ಕಳೂ ಅಹುದು. ಈ ರಾಜ್ಯವು ಹೇಗೆ ನನ್ನ ಮಕ್ಕಳದೋ ಹಾಗೆಯೇ ಪಾಂಡುರಾಯನ ಮಕ್ಕಳದೂ ಅಹುದು; ಸಂಶಯವಿಲ್ಲ. ದೈವವಶಾತ್ ಅವರೆಲ್ಲರೂ ಸುರಕ್ಷಿತರಾಗಿದ್ದಾರೆ. ನೀನೇ ಹೋಗಿ ಅವರೆಲ್ಲರನ್ನೂ ಕರೆದುಕೊಂಡು ಬಾ" ಎಂದನು.

ಈ ರೀತಿಯಲ್ಲಿ, ಧೃತರಾಷ್ಟ್ರನು ಭೀಷ್ಮನ ಉಪದೇಶದಂತೆ ಪಾಂಡವರನ್ನು ಕರೆಯಿಸಿಕೊಳ್ಳುವುದಕ್ಕೆ ವಿದುರನನ್ನು ದ್ರುಪದ

ರಾಜ್ಯಕ್ಕೆ ಕಳುಹಿಸಿದನು. ವಿದುರನು ಆ ರಾಜ್ಯವನ್ನು ಸೇರಿದ ಕೂಡಲೆ ಯುಧಿಷ್ಠಿರಾದಿ ಅಣ್ಣತಮ್ಮಂದಿರೂ ಅವರ ತಾಯಿ ಕುಂತಿಯೂ ಅವರ ಪತ್ನಿಯಾದ ದ್ರೌಪದಿಯೂ ಎಲ್ಲರೂ ಕೂಡಿ ಹಸ್ತಿನಾಪುರಕ್ಕೆ ಪ್ರಯಾಣ ಮಾಡಿದರು. ಅವರೆಲ್ಲರೂ ಬರುವ ಸಮಾಚಾರವು ತಿಳಿಯುತ್ತಲೆ ಧೃತರಾಷ್ಟ್ರನು ಅವರನ್ನು ಇದಿರ್ಗೊಳ್ಳುವ ನಿಮಿತ್ತವಾಗಿ ಕೃಪಾಚಾರ್ಯನನ್ನೂ ದ್ರೋಣಾಚಾರ್ಯನನ್ನೂ ಕೌರವರಲ್ಲಿ ಕೆಲವರನ್ನೂ ಕಳುಹಿಸಿ ಕೊಟ್ಟನು.

ಪುರವಾಸಿಗಳು ಪಾಂಡವರು ಮತ್ತೆ ಬರುವರೆಂಬುದನ್ನು ಕೇಳಿ ಪ್ರೀತರಾಗಿ ತಂತಮ್ಮೊಳಗೆ ಇಂತೆಂದು ಮಾತನಾಡಿಕೊಂಡರು:—
"ನಮ್ಮನ್ನು ಮಕ್ಕಳಂತೆ ಯಾವನು ಪ್ರೀತಿಸುತ್ತಿದ್ದನೋ ಆ ಧರ್ಮಾತ್ಮನೂ ಪುರುಷ ಶ್ರೇಷ್ಠನೂ ಆದ ಯುಧಿಷ್ಠಿರನು ಇಂದು ತಂದೆಯ ರಾಜಧಾನಿಗೆ ಪ್ರತ್ಯಾಗಮನ ಮಾಡುವನು. ಇವನ ಆಗಮನದಿಂದ ಪಾಂಡು ಮಹಾರಾಜನೇ ನಮ್ಮ ಹಿತಾರ್ಥವಾಗಿ ಈ ಲೋಕಕ್ಕೆ ತಿರುಗಿ ಬಂದಂತಾಗುವುದು. ನಾವು ಯಾವ ದಾನ ಮಾಡಿದ್ದರೂ, ಯಾವ ಹೋಮ ಮಾಡಿದ್ದರೂ, ತಪಸ್ಸು ಮಾಡಿ ಯಾವ ಪುಣ್ಯವನ್ನು ಗಳಿಸಿದ್ದರೂ, ಆ ಸಕಲ ಸುಕೃತಗಳ ಬಲದಿಂದ ಪಾಂಡು ನಂದನರು ಶತಾಯುಗಳಾಗಿರಲಿ!"

ಪಾಂಡವರು ನಗರವಾಸಿಗಳ ಬಾಯಿಂದ ಇತ್ಯಾದಿ ಪ್ರೀತಿ ವಚನಗಳನ್ನು ಕೇಳುತ್ತ ಕೇಳುತ್ತ ಅರಮನೆಯನ್ನು ಹೊಕ್ಕು ಭೀಷ್ಮಧೃತರಾಷ್ಟ್ರಾದಿಗಳ ಪಾದಕ್ಕೆ ವಂದಿಸಿದರು. ಕೌರವರೆಲ್ಲರೂ ಸೇರಿ ಅವರನ್ನು ಕುಶಲ ಪ್ರಶ್ನೆ ಮಾಡಿದರು. ಭೀಷ್ಮನು ಪರಮ ಸ್ನೇಹ ಭಾವದಿಂದ ಅವರೆಲ್ಲರನ್ನೂ ಆಲಿಂಗನ ಮಾಡಿಕೊಂಡು ಅವರ ಪ್ರೀತಿಯನ್ನು ಇಮ್ಮಡಿಸಿದನು. ಅವರೂ ಸಕಲರನ್ನೂ ಆದರ ಪೂರ್ವಕವಾಗಿ ಮಾತನಾಡಿಸಿ ಸಂತೋಷಪಡಿಸಿ ವಿಶ್ರಮಿಸಿಕೊಂಡರು.

ಕೆಲವು ದಿವಸಗಳ ತರುವಾಯ ಭೀಷ್ಮನು ಅವರನ್ನು ಧೃತರಾಷ್ಟ್ರನ ಸಮೀಪಕ್ಕೆ ಕರೆದುಕೊಂಡು ಹೋದನು. ಅವರು ವಿನಯ

ದಿಂದ ಸಮೀಪದಲ್ಲಿ ಹೋಗಿ ನಿಲ್ಲಲು, ಧೃತರಾಷ್ಟ್ರನು ಇಂತೆಂದನು:—"ಕುಂತೀ ಕುಮಾರರೇ! ನಾನು ಆಡುವ ಮಾತನ್ನು ಕೇಳಿರಿ. ಈ ರಾಜ್ಯವನ್ನು ಪಾಂಡುರಾಯನು ಪಾಲಿಸಿ ವೃದ್ಧಿಗೆ ತಂದನು. ಅವನು ನನ್ನ ಆಜ್ಞೆಯಂತೆ ನಡೆಯುತ್ತ ಅನೇಕ ಶ್ರಮಸಾಧ್ಯವಾದ ಕಾರ್ಯಗಳನ್ನು ಮಾಡಿದನು. ಕೌಂತೇಯರೇ! ನೀವು ಕೂಡ ನಾನು ಹೇಳಿದಂತೆ ನಡೆಯಿರಿ. ಯುಧಿಷ್ಠಿರ! ನನ್ನ ಮಕ್ಕಳು ದುರಾತ್ಮರು, ಅಹಂಕಾರಿಗಳು, ನನ್ನ ಮಾತನ್ನು ಕೇಳರು; ಸ್ವಕಾರ್ಯಪರರು, ಕಲಹ ಪ್ರಿಯರು. ಆದುದರಿಂದ ನೀವು ಅರ್ಧ ರಾಜ್ಯವನ್ನು ತೆಗೆದುಕೊಂಡು, ಖಾಂಡವ ಪ್ರಸ್ಥದಲ್ಲಿ ಸುಖವಾಗಿರಿ. ಅಲ್ಲಿ ಅವರಿಂದ ನಿಮಗೆ ಯಾವ ಬಾಧೆಯೂ ಆಗಲಾರದು."

ಇಂತೆಂದು ಹೇಳಿ ಧೃತರಾಷ್ಟ್ರನು ಯುಧಿಷ್ಠಿರನಿಗೆ ಅರ್ಧ ರಾಜ್ಯವನ್ನು ಕೊಟ್ಟು ಪಟ್ಟವನ್ನು ಕಟ್ಟಿದನು. ಪಾಂಡವರು ಧೃತರಾಷ್ಟ್ರನ ಆಜ್ಞೆಯು ಶಿರೋಧಾರ್ಯವೆಂದು ಖಾಂಡವಪ್ರಸ್ಥಕ್ಕೆ ಹೋಗಲುದ್ಯುಕ್ತರಾದರು. ದುರ್ಯೋಧನನಿಗೂ ಅವರಿಗೂ ಮತ್ತೆ ವಿವಾದವು ಹುಟ್ಟಬಾರದೆಂದೇ ಪಾಂಡವರಿಗೆ ಪ್ರತ್ಯೇಕ ವಾಸಸ್ಥಾನವು ಗೊತ್ತಾಯಿತು; ಈ ವಿಷಯವು ಭೀಷ್ಮನಿಗೂ ಸಮ್ಮತವಾಗಿಯೇ ಇದ್ದಿತು. ಪಾಂಡವರು ಸಂತುಷ್ಟರಾಗಿ ಖಾಂಡವಪ್ರಸ್ಥಕ್ಕೆ ಅರಣ್ಯಮಾರ್ಗವಾಗಿ ಪ್ರಯಾಣ ಮಾಡಿದರು.

———

# ಎಂಟನೆಯ ಅಧ್ಯಾಯ

## ಜರಾಸಂಧ ವಧೆ, ರಾಜಸೂಯ ಯಜ್ಞ, ಅಗ್ರಪೂಜೆ, ಶಿಶುಪಾಲ ವಧೆ.

ಪಾಂಡವರು ಖಾಂಡವಪ್ರಸ್ಥವನ್ನು ಸೇರುತ್ತಲೆ ಅದು ಸೊಬಗೇರಿ ಒಂದು ಹೊಸದಾದ ಪಟ್ಟಣವೇ ಆಯಿತು. ಆ ಪಟ್ಟಣವು ಇಂದ್ರಪ್ರಸ್ಥ ವೆಂದು ಹೆಸರುಗೊಂಡು ಪಾಂಡವರ ರಾಜಧಾನಿಯಾಗಿ ಕೋಟೆ ಕೊತ್ತಳ ಗಳಿಂದ ಸುರಕ್ಷಿತವಾಗಿ, ಇಕ್ಕೆಲದಲ್ಲಿಯೂ ಛಾಯಾ ವೃಕ್ಷಗಳಿಂದ ಸೊಗಯಿಸುತ್ತಿದ್ದ ವಿಶಾಲವಾದ ಬೀದಿಗಳಿಂದಲೂ, ಚತುರ ಶಿಲ್ಪಿಗಳ ಕೌಶಲವನ್ನು ತೋರುತ್ತಿದ್ದ ಉನ್ನತ ಭವನಗಳಿಂದಲೂ ಶೋಭಿಸು ತ್ತಿದ್ದಿತು. ಅಲ್ಲಲ್ಲಿ ಪುಷ್ಪರಾಜಿಗಳಿಂದಲೂ ಲತಾ ಗೃಹಗಳಿಂದಲೂ ಸುಮನೋಹರವಾಗಿದ್ದ ಉದ್ಯಾನ ವನಗಳು ಕಣ್ಣಿಗೆ ಆನಂದವನ್ನುಂಟು ಮಾಡುತ್ತಿದ್ದುವು. ಚಕ್ರವಾಕಾದಿ ಜಲಚರ ಪಕ್ಷಿಗಳಿಂದ ಸಮಾಕೀರ್ಣ ವಾಗಿ ಸ್ವಚ್ಛ ಸಲಿಲದಿಂದ ಪರಿಪೂರ್ಣವಾದ ಸರೋವರಗಳು ಅಲ್ಲಲ್ಲಿ ಕಣ್ಗೊಳಿಸುತ್ತಿದ್ದುವು. ಈ ರೀತಿಯಾಗಿ ಇಂದ್ರಪ್ರಸ್ಥವು ನೋಟಕ್ಕೆ ರಮಣೀಯವಾಗಿಯೂ ವಾಸಕ್ಕೆ ಸುಖ ಸಾಧನ ಪೂರ್ಣವಾಗಿಯೂ ಇದ್ದಿತು. ಚತುರ್ವೇದವೇತ್ತರಾದ ಬ್ರಾಹ್ಮಣರೂ, ನಾನಾ ಭಾಷಾ ವೇತ್ತರೂ, ದೇಶ ದೇಶಗಳನ್ನು ಸಂಚರಿಸುತ್ತ ಧನಾರ್ಜನೆಯನ್ನು ಮಾಡುವುದರಲ್ಲಿ ಕುಶಲರಾದ ವ್ಯವಸಾಯಿಗಳೂ, ಸರ್ವ ವಿಧ ಕಾರು ಕಾರ್ಯಗಳಲ್ಲಿ ನಿಪುಣರಾದ ಶಿಲ್ಪಿಗಳೂ ತಂಡ ತಂಡವಾಗಿ ಬಂದು ಆ ರಾಜಧಾನಿಯಲ್ಲಿ ನೆಲಸಿದರು.

ಪಾಂಡವರು ಇಂದ್ರಪ್ರಸ್ಥದ ರಮಣೀಯತೆಯನ್ನೂ ಜನ ಸಮೃದ್ಧಿಯನ್ನೂ ನೋಡಿ ಸುಪ್ರೀತರಾದರು. ಭೀಷ್ಮನು ಪರಮ ಪ್ರಿಯ ನಾದ ಯುಧಿಷ್ಠಿರನ ನೂತನ ರಾಜಧಾನಿಯ ಶೋಭಾ ಸಂಪತ್ತನ್ನು ಕೇಳಿ ಸಂತೋಷಪಟ್ಟನು. ಹಸ್ತಿನಾಪುರದಲ್ಲಿ ಧೃತರಾಷ್ಟ್ರನ ಆಶ್ರಯದಲ್ಲಿ ವಾಸಮಾಡುತ್ತಿದ್ದರೂ ಅವನು ಅನವರತ ಯುಧಿಷ್ಠಿರನ

ಹಿತವನ್ನು ಕೋರುತ್ತ, ಉಭಯ ಕುಲವನ್ನೂ ಸಮಾನವಾಗಿ ಪ್ರೀತಿಸುತ್ತಿದ್ದನು. ಅವನು ಯುಧಿಷ್ಠಿರನ ಅಭ್ಯುದಯವನ್ನು ನೋಡಿ ಸಂತುಷ್ಟನಾಗುತ್ತಿದ್ದಂತೆಯೇ ದುರ್ಯೋಧನನ ಶ್ರೇಯೋಭಿವೃದ್ಧಿಯನ್ನು ನೋಡಿ ಸಂತೋಷಪಡುತ್ತಿದ್ದನು. ಯುಧಿಷ್ಠಿರನ ಧರ್ಮಬುದ್ಧಿಯನ್ನೂ ಭೀಮನ ಸಾಹಸವನ್ನೂ ಅರ್ಜುನನ ಅಸ್ತ್ರಕುಶಲತೆಯನ್ನೂ ನೋಡಿ, ಪಾಂಡವರು ಇಂದ್ರಪ್ರಸ್ಥದಲ್ಲಿ ಅನ್ಯೋನ್ಯವಾಗಿದ್ದುಕೊಂಡು ಧರ್ಮದಿಂದ ರಾಜ್ಯಶಾಸನಕಾರ್ಯವನ್ನೂ ಪ್ರಜಾಪಾಲನೆಯನ್ನೂ ಮಾಡಬಲ್ಲವರೆಂದು ಅವನು ದೃಢವಾಗಿ ನಂಬಿದ್ದನು. ಮೇಲಾಗಿ, ಸರ್ವನೀತಿವಿಶಾರದನಾದ ವಾಸುದೇವನು ಅವರಿಗೆ ಮಂತ್ರಿಯಾಗಿ ಸದುಪದೇಶ ಮಾಡುತ್ತಿರುವಲ್ಲಿ ಯಾವ ವಿಧದಲ್ಲಿಯೂ ಅವರಿಗೆ ಕೊರತೆಯಾಗದು, ಯಾವ ಹಾನಿಯೂ ಬಾರದು ಎಂಬ ವಿಶ್ವಾಸವು ಅವನಿಗೆ ಸಂಪೂರ್ಣವಾಗಿದ್ದುದರಿಂದ ತಾನು ಪಾಂಡವರ ಸಂಗಡ ವಾಸಮಾಡದಿದ್ದರೂ ಭಯವಿಲ್ಲವೆಂದೆಣಿಸಿದನು. ಅವನು ಬಾಲ್ಯದಲ್ಲಿ ಎಲ್ಲಿ ಪರಿಪಾಲಿತನಾದನೋ, ಯೌವನದಲ್ಲಿ ಎಲ್ಲಿ ತಂದೆಯ ಸಂತೋಷಾರ್ಥವಾಗಿ ವಿಶಾಲರಾಜ್ಯವನ್ನು ಪರಿತ್ಯಜಿಸಿದನೋ, ಪ್ರೌಢಾವಸ್ಥೆಯಲ್ಲಿ ಪ್ರಾಪ್ತಕಾರ್ಯಗಳನ್ನು ಎಲ್ಲಿ ನಿರ್ವಹಿಸುತ್ತಿದ್ದನೋ ಅಲ್ಲಿಯೇ ಈಗಲೂ ಇದ್ದೇ ತೀರಿದನು. ಪೂರ್ವದಂತೆಯೇ ಅವನು ಕುರುರಾಯನಿಗೆ ಅಧೀನನಾಗಿ ಕೌರವ ರಾಜಧಾನಿಯಲ್ಲಿಯೇ ನಿಂತನು.

ಯುಧಿಷ್ಠಿರನು ಖಾಂಡವಪ್ರಸ್ಥದಲ್ಲಿ ರಾಜ್ಯಭಾರವನ್ನು ಮಾಡುತ್ತಿರಲು, ಅವನ ರಾಜನೀತಿಯ ಮಹಿಮೆಯಿಂದ ರಾಷ್ಟ್ರವು ನಿಷ್ಕಂಟಕವಾಗಿ ಸಮೃದ್ಧಿಶಾಲಿಯಾಯಿತು. ಪ್ರಜೆಗಳು ಕೆಟ್ಟ ಮಾರ್ಗಕ್ಕೆ ಹೋಗದೆ ಕರ್ತವ್ಯತತ್ಪರರಾಗಿದ್ದರು. ನಾನಾ ರಾಷ್ಟ್ರಗಳ ಅರಸರು ದ್ವೇಷಶೂನ್ಯರಾಗಿ ಕಪ್ಪಕಾಣಿಕೆಗಳನ್ನು ಕೊಡುತ್ತಲೂ ಪ್ರಿಯಕಾರ್ಯಗಳನ್ನು ಮಾಡುತ್ತಲೂ ಅವನನ್ನು ಸಂತೋಷಗೊಳಿಸುತ್ತಿದ್ದರು. ಅವನ ನಾಲ್ವರು ತಮ್ಮಂದಿರೂ ದಿಗ್ವಿಜಯಾರ್ಥವಾಗಿ ನಾಲ್ಕು ದಿಕ್ಕಿಗೆ ಹೋಗಿ ಸಾಹಸ ಸದ್ಗುಣಗಳಿಂದ ಸಾಗರಾಂತ ಪೃಥ್ವಿಯನ್ನು

ಅವನ ಕೈಸೇರಿಸಿದರು. ಮಹಾರಾಜ ಯುಧಿಷ್ಠಿರನು ನಿಖಿಲ ರಾಜಮಂಡ ಲಿಗೆ ಅಧೀಶ್ವರನಾಗಿ, ವಿಪುಲೈಶ್ವರ್ಯಕ್ಕೆ ಅಧಿಕಾರಿಯಾಗಿ, ರಾಜ ಸೂಯ ಯಜ್ಞ ಮಾಡಲಿಚ್ಛೈಸಿದನು. ಆ ಸಂಗತಿಯನ್ನು ಕುರಿತು ಅವನು ಮಂತ್ರಿಗಳನ್ನೂ ಭೀಮಾರ್ಜುನಾದಿ ತಮ್ಮಂದಿರನ್ನೂ ವ್ಯಾಸಾದಿ ಋಷಿಗಳನ್ನೂ ಆಲೋಚನೆ ಕೇಳಿದನು. ಅವರೆಲ್ಲರೂ ಯುಧಿಷ್ಠಿರನು ರಾಜಸೂಯ ಯಜ್ಞ ಮಾಡಲು ತಕ್ಕ ಅಧಿಕಾರಿಯೆಂದೇ ಹೇಳಿ ಯಜ್ಞ ಮಾಡಲು ಅವನನ್ನುತ್ಸಾಹಗೊಳಿಸಿದರು. ಆದರೆ ಆ ಮಹಾರಾಜನು ಶ್ರೀ ಕೃಷ್ಣನನ್ನು ಕೇಳದೆಯೇ ಯಾವ ಕೆಲಸಕ್ಕೂ ಕೈ ಹಾಕುತ್ತಿರಲಿಲ್ಲ. ಅವನು ಕೃಷ್ಣನನ್ನು ಕರೆಯಿಸಿಕೊಂಡು—"ನಾನು ರಾಜಸೂಯ ಯಜ್ಞವನ್ನು ಮಾಡಬೇಕೆಂದಿದ್ದೇನೆ. ಆದರೆ ಅದು ಇಚ್ಛೈಸಿದ ಮಾತ್ರಕ್ಕೇ ಆಗುವ ಕೆಲಸವಲ್ಲ. ಅದು ಆಗುವ ಬಗೆಯನ್ನು ನೀನು ಬಲ್ಲೆ. ಯಾರಿಗೆ ಸಕಲವೂ ಸಾಧ್ಯವೋ, ಯಾವನು ಸರ್ವತ್ರ ಪೂಜ್ಯನೋ, ಯಾವನು ಸಮಸ್ತ ಪೃಥಿವಿಯೊಡೆಯನೋ ಅವನು ರಾಜಸೂಯ ಯಜ್ಞವನ್ನು ಮಾಡುವುದಕ್ಕೆ ತಕ್ಕ ಪಾತ್ರನು" ಎಂದು ಹೇಳಿ, ತಾನು ಆ ಯಜ್ಞವನ್ನು ಮಾಡಲು ತಕ್ಕ ಪಾತ್ರನೇ ಎಂದು ಕೇಳಿದನು; ತನಗೆ ಆಪ್ತರಾಗಿರುವವರೆಲ್ಲರನ್ನೂ ಕೇಳಿಯೂ ಮತ್ತೆ ಕೃಷ್ಣನನ್ನು ಕೇಳುವುದಕ್ಕೆ ಇಂತೆಂದು ಕಾರಣವನ್ನೂ ನಿರ್ದೇಶಿಸಿದನು:—

"ನಾನು ನನ್ನ ಇತರ ಹಿತೈಷಿಗಳನ್ನೂ ಆಲೋಚನೆ ಕೇಳಿದೆನು. ಅವರೆಲ್ಲರೂ ಆಗಬಹುದೆಂದರು. ಆದರೆ ನಿನ್ನ ಅಭಿಮತವಿಲ್ಲದೆ ನಾನು ಆ ಕಾರ್ಯವನ್ನು ಮಾಡೆನು. ಕೃಷ್ಣ! ಕೆಲವರು ಬಂಧುತ್ವದ ನಿಮಿತ್ತ ದಿಂದ ದೋಷಗಳನ್ನು ಬಾಯ್ಬಿಟ್ಟು ಹೇಳರು; ಕೆಲವರು ಸ್ವಾರ್ಥಪರ ರಾಗಿ ಪ್ರಿಯ ವಾಕ್ಯವನ್ನಾಡುವರು; ಕೆಲವರು ತಮಗೆ ಯಾವುದು ಪ್ರಿಯವೋ ಅದನ್ನೇ ಹಿತವೆಂದು ತಿಳಿದುಕೊಳ್ಳುವರು. ಎಲೈ ಮಹಾ ತ್ಮನೇ! ಲೋಕದಲ್ಲಿ ಅಂತಹವರೇ ಅಧಿಕವಾಗಿರುವರು. ಅವರ ಮಾತನ್ನು ನಂಬಿ ಯಾವ ಕಾರ್ಯವನ್ನೂ ಮಾಡಲಾಗುವುದಿಲ್ಲ. ನಿನ್ನಲ್ಲಿ ಅಂತಹ ದೋಷವಿಲ್ಲ; ನೀನು ಕಾಮ ಕ್ರೋಧವಿಲ್ಲದವನು; ನನಗೆ ಯಥಾರ್ಥವಾದ ಆಲೋಚನೆಯನ್ನು ಹೇಳು."

ಯುಧಿಷ್ಠಿರನು ಕೋರಿದಂತೆಯೇ ಶ್ರೀ ಕೃಷ್ಣನು ಸ್ಪಷ್ಟೋಕ್ತಿ ಯಿಂದ—"ರಾಜಸೂಯ ಯಜ್ಞವನ್ನು ಮಾಡಲು ನೀನರ್ಹನಲ್ಲ; ಸಮ್ರಾಜರಿಗೆ ಹೊರತು ಬೇರೆ ಯಾರಿಗೂ ಆ ಕೆಲಸಕ್ಕೆ ಅಧಿಕಾರವಿಲ್ಲ. ನೀನು ಸಮ್ರಾಜನಲ್ಲ. ಈಗ ಮಗಧಾಧಿಪತಿ ಜರಾಸಂಧನು ಸಮ್ರಾಜ. ಅವನನ್ನು ಜಯಿಸದಿದ್ದರೆ ನೀನು ರಾಜಸೂಯಕ್ಕೆ ಅಧಿಕಾರಿಯಾಗ ಲಾರೆ; ಅದನ್ನು ಕೈಕೊಂಡು ಪೂರೈಸಲೂ ಆರೆ" ಎಂದನು.

ಜರಾಸಂಧನು ಸಮ್ರಾಜನು. ಅವನು ತನ್ನ ಅತ್ಯಾಚಾರದಿಂದ ಲೋಕವನ್ನು ಪೀಡಿಸುತ್ತಿದ್ದನು. ಅವನು ರಾಜಸೂಯ ಯಜ್ಞ ಮಾಡಲು ನಿಶ್ಚಯಿಸಿ ಸಮಸ್ತ ಭೂಪತಿಗಳನ್ನೂ ಬಾಹು ಬಲದಿಂದ ಜಯಿಸಿ ಗಿರಿ ದುರ್ಗದಲ್ಲಿ ಬಂದಿಗಳನ್ನಾಗಿಟ್ಟು, ಯಜ್ಞ ಕಾಲದಲ್ಲಿ ಅವರೆಲ್ಲರನ್ನೂ ಬಲಿ ಕೊಡಬೇಕೆಂದಿದ್ದನು. ಕಾರಾಗೃಹದಲ್ಲಿದ್ದ ಈ ರಾಜರ ಹಿತಾರ್ಥವಾಗಿ—"ಎಲೈ! ಭರತಕುಲ ಪ್ರದೀಪನೆ! ಯಾರು ದುರಾತ್ಮ ಜರಾಸಂಧನ ಈ ಕ್ರೂರ ಕರ್ಮವನ್ನು ನಿಲ್ಲಿಸುವರೋ ಅವರ ಯಶೋರಾಶಿ ಭೂಮಂಡಲದಲ್ಲಿ ದೇದೀಪ್ಯಮಾನವಾಗುವುದು; ಯಾರು ಅವನನ್ನು ಜಯಿಸುವರೋ ಅವರು ನಿಶ್ಚಯವಾಗಿ ಸಾಮ್ರಾಜ್ಯ ವನ್ನು ಪಡೆಯುವರು" ಎಂದು ಕೃಷ್ಣನು ಉಪದೇಶಮಾಡಿದನು.

ಭೀಮಾರ್ಜುನರೂ ಕೃಷ್ಣನೂ ಈ ಮುವ್ವರು ಮಾತ್ರ ದಂಡುದಾಳಿ ಗಳಿಲ್ಲದೆಯೇ ಜರಾಸಂಧನನ್ನು ಜಯಿಸಲು ಹೊರಟರು. ಹದಿನಾಲ್ಕು ಹಗಲು ಪೌರವರ್ಗ ಮತ್ತು ಸಮಸ್ತ ಮಗಧವಾಸಿಗಳ ಸಮಕ್ಷ ದಲ್ಲಿ ಜರಾಸಂಧನಿಗೂ ಭೀಮನಿಗೂ ದ್ವೈರಥ್ಯ ಯುದ್ಧವು ನಡೆಯಿತು. ಜರಾಸಂಧನು ಹತನಾದನು. ಕೃಷ್ಣಾರ್ಜುನ ಭೀಮರು ಕಾರಾಬದ್ಧ ರಾಗಿದ್ದ ರಾಜರನ್ನು ಬಿಡುಗಡೆಮಾಡಿದರು. ಜರಾಸಂಧನ ವಧೆಯ ಉದ್ದೇಶವು ಕಂಟಕೋದ್ಧರಣವೇ ಹೊರತು ಪರಸ್ವಾಪಹರಣವಲ್ಲ. ಜರಾಸಂಧನನ್ನು ಕೊಂದ ಬಳಿಕ ಅವನ ಮಗ ಸಹದೇವನಿಗೆ ಪಟ್ಟವನ್ನು ಕಟ್ಟಿ ಮುವ್ವರೂ ಹೊರಟುಹೋದರು.

ಶ್ರೀಕೃಷ್ಣನ ಅಭೀಷ್ಟವು ನೆರವೇರುತ್ತಲೆ ಅವನು ಧರ್ಮರಾಯನು ರಾಜಸೂಯ ಯಜ್ಞವನ್ನು ಮಾಡಲು ಅಭಿಮತನಾದನು. ಕೂಡಲೆ

ಆ ಯಜ್ಞಕ್ಕೆ ತಕ್ಕ ಕಾರ್ಯಗಳಾರಂಭವಾದುವು. ಶಿಲ್ಪಿಗಳು ಪ್ರಶಸ್ತ ವಾದ ಯಜ್ಞಶಾಲೆಯನ್ನೂ, ಯಜ್ಞಕ್ಕೆ ಬಂದವರಿಳಿಯುವುದಕ್ಕೆ ಸೊಗಸಾದ ಬಿಡಾರಗಳನ್ನೂ ಕಟ್ಟಿದರು. ಆಚಾರ್ಯ ಧೌಮ್ಯನು ಯಜ್ಞ ಸಂಭಾರಗಳನ್ನು ಕೂಡಿಸುವ ಭಾರವನ್ನೂ, ಸಹದೇವನು ದೇಶ ದೇಶಕ್ಕೆ ದೂತರನ್ನು ಕಳುಹಿಸಿ ಬರತಕ್ಕವರನ್ನು ಔತಣ ಹೇಳಿ ಕರೆಯಿಸುವ ಭಾರವನ್ನೂ ವಹಿಸಿದರು. ಮಹರ್ಷಿ ಕೃಷ್ಣದ್ವೈಪಾಯನನು ಬಂದು ವೇದಜ್ಞರಾದ ಬ್ರಾಹ್ಮಣರನ್ನು ಕರೆಯಿಸಿ ಅವರವರು ಮಾಡತಕ್ಕ ಯಾಜ್ಞಿಕ ಕಾರ್ಯಕ್ಕೆ ಅವರನ್ನು ನೇಮಿಸಿದನು. ಯುಧಿಷ್ಠಿರನು ಭೀಷ್ಮ ಧೃತರಾಷ್ಟ್ರ ದ್ರೋಣ ಪ್ರಭೃತಿ ಗುರುಜನರನ್ನೂ ದುರ್ಯೋಧನಾದಿ ಭ್ರಾತೃಗಳನ್ನೂ ಕರೆಯಲಿಕ್ಕೆ ನಕುಲನನ್ನು ಕಳುಹಿಸಿದನು.

ನಕುಲನು ಯುಧಿಷ್ಠಿರನ ಆಜ್ಞೆಯ ಮೇರೆಗೆ ಹಸ್ತಿನಾಪುರಕ್ಕೆ ಹೋಗಿ ವಿನಯ ಪೂರ್ವಕವಾಗಿ ಭೀಷ್ಮಾದಿ ಗುರುಜನರನ್ನೂ ಆಚಾರ್ಯ ಪ್ರಮುಖ ವಿಪ್ರರನ್ನೂ ಯಜ್ಞಕ್ಕೆ ಬಿಜಯಮಾಡಿಸಬೇಕೆಂದು ಪ್ರಾರ್ಥಿಸಿದನು. ತನ್ನ ಪ್ರಯತ್ನಾತಿಶಯದಿಂದ ಸುಶಿಕ್ಷಿತನಾಗಿ ಸಮ್ಮಾನಿತ ಚಕ್ರವರ್ತಿ ಪದವಿಯಲ್ಲಿ ಪ್ರತಿಷ್ಠಿತನಾದ ಯುಧಿಷ್ಠಿರನು ರಾಜಸೂಯ ಯಾಗವನ್ನು ಮಾಡುವನು, ನಿಖಿಲ ರಾಜರೂ ಬಂದು ಅವನ ಚರಣಕ್ಕೆರಗುವರು—ಎಂಬ ಸಮಾಚಾರವನ್ನು ಕೇಳಿ ವೃದ್ಧ ಕೌರವ ಶ್ರೇಷ್ಠನು ಆನಂದಪರವಶನಾದನು. ಇಷ್ಟು ದಿನಕ್ಕೆ ಶಾಂತಿ ಸಲಿಲದಿಂದ ಅವನ ಹೃದಯ ಸಂತಾಪವು ಶಮನವಾಯಿತು. ಅಭೀಷ್ಟ ವಿಷಯವು ಕೈಗೂಡಿದುದರಿಂದ ಇಂದು ಆ ವೃದ್ಧ ಪುರುಷ ಸಿಂಹನ ವಕ್ಷಸ್ಸ್ಥಲವು ಆನಂದ ಬಾಷ್ಪದಿಂದ ಪ್ಲಾವಿತವಾಯಿತು. ಹಸ್ತಿನಾಪುರ ವಾಸಿಗಳಾದ ಕೌರವರು ಆಹ್ವಾನವನ್ನು ಸ್ವೀಕರಿಸಿ ಇಂದ್ರಪ್ರಸ್ಥಕ್ಕೆ ಹೋಗಿ ಸೇರಿದರು. ಯುಧಿಷ್ಠಿರನು ಯಥೋಚಿತ ವಿನಯದಿಂದ ವೃದ್ಧ ಪಿತಾಮಹಾದಿ ಗುರುಜನರ ಚರಣಕ್ಕೆ ಪ್ರಣಾಮ ಮಾಡಿ ಕೈಮುಗಿದುಕೊಂಡು ನಿಂತು ಇಂತೆಂದನು:—"ಆರ್ಯರೇ! ನಾನು ರಾಜಸೂಯ ಯಜ್ಞಕ್ಕೆ ದೀಕ್ಷೆಯನ್ನು ಕೈಕೊಂಡಿರುವೆನು. ತಾವು

ಅನುಗ್ರಹಮಾಡಿ ಯಜ್ಞವು ಸಾಂಗವಾಗಿ ನೆರವೇರುವಂತೆ ಸಾಹಾಯ್ಯ ಮಾಡಬೇಕು. ನನ್ನ ಸಮಸ್ತ ಸಂಪತ್ತಿನಲ್ಲಿಯೂ ತಮಗೆ ಸಂಪೂರ್ಣ ವಾದ ಅಧಿಕಾರವುಂಟು. ಯಾವ ರೀತಿಯಲ್ಲಿ ನನಗೆ ಸರ್ವಾಂಗ ಶ್ರೇಯೋಲಾಭವುಂಟಾಗುವುದೋ ಕೈಕೊಂಡಿರುವ ಯಜ್ಞವು ಯಾವ ರೀತಿಯಲ್ಲಿ ವಿಧಿವತ್ತಾಗಿ ಸಮಾಪ್ತಿಯಾಗುವುದೋ ಆ ರೀತಿಯಲ್ಲಿ ಸಕಲ ಕಾರ್ಯಗಳೂ ನಡೆಯುವಂತೆ ಮಾಡಬೇಕು.''

ರಾಜನ ವಿನಯವಚನದಿಂದ ಎಲ್ಲರೂ ಸಂತುಷ್ಟರಾಗಿ ತಂತಮ್ಮ ಶಕ್ತ್ಯನುಸಾರವಾಗಿ ತಂತಮ್ಮ ಪಾಲಿಗೆ ಬಂದ ಕೆಲಸಗಳನ್ನು ಮಾಡ ಲೊಪ್ಪಿದರು. ಅಜಾತ ಶತ್ರುವಾದ ಯುಧಿಷ್ಠಿರನು ದುರ್ಯೋಧನ ದುಃಶಾಸನರನ್ನು ಆದರ ಪುರಸ್ಸರವಾಗಿ ಕಂಡು ಇಬ್ಬರಿಗೂ ಬೇರೆ ಬೇರೆ ಕೆಲಸಗಳನ್ನೊಪ್ಪಿಸಿದನು. ಭೀಷ್ಮ ದ್ರೋಣಾಚಾರ್ಯರು ಕರ್ತವ್ಯಾ ಕರ್ತವ್ಯಗಳನ್ನು ವಿವೇಚನೆಮಾಡಿ ಹೇಳುವ ಭಾರವನ್ನು ವಹಿಸಿದರು. ಧೃತರಾಷ್ಟ್ರನು ಯಜಮಾನನಾದನು. ಕೃಪಾಚಾರ್ಯನು ಧನಾಧ್ಯಕ್ಷ ನಾಗಿ ಭೂರಿದಕ್ಷಿಣೆಯನ್ನು ಕೊಡುವ ಕಾರ್ಯವನ್ನು ವಹಿಸಿದನು. ಬಂದ ರಾಜರಿಂದ ಕಾಣಿಕೆಯನ್ನು ಕೊಳ್ಳುವ ಕೆಲಸವು ದುರ್ಯೋಧನನ ಪಾಲಿಗೂ ಭೋಜ್ಯದ್ರವ್ಯಾದಿಗಳನ್ನು ಕುರಿತ ವಿಚಾರವು ದುಃಶಾಸನನ ಪಾಲಿಗೂ ಬಂದುವು. ಅಶ್ವತ್ಥಾಮನು ಬ್ರಾಹ್ಮಣರ ಪರಿಚರ್ಯ ಭಾರವನ್ನೂ, ಸಂಜಯನು ರಾಜರ ಪರಿಚರ್ಯ ಭಾರವನ್ನೂ ಕೈಕೊಂಡರು. ಶ್ರೀ ಕೃಷ್ಣನು ಯಜ್ಞರಕ್ಷಣೆಯ ಭಾರವನ್ನೂ ಬ್ರಾಹ್ಮಣರ ಪಾದಪ್ರಕ್ಷಾಳನಾದಿ ಕೈಂಕರ್ಯವನ್ನೂ ವಹಿಸಿದನು.

ಕಾಲಕ್ಕೆ ಸರಿಯಾಗಿ ಯಜ್ಞಕ್ಕೆ ಆಹೂತರಾದವರೆಲ್ಲರೂ ಬರಲಾ ರಂಭಿಸಿದರು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿ ಸಕಲ ವರ್ಣ ದವರನ್ನೂ ಕರೆದಿದ್ದರು. ಸಕಲರೂ ಸಕುಟುಂಬ ಸಪರಿವಾರರಾಗಿ ಬಂದಿಳಿದರು. ಋಷಿಗಳು ನರಪತಿಗಳು ಪುರವಾಸಿಗಳು ಜನಪದ ವಾಸಿಗಳು ಸರ್ವರೂ ಯಜ್ಞಸ್ಥಲಕ್ಕೆ ಬಂದು ಸೇರಿದರು. ಬಂದವ ರೆಲ್ಲರೂ ಯಜ್ಞ ಸಭೆಯ ಶೋಭೆಯನ್ನೂ, ಬಂದವರನ್ನು ಉಪಚರಿಸು

ತ್ತಿದ್ದ ರೀತಿಯನ್ನೂ, ಆದರಿಸುತ್ತಿದ್ದ ಕ್ರಮವನ್ನೂ, ಯಜ್ಞಸ್ಥಲ ದಲ್ಲಿದ್ದ ಅರ್ಥರಾಶಿಯನ್ನೂ ನೋಡಿ ವಿಸ್ಮಯಪಟ್ಟು, ಮುಕ್ತಕಂಠ ದಿಂದ ಯುಧಿಷ್ಠಿರನನ್ನು ಪ್ರಶಂಸೆಮಾಡಿದರು. ನಿರ್ದಿಷ್ಟವಾಗಿದ್ದ ಶುಭ ದಿವಸ ಯಜ್ಞಾರಂಭವಾಯಿತು. ಯುಧಿಷ್ಠಿರನು ಹೇಗೆ ಸಹಸ್ರ ಸಹಸ್ರ ಜನರಿಂದ ಕಾಣಿಕೆಯನ್ನು ಪರಿಗ್ರಹಿಸಿದನೋ ಹಾಗೆಯೇ ಮುಕ್ತ ಹಸ್ತದಿಂದ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಕೊಟ್ಟನು. ಯಾರು ಏನನ್ನು ಬೇಡಿದರೂ ಅದು ಅವರಿಗೆ ಯಥೇಚ್ಛವಾಗಿ ಲಭಿಸುತ್ತಿದ್ದಿತು. ಈ ತೆರದಲ್ಲಿ ರಾಜಸೂಯ ಯಜ್ಞವು ಅತಿ ಸಂಭ್ರಮದಿಂದ ಸಮಾ ರಂಭವಾಯಿತು.

ಈ ಮಹಾ ಯಜ್ಞದಲ್ಲಿ ಭೀಷ್ಮನು ಕರ್ತವ್ಯಾಕರ್ತವ್ಯ ವಿಚಾರ ಭಾರವನ್ನು ವಹಿಸಿ ತನ್ನ ವಿಚಕ್ಷಣೆಯನ್ನೂ ಗುಣಗ್ರಹಣ ಶಕ್ತಿಯನ್ನೂ ವಿಶೇಷವಾಗಿ ತೋರಿದನು. ಅವನು ಯುಧಿಷ್ಠಿರನನ್ನು ಕುರಿತು— "ವತ್ಸ! ಆಚಾರ್ಯರು, ಋತ್ವಿಜರು, ಸ್ನಾತಕರು, ನೃಪತಿ ಪ್ರಭೃತಿ ಗುಣಶ್ರೇಷ್ಠರು ಅರ್ಘ್ಯವನ್ನು ಕೊಳ್ಳಲು ಸತ್ಪಾತ್ರರಾಗಿರುವರು. ಇವರೊಳಗೆ ಯಾರು ಸರ್ವ ಶ್ರೇಷ್ಠರೋ ಅವರಿಗೆ ಯಜ್ಞಭೂಮಿಯಲ್ಲಿ ಮೊದಲು ಅರ್ಘ್ಯವನ್ನು ಕೊಟ್ಟು ಅರ್ಚನೆಮಾಡಿ ತರುವಾಯ ಎಲ್ಲರನ್ನೂ ಯಥಾ ಯೋಗ್ಯವಾಗಿ ಸಮ್ಮಾನಿಸು" ಎಂದನು.

ಅದಕ್ಕೆ ಯುಧಿಷ್ಠಿರನು—"ಪಿತಾಮಹನೇ! ನೀನು ಅಗ್ರಪೂಜೆಗೆ ಯಾರು ಯೋಗ್ಯರೆಂದು ವಿವೇಚನೆ ಮಾಡಿದ್ದೀಯೋ ಅಪ್ಪಣೆ ಕೊಡು" ಎಂದು ಕೇಳಿದನು.

ಭೀಷ್ಮನು ಶ್ರೀ ಕೃಷ್ಣನೇ ಸರ್ವ ಶ್ರೇಷ್ಠನೆಂದು ಬುದ್ಧಿಪೂರ್ವಕ ವಾಗಿ ನಿಶ್ಚೈಸಿ—"ವತ್ಸ! ಜ್ಯೋತಿಷ್ಕಮಂಡಲದಲ್ಲಿ ಭಾಸ್ಕರನು ಹೇಗೆ ಅತಿಶಯವಾದ ಪ್ರಭೆಯಿಂದ ಸರ್ವ ಶ್ರೇಷ್ಠನೆನಿಸಿಕೊಂಡಿರು ವನೋ ಹಾಗೆಯೇ ಜೀವ ಲೋಕದಲ್ಲಿ ತನ್ನ ತೇಜೋ ಬಲ ಪರಾಕ್ರಮ ಗಳಿಂದ ಶ್ರೀ ಕೃಷ್ಣನು ಸರ್ವ ಶ್ರೇಷ್ಠನೆನಿಸಿರುವನು; ಸೂರ್ಯಕಿರಣ ಗಳಿಂದ ಭೂಮಿಯು ಪ್ರಕಾಶಗೊಳ್ಳುವಂತೆ ಶ್ರೀ ಕೃಷ್ಣನ ಸಮಾಗಮ

ದಿಂದ ನಮ್ಮ ಸಭೆಯು ಬೆಳಗುತ್ತಿರುವುದು. ಆದುದರಿಂದ ಈ ಪುರುಷೋತ್ತಮನಿಗೆ ಅರ್ಘ್ಯಪ್ರದಾನ ಮಾಡುವುದು ಕರ್ತವ್ಯವು'' ಎಂದನು.

ಒಡನೆಯೇ ಯುಧಿಷ್ಠಿರನು ಶ್ರೀ ಕೃಷ್ಣನಿಗೆ ಅರ್ಘ್ಯಪ್ರದಾನ ಮಾಡಲು ನಿಶ್ಚಯಿಸಿದನು. ಭೀಷ್ಮನು ಸಹದೇವನನ್ನು ಕರೆದು ಶ್ರೀ ಕೃಷ್ಣನಿಗೆ ಯಥಾ ವಿಧಾನವಾಗಿ ಅರ್ಘ್ಯವನ್ನು ಅರ್ಪಿಸೆಂದು ಆಜ್ಞಾಪಿಸಿದನು. ಶ್ರೀ ಕೃಷ್ಣನೂ ಶಾಸ್ತ್ರೋಕ್ತವಾಗಿ ಅರ್ಘ್ಯವನ್ನು ಸ್ವೀಕರಿಸಿದನು. ದ್ವಾರಾವತಿಯ ರಾಜನಾದ ಶ್ರೀ ಕೃಷ್ಣನಿಗಾದ ಪೂಜಾ ಪುರಸ್ಕಾರಗಳನ್ನು ನೋಡಿ ಅಲ್ಲಿ ನೆರೆದಿದ್ದ ಕ್ಷತ್ರಿಯರೆಲ್ಲರೂ, ಅದರೊಳಗೂ ಚೇದಿ ರಾಜನಾದ ಶಿಶುಪಾಲನು, ಸಹಿಸಲಾರದೆ ಹೋದರು.

ಶಿಶುಪಾಲನು ಅಸೂಯಾಪರನಾಗಿ ಇಂತೆಂದು ನುಡಿದು ಎಲ್ಲರನ್ನೂ ಜರೆದನು—''ಅಗ್ರಪೂಜೆಗೆ ಅರ್ಹನಾರೆಂದು ಕೇಳಿದವನು ವಿಯೋನಿಜನು, ಹೇಳಿದವನು ನದೀಸುತನು, ಪ್ರತಿಗ್ರಹಿಸಿದವನು ಗೊಲ್ಲನು, ಅರ್ಪಿಸಿದವನೂ ವಿಯೋನಿಜನು. ಆದರೂ ಸದಸ್ಯರೆಲ್ಲರೂ ಮೂಕರಂತಿರುವರು. ನಾನು ಏನ ಹೇಳಲಿ? ಪಾಂಡವ! ಪೂಜ್ಯರಾದವರು ಇದ್ದೂ ಗೊಲ್ಲನನ್ನು ಪೂಜ್ಯನೆಂದೆಣಿಸಿದೆಯಲ್ಲ!'' ಎಂದು ನುಡಿದು, ಧರ್ಮರಾಯ ಭೀಷ್ಮ ಕೃಷ್ಣ ಸಹದೇವರನ್ನು ಅಲೆಗಳೆದು ತೃಪ್ತನಾಗದೆ, ''ಈ ಮಹಾತ್ಮರಾದ ಭೂಪತಿಗಳ ನಡುವೆ ಕೃಷ್ಣನು ರಾಜಭೋಗ್ಯವಾದ ಪೂಜೆಗೆ ಅರ್ಹನಲ್ಲ. ಪಾಂಡವರು ಯಾವುದೋ ಒಂದು ಪ್ರತ್ಯಾಶೆಯಿಂದ ದೇವಕೀಪುತ್ರನನ್ನು ಅರ್ಚಿಸಿದರು. ಅದು ಯುಕ್ತವಲ್ಲ. ಪಾಂಡವರೆ! ಧರ್ಮವು ಅತಿ ಸೂಕ್ಷ್ಮವಾದುದು; ನೀವು ಹುಡುಗರು, ಅರಿತವರಲ್ಲ; ಭೀಷ್ಮನು ವೃದ್ಧನು, ಆದರೂ ಅಲ್ಪ ಬುದ್ಧಿಯುಳ್ಳವನಾದುದರಿಂದ ಧರ್ಮವನ್ನು ಅತಿಕ್ರಮಿಸಿದನು. ಕೃಷ್ಣನು ರಾಜನಲ್ಲ. ಆದರೂ ರಾಜರ ಮಧ್ಯದಲ್ಲಿ ಅರ್ಹನಂತೆ ನೀವು ಅವನನ್ನು ಅರ್ಚಿಸಿದಿರಿ. ಕುರುಪುಂಗವ! ಕೃಷ್ಣನು ಹಿರಿಯನೆನ್ನುವಿರೋ? ಅವನ ಅಪ್ಪ ವೃದ್ಧ ವಸುದೇವನು ಇರುವಲ್ಲಿ ಅವನ ಮಗನು ಹೇಗೆ

ಮಾನ್ಯನಾಗುವನು ? ವಾಸುದೇವನು ನಿಮ್ಮ ಪ್ರಿಯವನ್ನು ಬಯಸು ವನು ಮತ್ತು ನಿಮ್ಮನ್ನು ಅನುವರ್ತಿಸುವನು ಎನ್ನುವಿರೋ ? ದ್ರುಪದ ರಾಯನಿರುವಲ್ಲಿ ಮಾಧವನು ಹೇಗೆ ಪೂಜೆಗೆ ಅರ್ಹನು ? ಕುರುನಂದನ! ಕೃಷ್ಣನು ಆಚಾರ್ಯನೆನ್ನುವಿರೋ ? ದ್ರೋಣಾಚಾರ್ಯನಿರಲಾಗಿ ವಾರ್ಷ್ಣೇಯನು ಹೇಗೆ ಪೂಜ್ಯನು? ಅವನು ಋತ್ವಿಜನೆನ್ನುವಿರೋ ? ವೃದ್ಧ ವ್ಯಾಸನಿರುವಲ್ಲಿ ಕೃಷ್ಣನನ್ನು ಅರ್ಚಿಸಿದುದಕ್ಕೆ ಕಾರಣವೇನು ? ಇನ್ನೂ ಪೂಜಾರ್ಹರಾದ ಭೀಷ್ಮ ಅಶ್ವತ್ಥಾಮ ಕೃಪಾಚಾರ್ಯ ದುರ್ಯೋಧನ ಕರ್ಣ ಪ್ರಭೃತಿಗಳು ಇರುವಲ್ಲಿ ಕೃಷ್ಣನು ಹೇಗೆ ಮಾನ್ಯನು? ಅವನು ಋತ್ವಿಜನಲ್ಲ, ಆಚಾರ್ಯನಲ್ಲ, ರಾಜನಲ್ಲ; ಅವನನ್ನು ಯಾವ ಆಸೆಯಿಂದ ಪೂಜಿಸಿದಿರಿ ? ಕೃಷ್ಣನೇ ಪೂಜ್ಯನೆಂದು ನೀವು ಭಾವಿಸುವ ಪಕ್ಷಕ್ಕೆ ನಮ್ಮನ್ನು ಅವಮಾನಪಡಿಸುವುದಕ್ಕೆ ಬರಮಾಡಿಸಿದಿರೋ ? ನಾವು ಭಯದಿಂದ ಕಾಣಿಕೆ ಕೊಟ್ಟವರಲ್ಲ, ಲೋಭದಿಂದಲ್ಲ, ನಿಮ್ಮ ಒಲುಮೆಯನ್ನು ಸಂಪಾದಿಸುವ ಆಸೆಯಿಂದಲೂ ಅಲ್ಲ ; ಧರ್ಮ ಪ್ರವೃತ್ತಿಯುಳ್ಳ ಯುಧಿಷ್ಠಿರನ ಧರ್ಮ ಪ್ರಭುತ್ವವನ್ನು ಬಯಸಿ ಕಾಣಿಕೆಯನ್ನು ಕೊಟ್ಟೆವು. ಅಂತಹ ನಮ್ಮನ್ನು ನೀವು ಮಾನ್ಯರೆನ್ನಲಿಲ್ಲ! ಈ ರಾಜ ಸಭೆಯಲ್ಲಿ ರಾಜ ಲಕ್ಷಣಗಳೊಂದೂ ಇಲ್ಲದ ಕೃಷ್ಣನಿಗೆ ನೀವು ಸನ್ಮಾನಮಾಡಿ ನಮಗೆ ಅವಮಾನಮಾಡಿಸಿದುದು ನ್ಯಾಯವೆ? ಇಂತಹ ಪೂಜೆಯನ್ನು ಧರ್ಮಭ್ರಷ್ಟನಿಗೆ ಮಾಡುವರುಂಟೆ ? ಧರ್ಮರಾಯನಿಗೆ ಧರ್ಮಾತ್ಮನೆಂಬ ಯಶಸ್ಸು ಹೇಗೆ ಬಂದಿತೋ ತಿಳಿಯದು. ಇಂದು ಧರ್ಮರಾಯನ ದೆಸೆಯಿಂದಲೇ ಧರ್ಮವು ಕಣ್ಮರೆಯಾಯಿತು. ಕೃಷ್ಣನಿಗೆ ಅಗ್ರಪೂಜೆಯನ್ನು ಮಾಡಿದಾಗಲೇ ನಿಮ್ಮೆಲ್ಲರ ಕೃಪಣತೆ ಹೊರಬಿದ್ದಿತು'' ಎಂದು ತನ್ನ ಆಕ್ರೋಶವನ್ನು ತೋರಿದನು.

ಈ ಪ್ರಕಾರವಾಗಿ ಮನಸ್ಸಿಗೆ ಬಂದಂತೆ ಪಾಂಡವರನ್ನು ಜರೆದು, ಆಮೇಲೆ ಕೃಷ್ಣನ ಮೇಲೆ ತಿರುಗಿ ಬಿದ್ದನು—'' ಮಾಧವ ! ಕುಂತಿಯ ಮಕ್ಕಳೇನೊ ಭೀತರು, ಕೃಪಣರು ; ನಿನ್ನ ಬುದ್ಧಿ ಎತ್ತಹೋಯಿತು ? ಈ ಪೂಜೆಗೆ ನೀನು ಅರ್ಹನಲ್ಲವೆಂಬುದನ್ನು ಅರಿಯೆಯಾ ? ಕೃಪಣರಾದ

ಇವರು ಪೂಜೆಮಾಡಬಂದರೆ ಅನರ್ಹನಾದ ನೀನು ಅದಕ್ಕೆ ಹೇಗೊಪ್ಪಿದೆ? ಈಗ ನಿಮ್ಮೆಲ್ಲರ ಸ್ವರೂಪವೂ ತಿಳಿಯಿತು! ಧರ್ಮ ರಾಯನು ಎಷ್ಟರವನೋ, ಭೀಷ್ಮನು ಎಷ್ಟರವನೋ, ವಾಸುದೇವನು ಎಷ್ಟರವನೋ, ಚೆನ್ನಾಗಿ ತಿಳಿಯಿತು'' ಈ ಬಗೆಯ ನಿಷ್ಠುರೋಕ್ತಿ ಗಳನ್ನಾಡಿ ಶಿಶುಪಾಲನು ತನ್ನ ಕಡೆಯವರಾದ ರಾಜರ ಸಮೇತನಾಗಿ ಹೊರಡಲು ಎದ್ದನು.

ಆಗ ಯುಧಿಷ್ಠಿರನು ಶಿಶುಪಾಲನ ಹತ್ತಿರ ಹೋಗಿ—''ರಾಜನೆ! ನೀನು ಇಂತಹ ಮಾತುಗಳನ್ನಾಡುವುದು ಸರಿಯಲ್ಲ. ನಿನ್ನ ಮಾತು ಗಳು ಅತಿಕಠಿನವು, ನಿರರ್ಥಕವು ಕೂಡ. ಭೀಷ್ಮನು ಅಧರ್ಮವನ್ನು ನುಡಿಯುವನಲ್ಲ. ನಿನಗಿಂತ ವೃದ್ಧರಾಗಿರುವರು ಕೂಡ ಕೃಷ್ಣನು ಪೂಜಾರ್ಹನೆನ್ನುವರು. ಅವರ ಮಾತನ್ನು ನೀನು ಕಳೆದುಹಾಕುವುದು ಯುಕ್ತವಲ್ಲ. ಚೇದಿಪತಿಯೇ! ಭೀಷ್ಮನು ಕೃಷ್ಣನನ್ನು ಚೆನ್ನಾಗಿ ಬಲ್ಲನು. ನೀನು ಅರಿಯೆ'' ಎಂದು ಮೃದು ಮಧುರ ವಚನಗಳಿಂದ ಶಿಶುಪಾಲನನ್ನು ಸಮಾಧಾನಗೊಳಿಸಲು ಯತ್ನಿಸಿದನು.

ಶಿಶುಪಾಲನು ಯುಧಿಷ್ಠಿರನ ನಯವಿನಯದಿಂದ ಶಾಂತನಾಗ ದಿರುವುದನ್ನು ಕಂಡು ಭೀಷ್ಮನು—''ವತ್ಸ! ಲೋಕ ಪೂಜಿತನಾದ ಶ್ರೀ ಕೃಷ್ಣನ ಪೂಜೆಯು ಯಾರಿಗೆ ಇಷ್ಟವಲ್ಲವೋ ಹಿತಕರವಾದ ಮಾತು ಗಳನ್ನಾಡಿದರೂ ಯಾರು ರೇಗುವರೋ ಅವರ ಕೂಡೆ ನಯದಿಂದ ಮಾತನಾಡುವುದರಿಂದೇನು ಪ್ರಯೋಜನ? ಅವರು ಅನುನಯಕ್ಕೆ ಯೋಗ್ಯರಲ್ಲ'' ಎಂದನು.

ತರುವಾಯ ಭೀಷ್ಮನು ಶಿಶುಪಾಲನ ಕಡೆಗೆ ತಿರುಗಿ—''ಚೇದಿ ರಾಜನೆ! ಈ ರಾಜಸಭೆಯಲ್ಲಿ ಶ್ರೀ ಕೃಷ್ಣನ ತೇಜೋಬಲಕ್ಕೆ ಸೋಲದ ರಾಜರಾರು? ಕೃಷ್ಣನನ್ನು ಪೂಜಿಸುವವರು ನಾವೊಬ್ಬರೇ ಅಲ್ಲ; ಮೂರು ಲೋಕಗಳೂ ಪೂಜಿಸುವುವು. ಆದುದರಿಂದಲೇ ಸಾಧುಗಳೂ ವೃದ್ಧರೂ ಇದ್ದರೂ ಕೂಡ ಅವರ ಮಧ್ಯದಲ್ಲಿ ನಾವು ಕೃಷ್ಣನನ್ನೇ ಅರ್ಚಿಸಿದೆವು. ಅದಕ್ಕೆ ನೀನು ಅಸೂಯೆಪಡುವುದು ಧರ್ಮವಲ್ಲ.

ನಾನು ಅನೇಕ ಜ್ಞಾನವೃದ್ಧರ ಸಂಗದಲ್ಲಿದ್ದು ಕೃಷ್ಣನ ಮಾಹಾತ್ಮ್ಯೆ ವನ್ನು ಕೇಳಿದ್ದೇನೆ. ಅವರೆಲ್ಲರೂ ಅವನನ್ನು ಸರ್ವಗುಣ ಸಂಪನ್ನ ನೆನ್ನುವರು. ನಾವು ಅವನನ್ನು ಯಾವ ಪ್ರತ್ಯಾಶೆಯಿಂದಲೂ ಪೂಜಿಸಿ ದವರಲ್ಲ. ಸಾಧುಗಳು ಯಾವನನ್ನು ಸರ್ವಭೂತಮಂಗಳಪ್ರದನೆಂದು ಅರ್ಚಿಸುವರೋ ಅವನನ್ನು ನಾವು ಅರ್ಚಿಸಿದೆವು. ಅವನು ಬಾಲ ನೇನೋ ಅಹುದು; ಆದರೆ ಅಪರೀಕ್ಷಿತನಲ್ಲ. ಗುಣದಲ್ಲಿ ವೃದ್ಧರನ್ನು ಮೀರಿಸಿರುವನು. ಅವನ ಯಶಸ್ಸನ್ನೂ ಶೌರ್ಯಾದಿ ಗುಣಗಳನ್ನೂ ಅರಿತೇ ನಾವು ಅವನನ್ನು ಪೂಜಿಸಿದೆವು. ಬ್ರಾಹ್ಮಣರಲ್ಲಿ ಜ್ಞಾನವೃದ್ಧನು ಅಧಿಕನೆನಿಸುವನು. ಕ್ಷತ್ರಿಯರಲ್ಲಿ ಬಲಾಢ್ಯನು ಅಧಿಕನೆನಿಸುವನು. ಕೃಷ್ಣನಾದರೋ ವೇದವೇದಾಂಗ ಜ್ಞಾನದಲ್ಲಿಯೂ ಬಲದಲ್ಲಿಯೂ ಅವರಿಬ್ಬರಿಗೂ ಅಧಿಕನಾಗಿರುವನು. ಕೃಷ್ಣನೇ ಆಚಾರ್ಯನು, ಅವನೇ ತಂದೆತಾಯಿ, ಋತ್ವಿಜನು, ರಾಜನು, ಪ್ರಿಯನು, ಸರ್ವವೂ ಅವನೇ ಎಂದು ನಾವು ಅವನಿಗೆ ಅರ್ಘ್ಯವನ್ನು ಕೊಟ್ಟು ಅವನನ್ನು ಸತ್ಕರಿಸಿದೆವು. ಶಿಶುಪಾಲ! ನೀನು ಇನ್ನೂ ಹುಡುಗ; ಕೃಷ್ಣನ ಮಹಿಮೆಯನ್ನು ಅರಿಯೆ. ಯಾರು ತಾನೆ ಅವನನ್ನು ಪೂಜಿಸರು? ಶಿಶುಪಾಲ! ಈ ಪೂಜೆಯು ಅಯುಕ್ತವೆಂದು ನೀನು ಭಾವಿಸಿದಲ್ಲಿ ನಿನ್ನ ಇಷ್ಟಬಂದಂತೆ ಮಾಡಿಕೊ'' ಎಂದು ಹೇಳಿ, ಅವನು ಇಷ್ಟವಿದ್ದರೆ ಇರಲಿ, ಇಲ್ಲ ವಾದರೆ ಹೋಗಲಿ ಎಂದು ಸೂಚಿಸಿದನು.

ಆಗ ಯುಧಿಷ್ಠಿರನ ಅಭಿಷೇಕವನ್ನೂ ಕೃಷ್ಣನ ಅರ್ಚನೆಯನ್ನೂ ನೋಡಿ ಸಹಿಸಲಾರದೆ ಈರ್ಷ್ಯಾಪರತಂತ್ರನಾದ ಶಿಶುಪಾಲನೂ ಅವನ ಪಕ್ಷವನ್ನು ವಹಿಸಿದ ರಾಜರೂ ಕೋಲಾಹಲವನ್ನು ಮಾಡತೊಡಗಿ ದರು. ಆ ರಾಜರು ರೋಷವೇರಿರುವುದನ್ನು ಯುಧಿಷ್ಠಿರನು ನೋಡಿ ಚಿಂತಿಸುತ್ತ, ಭೀಷ್ಮನನ್ನುದ್ದೇಶಿಸಿ—''ಪಿತಾಮಹನೇ! ಈ ನೃಪತಿಗಳು ರೋಷಾವಿಷ್ಟರಾಗಿರುವರು. ಯಜ್ಞಕ್ಕೆ ವಿಘ್ನಬಾರದಂತೆಯೂ ಪ್ರಜೆ ಗಳಿಗೆ ಹಿತವಾಗುವಂತೆಯೂ ಏನ ಮಾಡಬೇಕೊ ಹೇಳು'' ಎಂದು ಕೇಳಿದನು.

ಲೋಹಸಿರ್ಮಿತ ಹೃದಯನಾದ ಭೀಷ್ಮನು—"ಕುರು ಶಾರ್ದೂಲನೆ! ಭಯಪಡಬೇಡ. ಯಜ್ಞಕ್ಕೆ ಯಾವ ವಿಘ್ನವೂ ಬಾರದು. ಸಿಂಹವು ಸಿದ್ದೆ ಹೋಗುತ್ತಿರುವಾಗ ನಾಯಿಗಳು ಬೊಗಳುವುವು. ಕೃಷ್ಣನು ಸುಪ್ತಸಿಂಹದಂತೆ ಸುಮ್ಮನಿದ್ದಾನೆ. ದುಷ್ಟಬುದ್ಧಿಯುಳ್ಳ ಶಿಶುಪಾಲನಿಗೂ ಅವನ ಪಕ್ಷವನ್ನು ವಹಿಸಿರುವ ರಾಜರಿಗೂ ಇದು ವಿನಾಶಕಾಲ. ಅದಕ್ಕೆ ತಕ್ಕಂತೆ ಅವರ ಬುದ್ಧಿಯೂ ಕೆಟ್ಟಿದೆ. ಕೃಷ್ಣನೇ ಅವರಿಗೆ ತಕ್ಕ ಶಾಸ್ತಿಮಾಡುವನು" ಎಂದನು.

ಆ ಬಳಿಕ ಯುಧಿಷ್ಠಿರನು ಶ್ರೀ ಕೃಷ್ಣನ ಮಹಿಮೆಯನ್ನು ವಿಸ್ತಾರವಾಗಿ ಹೇಳೆಂದು ಭೀಷ್ಮನನ್ನು ಪ್ರಾರ್ಥಿಸಲು, ಭೀಷ್ಮನು ಆ ರಾಜಸಭೆಯಲ್ಲಿ ಕೃಷ್ಣನ ಮಾಹಾತ್ಮ್ಯವನ್ನು ನಿರೂಪಿಸಿದನು. ಸಹದೇವನು ಬ್ರಹ್ಮ ಕ್ಷತ್ರಿಯರೆಲ್ಲರನ್ನೂ ಸತ್ಕರಿಸಿ ಯಜ್ಞವನ್ನು ಸಮಾಪ್ತಿಮಾಡಿದನು.

ಆಗ ಶಿಶುಪಾಲನು ಅಲ್ಲಿ ನೆರೆದಿದ್ದ ರಾಜರನ್ನು ಸಂಬೋಧಿಸಿ—"ಎಲೈ, ರಾಜವರ್ಯರೇ! ನಮಗಾದ ಅವಮಾನವನ್ನು ತಾಳಿಕೊಂಡು ಸುಮ್ಮನಿರುವುದು ಯುಕ್ತವಲ್ಲ. ನಾನು ಸೇನಾಪತಿಯಾಗುವೆನು. ಯುದ್ಧಮಾಡೋಣ, ಏಳಿರಿ" ಎಂದು ಆ ರಾಜರನ್ನು ಉಬ್ಬಿಸಿದನು.

ತರುವಾಯ ಭೀಷ್ಮನ ಕಡೆಗೆ ತಿರುಗಿ, ಶಿಶುಪಾಲನು—"ಎಲೈ ಕುಲಕಳಂಕನೆ! ಪಾಂಡವರು ನಿನ್ನನ್ನು ಯಜಮಾನನ್ನಾಗಿಟ್ಟುಕೊಂಡು ನೀನು ಹೇಳಿದ ದಾರಿಯಲ್ಲಿ ಹೋಗುವುದು, ಕುರುಡರು ಕುರುಡರನ್ನು ಕೈಹಿಡಿದು ದಾರಿ ನಡೆಯುವಂತಿರುವುದು. ಕೃಷ್ಣನ ಬಾಲಲೀಲೆಗಳೆಲ್ಲವನ್ನೂ ಅದ್ಭುತ ಕಾರ್ಯಗಳನ್ನಾಗಿ ನೀನು ಕೊಂಡಾಡುತ್ತೀಯೆ. ಭೀಷ್ಮ! ನೀನು ಜ್ಞಾನವೃದ್ಧನಾದರೂ ಗೊಲ್ಲಹುಡುಗನ ನಿಂದಾರ್ಹವಾದ ಕಾರ್ಯಗಳನ್ನು ಕೂಡ ಹೊಗಳುತ್ತೀಯೆ. ಅವನು ಕಂಸನ ಅನ್ನವನ್ನುಂಡು ಬಲಿತು ಕಂಸನನ್ನೇ ಕೊಂದನು. ಮಹಾ ಬಲನಾದ ಜರಾಸಂಧನು ಕೃಷ್ಣನು ದಾಸನೆಂದು ಅವನ ಸಂಗಡ ಯುದ್ಧಮಾಡಲು ಹೇಸಿದನು. ಕೃಷ್ಣನೂ ಭೀಮಾರ್ಜುನರೂ ಅಂತಹ ಮಾನಾರ್ಹನನ್ನು

ಕೊಂಡರು. ಅದು ಸಾಧು ಕೃತ್ಯವೆ? ಎಷ್ಟು ಪುರಾಣಗಳನ್ನು ಓದಿದ ರೇನು? ಜನರು ಅವರವರ ಪ್ರಕೃತಿಯನ್ನೇ ಹಿಡಿದು ನಡೆಯುವರು. ನಿನ್ನ ಪ್ರಕೃತಿ ನೀಚವಾದುದು, ಸಂಶಯವಿಲ್ಲ. ನಿನ್ನ ಮಾತನ್ನು ಕೇಳಿ ಕೃಷ್ಣನನ್ನು ಪೂಜ್ಯನನ್ನಾಗೆಣಿಸಿದ ಆ ಪಾಂಡವರು ಎಂತಹ ಪಾಪಿಷ್ಠರು? ಭೀಷ್ಮ! ನೀನು ಧರ್ಮಜ್ಞನೆಂದು ನಾನು ಹೇಳೆನು. ವೃದ್ಧರ ಸೇವೆ ಯನ್ನು ಮಾಡಿ ಅವರಿಂದ ನೀನು ಧರ್ಮವನ್ನು ಕಲಿತವನಲ್ಲ. ನೀನು ಅನಪತ್ಯನು; ಮಿಥ್ಯಾಧರ್ಮವನ್ನು ಆಚರಿಸುವವನು. ಆದುದರಿಂದ ನಿನ್ನ ವ್ರತೋಪವಾಸಗಳೆಲ್ಲವೂ ವ್ಯರ್ಥ. ನಿನ್ನ ಜ್ಞಾತಿಗಳೇ ನಿನ್ನನ್ನು ಕೊಲ್ಲುವರು. ಸತ್ವಭಾವವುಳ್ಳ ಪಾಂಡವರು ಕೃಷ್ಣನ ದುಷ್ಕಾರ್ಯ ಗಳೆಲ್ಲವನ್ನೂ ಸಾಧು ಕಾರ್ಯಗಳೆಂದು ಭಾವಿಸುವುದು ಆಶ್ಚರ್ಯವಲ್ಲ. ನೀನು ಅವರಿಗೆ ಮಾರ್ಗಪ್ರದರ್ಶಕನು; ನಿನ್ನ ದುರ್ಬೋಧನೆಗೊಳಗಾಗಿ ಅವರು ಬುದ್ಧಿಗೆಟ್ಟಿರುವರು.''

ಈ ಪರುಷ ವಾಕ್ಯಗಳನ್ನು ಕೇಳಿ ಭೀಮಸೇನನು ರೋಷಾ ವಿಷ್ಟನಾಗಿ ಶಿಶುಪಾಲನ ಮೇಲೆ ಕೈಯೆತ್ತುವುದಕ್ಕೆ ಹೋಗಲು, ಭೀಷ್ಮನು ಅವನನ್ನು ತಡೆದನು. ಆಗ ಶಿಶುಪಾಲನು—''ಏಕೆ ತಡೆಯುತ್ತೀಯೆ? ಪತಂಗವು ಬೆಂಕಿಯಲ್ಲಿ ಬಿದ್ದು ಸಾಯುವಂತೆ ಭೀಮನು ನನ್ನ ಮೇಲೆ ಬಿದ್ದು ಸಾಯಲಿ'' ಎಂದನು.

ಶಿಶುಪಾಲನು ಹಾಗೆನ್ನುತ್ತಲೆ ಭೀಮನ ಕೋಪವು ಮತ್ತಷ್ಟು ಹೆಚ್ಚಲು, ಭೀಷ್ಮನು—''ಈ ಪಾಪಿಷ್ಠ ಶಿಶುಪಾಲನು ಮಂದಬುದ್ಧಿ. ಶ್ರೀ ಕೃಷ್ಣನೇ ಅವನಿಗೆ ಮೃತ್ಯುವಾಗಿರುವುದನ್ನು ಅವನು ಕಾಣನೆ? ನೀನು ಸುಮ್ಮನಿರು. ಇಂದಿನವರೆಗೆ, ಸಂಭಾವಿತರಾದ ರಾಜರಾರು ಕೂಡ ನನ್ನನ್ನು ಈ ರೀತಿ ದೂಷಿಸಲಿಲ್ಲ. ಆದರೂ ಚಿಂತೆಯಿಲ್ಲ. ನೀನು ತಾಳಿಕೊ'' ಎನ್ನಲು, ಭೀಮನು ಗುರು ವಾಕ್ಯವನ್ನು ಮೀರಲಾರದೆ ಸುಮ್ಮನಾದನು.

ಶಿಶುಪಾಲನು ಭೀಷ್ಮನಾಡಿದ ಮಾತನ್ನು ಸೈರಿಸಲಾರದೆ ರೇಗಿ— ''ಭೀಷ್ಮ! ನಾವೆಂತೂ ಕೃಷ್ಣನ ಪ್ರಭಾವವನ್ನು ಸೈರಿಸದವರು.

ನೀನೋ? ಅಪಸ ಬಂದಿಯು ಹಾಗೆ ಅವನನ್ನು ಜಡದೆ ಸ್ತೋತ್ರ ಮಾಡುತ್ತೀಯೆ. ಪರರನ್ನು ಸ್ತೋತ್ರಮಾಡುವುದೇ ನಿನ್ನ ಶೀಲವಾದ ಪಕ್ಷದಲ್ಲಿ ಕೃಷ್ಣನನ್ನು ಬಿಟ್ಟು ಈ ರಾಜರನ್ನು ಸ್ತೋತ್ರಮಾಡು; ರಾಜಶ್ರೇಷ್ಠನಾದ ಬಾಹ್ಲಿಕನನ್ನು ಸ್ತುತಿಸು. ಧನುರ್ವಿದ್ಯಾಕುಶಲನಾದ ಕರ್ಣನನ್ನು ಕೊಂಡಾಡು. ದ್ರೋಣ ಅಶ್ವತ್ಥಾಮರು ಕೋಪಿಸಿಕೊಂಡರೆ ಈ ಭೂಮಂಡಲವೆಲ್ಲವನ್ನೂ ಹುಟ್ಟುಗೆಡಿಸಬಲ್ಲರು. ಯುದ್ಧದಲ್ಲಿ ಯಾವ ನರಾಧಿಪರೂ ಇವರಿಗೆ ಸಮರೆನಿಸರು. ನೀನೇಕೆ ಈ ದ್ವಿಜೋತ್ತಮರನ್ನು ಹೊಗಳೆ? ಬಾಹು ಬಲಶಾಲಿಯಾದ ದುರ್ಯೋಧನನ್ನೇಕೆ ಶ್ಲಾಘಿಸೆ? ಭರತಾಚಾರ್ಯನೂ ವೃದ್ಧನೂ ಆದ ಕೃಪನನ್ನು ಹೊಗಳ ಬಾರದೇಕೆ? ವಿರಾಟ ದ್ರುಪದರಾಯರೂ, ಶಲ್ಯ ಶಕುನಿ ಮೊದಲಾದ ಭೂಪತಿಗಳು ಸಾಮಾನ್ಯರೇ? ಅವರೆಲ್ಲರನ್ನೂ ಬಿಟ್ಟು ಕೃಷ್ಣನನ್ನೇ ಏಕೆ ಪ್ರಶಂಸೆಮಾಡುತ್ತೀಯೆ? ಭೀಷ್ಮ! ಆತ್ಮನಿಂದೆ, ಆತ್ಮಸ್ತುತಿ, ಪರನಿಂದೆ, ಪರಸ್ತುತಿ–ಇವು ಮಾಡತಕ್ಕುವಲ್ಲವೆಂದು ನೀನು ಅರಿಯೆಯಾ? ಸ್ತೋತ್ರಾರ್ಹನಲ್ಲದ ಈ ಗೊಲ್ಲನನ್ನು ನೀನು ಮೋಹದಿಂದ ಹೊಗಳು ತ್ತಿದ್ದೀಯೆ, ಭಕ್ತಿಯಿಂದಲ್ಲ. ಇದನ್ನಾರೂ ಒಪ್ಪರು. ಭೀಷ್ಮ! ಅತಿ ಸಾಹಸಕ್ಕೆ ಹೋಗಬೇಡ. ನಿನ್ನ ಪ್ರಾಣವು ಈ ರಾಜರ ಇಚ್ಛಾಧೀನ ವೆಂದು ತಿಳಿ'' ಎಂದನು.

ಶಿಶುಪಾಲನ ಆ ಕಟುವಚನಗಳನ್ನು ಕೇಳುತ್ತಲೆ, ಭೀಷ್ಮನು— ''ಶಿಶುಪಾಲಾ! ಏನೆಂದೆ? ನನ್ನ ಪ್ರಾಣವು ಈ ರಾಜರ ಇಚ್ಛಾಧೀನವೆ? ಎಂದಿಗೂ ಅಲ್ಲ. ನನ್ನ ಪ್ರಾಣವು ನನ್ನಧೀನ. ಈ ನರಾಧಿಪರನ್ನು ನಾನು ತೃಣಕ್ಕೆ ಕಡೆಯಾಗೆಣಿಸುತ್ತೇನೆ, ಬಲ್ಲೆಯಾ?'' ಎಂದನು.

ಭೀಷ್ಮನು ಹೀಗೆಂದು ಸುಮ್ಮನಾಗುತ್ತಲೆ ಆ ರಾಜಸಭೆಯಲ್ಲಿ ಗದ್ದಲ ಹುಟ್ಟಿತು. ಶಿಶುಪಾಲನ ಕಡೆಯವರೆಲ್ಲರೂ ರೇಗಿಬಿದ್ದರು. ಕೆಲವರು ಭೀಷ್ಮನನ್ನು ಅಪಹಾಸ್ಯಮಾಡಿದರು; ಕೆಲವರು ದೂಷಿಸಿ ದರು; ಬಿಲ್ಲು ವಿದ್ಯೆಯಲ್ಲಿ ಸಮರ್ಥರಾದ ಕೆಲವರು ಪಾಪಿಷ್ಠನಾದ ಈ ವೃದ್ಧ ಭೀಷ್ಮನು ಕ್ಷಮೆಗೆ ಅರ್ಹನಲ್ಲವೆಂದರು; ಕೆಲವರು ಈ ದುರ್ಮತಿ

ಯನ್ನು ಪಶುವನ್ನಂತೆ ಕೊಲ್ಲಬೇಕೆಂದರು ; ಮತ್ತೆ ಕೆಲವರು ಅವನನ್ನು ಒಯ್ದು ಉರಿಯುವ ಬೆಂಕಿಯಲ್ಲಿ ಎತ್ತಿಹಾಕಬೇಕೆಂದರು.

ಮತಿವಂತನಾದ ವೃದ್ಧ ಪಿತಾಮಹನು ಅಪರಾಡಿದ ಮಾತು ಗಳನ್ನು ಕೇಳಿ—"ರಾಜರೇ! ನಿಮ್ಮ ಮಾತು ಕೊನೆಮುಟ್ಟುವಂತಿಲ್ಲ. ಏನೇನಾಡುತ್ತೀರೋ ಆಡಿರಿ, ಆದರೆ ನಾನು ಹೇಳುವುದೆಲ್ಲವನ್ನೂ ಕೇಳಿರಿ. ನೀವು ನನ್ನನ್ನು ಪಶುವನ್ನಂತೆ ಹೊಡೆದು ಹಾಕಿರಿ, ಬೆಂಕಿಯಲ್ಲಿ ಹಾಕಿ ಸುಡಿರಿ, ನೋಡೋಣ; ನನ್ನ ಕಾಲಿಂದ ನಿಮ್ಮ ತಲೆಯನ್ನು ಮೆಟ್ಟು ವೆನು. ನೋಡುವಿರಾ? ನಾವು ಪೂಜೆಮಾಡಿದ ಅಚ್ಯುತನು ಇಲ್ಲಿದ್ದಾನೆ. ಯಾರಾರು ಮರಣವನ್ನು ಬಯಸುವರೋ ಅವರೆಲ್ಲರೂ ಯುದ್ಧಕ್ಕೆ ಬರಲಿ" ಎಂದನು.

ಭೀಷ್ಮ ನಮಾತನ್ನು ಕೇಳಿ ಶಿಶುಪಾಲನು—"ಜನಾರ್ದನ! ಯುದ್ಧಕ್ಕೆ ಬಾ! ಈ ದಿನ ನಿನ್ನನ್ನೂ ಪಾಂಡವರನ್ನೂ ಕೊಲ್ಲದೆ ಬಿಡೆನು. ನೀವೆಲ್ಲರೂ ವಧಾರ್ಹರು. ನರಾಧಿಪರೆಲ್ಲರನ್ನೂ ಬಿಟ್ಟು ನೀನು ಅರ್ಚನೆ ಮಾಡಿಸಿಕೊಂಡೆ. ನೀನು ರಾಜನಲ್ಲ, ದಾಸನು. ಪೂಜೆಗೆ ಅನರ್ಹನಾದ ನಿನ್ನನ್ನು ಅರ್ಹನನ್ನಾಗೆಣಿಸಿ ಪಾಂಡವರು ಪೂಜಿಸಿದರು. ನೀವೆಲ್ಲರೂ ನಷ್ಟರೇ!" ಎಂದು ಹೇಳಿ, ತನ್ನ ಕಡೆಯ ರಾಜರ ಸಮೇತನಾಗಿ ಯುದ್ಧಕ್ಕೆ ಅಣಿಯಾದನು.

ಯುದ್ಧವು ಅನಿವಾರ್ಯವಾಗಲಾಗಿ ಕೃಷ್ಣನು ಚಕ್ರಗದಾಪಾಣಿ ಯಾಗಿ ಭೀಷ್ಮನು ಕೊಟ್ಟ ಕೈಯನ್ನು ಹಿಡಿದು ರಥವನ್ನೇರಿದನು ; ರಥ ದಲ್ಲಿ ಕುಳಿತು ಅಲ್ಲಿ ಯುದ್ಧಸನ್ನದ್ಧರಾಗಿ ನಿಂತಿದ್ದ ರಾಜರನ್ನು ಸಂಬೋ ಧಿಸಿ—"ರಾಜರೇ! ನನ್ನ ಮಾತನ್ನು ಕೇಳಿರಿ. ನಿಮಗೂ ನನಗೂ ವೈರಕ್ಕೆ ಕಾರಣವಿಲ್ಲ. ನೀವು ಸೇನಾಸಹಿತರಾಗಿ ಹೊರಟು ಹೋಗ ಬಹುದು. ಈ ಶಿಶುಪಾಲನು ನನಗೆ ಹಗೆಯಾಗಿ ಅನೇಕ ದುಷ್ಕೃತ್ಯ ಗಳನ್ನು ಮಾಡಿದ್ದಾನೆ. ಅವೆಲ್ಲವನ್ನೂ ಹೇಳಲಳವಲ್ಲ. ವಧಾರ್ಹವಾದ ಶತಾಪರಾಧಗಳನ್ನು ಕ್ಷಮಿಸುವೆನೆಂದು ಅವನ ತಾಯಿಗೆ ಮಾತು ಕೊಟ್ಟು ಅದರಂತೆಯೇ ಅವನನ್ನು ಕ್ಷಮಿಸಿದೆನು. ಇನ್ನು ಅವನನ್ನು ಮನ್ನಿಸಲಾರೆನು. ಅವನು ಯಜ್ಞಕ್ಕೆ ವಿಘ್ನಮಾಡಬೇಕೆಂದಿರುವ

ದಲ್ಲದೆ ನಾನು ಪಾಂಡವರ ಮೂಲಕವಾಗಿ ಧರ್ಮ ಸಂಸ್ಥಾಪನೆ ಮಾಡು ವುದಕ್ಕೂ ಅಡ್ಡಬರುವನಾಗಿದ್ದಾನೆ. ಈ ಎರಡು ಅಪರಾಧಗಳನ್ನು ನಾನೆಂದಿಗೂ ಮನ್ನಿಸೆನು; ಇದು ಅವನ ವಿನಾಶಕಾಲ. ಈ ದಿನ ನಿಮ್ಮೆಲ್ಲರ ಮುಂದೆ ಅವನು ಏನೇನೆಂದನೋ ನಿಮಗೆ ತಿಳಿದೇ ಇದೆ. ಈ ಸಮಗ್ರ ರಾಜಮಂಡಲಿಯಲ್ಲಿ ಬಲದೃಪ್ತನಾಗಿ ಅವನು ನಡೆದ ನಡೆತೆಗೆ ಅವನನ್ನು ದಂಡಿಸದೆ ಬಿಡೆನು'' ಎಂದನು.

ಆಗ ಕೃಷ್ಣನು ವರ್ಣಿಸಿದ ಶಿಶುಪಾಲನ ದುಷ್ಕೃತ್ಯಗಳನ್ನು ಕೇಳಿ ಅವನ ಪಕ್ಷವನ್ನು ವಹಿಸಿದ್ದ ರಾಜರೆಲ್ಲರೂ ಅವನನ್ನು ಬಿಟ್ಟು ರಥವನ್ನೇರಿ ಹೊರಟುಹೋದರು. ಶಿಶುಪಾಲನೊಬ್ಬನೇ ಉಳಿದು ಬಾಣಗಳನ್ನು ಹಿಡಿದು ಕೃಷ್ಣನ ಸಂಗಡ ದ್ವೈರಥ್ಯ ಯುದ್ಧಕ್ಕೆ ನಿಂತನು. ಕೃಷ್ಣನೂ ಧನುರ್ಧರನಾಗಿ ಯುದ್ಧಕ್ಕೆ ಅಣಿಯಾದನು. ಯುದ್ಧ ವಾರಂಭವಾಯಿತು.

ಶಿಶುಪಾಲನು—''ಕೃಷ್ಣ ನೀನೊಬ್ಬನೇ ನನ್ನ ಶತ್ರು. ಈ ಹೊತ್ತು ನಿನ್ನನ್ನೂ ಪಾಂಡವರನ್ನೂ ಅವರ ಮಕ್ಕಳನ್ನೂ ಅಮಾತ್ಯರನ್ನೂ ಕೊಂದು, ಕಂಸ ಜರಾಸಂಧ ಪ್ರಭೃತಿಗಳ ಋಣವನ್ನು ತೀರಿಸುವೆನು'' ಎಂದು ನುಡಿದನು.

ಇಬ್ಬರೂ ಶರವರ್ಷವನ್ನು ಕರೆದರು. ಕಡೆಗೆ ಶಿಶುಪಾಲನು ಕೃಷ್ಣ ನಿಂದ ಹತನಾದನು. ಯುಧಿಷ್ಠಿರನು ತಮ್ಮಂದಿರ ಮೂಲಕವಾಗಿ ಶಿಶುಪಾಲನ ಉತ್ತರ ಕ್ರಿಯೆಗಳನ್ನು ಮಾಡಿಸಿ ಅವನ ಸ್ಥಾನದಲ್ಲಿ ಅವನ ಮಗನಿಗೆ ಪಟ್ಟವನ್ನು ಕಟ್ಟಿದನು.

ಈ ಪ್ರಕಾರವಾಗಿ ಪಾಪನಿವಾರಣೆಯನ್ನೂ ಧರ್ಮರಕ್ಷಣೆಯನ್ನೂ ಕೈಕೊಂಡಿದ್ದ ಶ್ರೀ ಕೃಷ್ಣನು, ಹಿಂದೆ ಅನೇಕ ರಾಜರನ್ನು ಸೆರೆಯಲ್ಲಿಟ್ಟು ಲೋಕಕಂಟಕನಾಗಿ ಮೆರೆಯುತ್ತಿದ್ದ ಜರಾಸಂಧನಿಗೆ ಎಷ್ಟು ಬಗೆಯಲ್ಲಿ ಬುದ್ಧಿ ಹೇಳಿದರೂ ತನ್ನ ಅತ್ಯಾಚಾರವನ್ನು ಬಿಡದೆ ಹೋದುದರಿಂದ ಲೋಕ ಹಿತಾರ್ಥವಾಗಿ ಅವನನ್ನು ಸಂಹಾರಮಾಡಿ ಸೆರೆಯಲ್ಲಿದ್ದ ರಾಜ ರೆಲ್ಲರನ್ನು ಬಿಡಿಸಿದಂತೆಯೇ, ಈಗ ಶಿಶುಪಾಲನು ತನ್ನನ್ನು ಆಡಬಾರದ

ಮಾತುಗಳನ್ನಾಡಿದರೂ, ಅವನ ದುರ್ಭಾಷೆಯೆಲ್ಲವನ್ನೂ ಸೈರಿಸಿಕೊಂಡು ಅವನ ಅಪರಾಧಗಳೆಲ್ಲವನ್ನೂ ಕ್ಷಮಿಸಿ ತನಗೆ ಶತ್ರುವೆಂದು ವೈರವನ್ನು ಸಾಧಿಸದೆ ಸುಮ್ಮನಿದ್ದು, ಯಾವಾಗ ಅವನು ಯಜ್ಞಕ್ಕೆ ಬಂದ ರಾಜರೆಲ್ಲರನ್ನೂ ಎತ್ತಿಕಟ್ಟಿ ಯಜ್ಞಕ್ಕೆ ವಿಘ್ನಮಾಡಿ, ಧರ್ಮಸಾಮ್ರಾಜ್ಯವನ್ನು ನೆಲೆಗೊಳಿಸಲು ಅಡ್ಡ ಬಂದನೋ ಆಗ, ಅವನನ್ನು ಸಂಹಾರ ಮಾಡಿದನು; ಹಿಂದೆ ಜರಾಸಂಧನನ್ನು ನಿಗ್ರಹಿಸಿ ಅವನ ಮಗ ಸಹದೇವನಿಗೆ ರಾಜ್ಯವನ್ನು ಕೊಟ್ಟು ಪಟ್ಟವನ್ನು ಕಟ್ಟಿದಂತೆಯೇ ಈಗ ಶಿಶುಪಾಲನನ್ನು ನಿಗ್ರಹಿಸಿ ಅವನ ಮಗನಿಗೆ ಪಟ್ಟವನ್ನು ಕಟ್ಟಿಸಿದನು.

ಯುಧಿಷ್ಠಿರನ ಧರ್ಮಾನುರಾಗ, ಅರ್ಜುನನ ಧೈರ್ಯ, ಭೀಮಸೇನನ ಪರಾಕ್ರಮ, ನಕುಲನ ಶುದ್ಧಭಾವ, ಸಹದೇವನ ಗುರುಶುಶ್ರೂಷೆ, ಶ್ರೀ ಕೃಷ್ಣನ ಧರ್ಮಾಯತ್ತವಾದ ತೇಜೋಬಲ, ಭೀಷ್ಮನ ಯುಕ್ತಾಯುಕ್ತ ಜ್ಞಾನ—ಇವೇ ಮೊದಲಾದ ಸಾಧನಗಳಿಂದ ಯಜ್ಞವು ಸರ್ವಾಂಗ ಸಂಪೂರ್ಣವಾಗಿ ನೆರವೇರಿತು.

ಯಜ್ಞಾಂತದಲ್ಲಿ ರಾಜರೆಲ್ಲರೂ ಸಸಾಗರ ಪೃಥ್ವಿಯ ಸಮ್ರಾಜನಾದ ಯುಧಿಷ್ಠಿರನಿಗೆ ಸಮುಚಿತ ಸನ್ಮಾನವನ್ನು ಮಾಡಿದರು. ಈ ಬಗೆಯಾಗಿ ರಾಜಮಂಡಲಿಯಲ್ಲಿ ಯುಧಿಷ್ಠಿರನ ಪ್ರಾಧಾನ್ಯವು ಸ್ಥಾಪಿತವಾಯಿತು. ಆ ರಾಜಕುಮಾರನು ಸಾಮ್ರಾಜ್ಯದಲ್ಲಿ ಪ್ರತಿಷ್ಠಿತನಾದುದನ್ನು ನೋಡಿ ಭೀಷ್ಮನು ಅತಿಶಯವಾಗಿ ಹರ್ಷಗೊಂಡನು. ಕೃಷ್ಣನ ಆಹ್ಲಾದಕ್ಕೆ ಪಾರವಿಲ್ಲವಾಯಿತು. ಪೂರ್ವಕಾಲದ ವೃತ್ತಾಂತವನ್ನರಿತ ವೃದ್ಧರು ಇಂತಹ ಸಮೃದ್ಧಿಪೂರ್ಣವಾದ, ಇಂತಹ ಸರ್ವಾಂಗ ಸಂಪನ್ನವಾದ, ಇಂತಹ ಸಂಭ್ರಮ ಸಮೇತವಾದ ಯಜ್ಞವನ್ನು ತಾವು ಎಂದೂ ಕಂಡುದಿಲ್ಲವೆಂದು ಹೇಳಿಕೊಂಡರು. ಈ ಯಜ್ಞವನ್ನು ಮಾಡಿ ಯುಧಿಷ್ಠಿರನು ಸಾರ್ವಭೌಮತ್ವವನ್ನು ಸಂಪಾದಿಸಿದುದು ಸರ್ವಾಂಶದಲ್ಲಿಯೂ ನ್ಯಾಯಸಮ್ಮತವಾದುದೆಂದು ಎಲ್ಲರೂ ತಮ್ಮ ತಮ್ಮೊಳಗೆ ಮಾತನಾಡಿಕೊಂಡರು. ಯಜ್ಞವು ಪರಿಸಮಾಪ್ತವಾದ ಬಳಿಕ, ಬಂದವರೆಲ್ಲರೂ ತಮಗಾದ ಪರಿಚರ್ಯದಿಂದ ಸಂತುಷ್ಟರಾಗಿ ಧನಮಾನ

ಗಳಿಂದ ಸಂಪೂಜಿತರಾಗಿ, ಯುಧಿಷ್ಠಿರನನ್ನು ಬೀಳ್ಕೊಂಡು ತಂತಮ್ಮ ಊರಿಗೆ ಹೊರಟರು. ಯುಧಿಷ್ಠಿರನ ಆಜ್ಞಾನುಸಾರವಾಗಿ ಅವನ ಅನುಚರರು ಅವರನ್ನು ತಮ್ಮ ಅಧಿಕಾರದ ಎಲ್ಲೆಯವರೆಗೆ ಸಾಗಕಳುಹಿಸಿ ರಾಜಧಾನಿಗೆ ಹಿಂದಿರುಗಿದರು.

ರಾಜರೂ ಬ್ರಾಹ್ಮಣರೂ ಆದಿಯಾಗಿ ಎಲ್ಲರೂ ಹೊರಟು ಹೋದ ತರುವಾಯ ಭೀಷ್ಮನು ಯುಧಿಷ್ಠಿರನನ್ನು ಸಂಬೋಧಿಸಿ ಇಂತೆಂದನು :– "ವತ್ಸ! ಯಜ್ಞವು ನಿರ್ವಿಘ್ನವಾಗಿ ನಡೆಯಿತು. ನಾನು ಧನ್ಯನಾದೆನು. ನೀನು ಸಾಗರಾಂತ ಪೃಥ್ವಿಯನ್ನು ಸಂಪಾದಿಸಿ ಸಾರ್ವಭೌಮಪದವಿಗೆ ಬಂದುನಿಂತೆ. ಅಪತ್ಯ ನಿರ್ವಿಶೇಷದಿಂದ ಪ್ರಜೆಗಳನ್ನು ಪಾಲಿಸುತ್ತ, ಧರ್ಮದಿಂದ ಸಾಮ್ರಾಜ್ಯವನ್ನಾಳುತ್ತ, ಭೂಲೋಕದಲ್ಲಿ ಧರ್ಮರಾಜನೆಂದು ಖ್ಯಾತನಾಗು. ನಿನ್ನ ಅಭ್ಯುದಯವನ್ನೂ ಏಸಯವನ್ನೂ ನೋಡಿ ನಾನು ಪರಮಾನಂದಭರಿತನಾದೆನು. ವಾಸುದೇವನ ಅನುಗ್ರಹದಿಂದ ನಿನಗೆ ಉತ್ತರೋತ್ತರಾಭಿವೃದ್ಧಿಯಾಗಲಿ. ನಿನ್ನ ಸಾಮರ್ಥ್ಯದಿಂದಲೂ ಧರ್ಮನಿಷ್ಠೆಯಿಂದಲೂ ನಮ್ಮ ಪವಿತ್ರ ಕುಲದ ಕೀರ್ತಿಯು ಬೆಳಗುತ್ತಿರಲಿ."

ಆ ಬಳಿಕ ಭೀಷ್ಮನು ಧೃತರಾಷ್ಟ್ರನೊಡನೆ ಹಸ್ತಿನಾಪುರಕ್ಕೆ ಪ್ರಯಾಣೋನ್ಮುಖನಾದನು. ಶ್ರೀ ಕೃಷ್ಣನು ದ್ವಾರಕಿಗೆ ಹೊರಟನು. ದುರ್ಯೋಧನನು ಸೋದರಮಾವನಾದ ಶಕುನಿಯ ಸಮೇತನಾಗಿ ರಮಣೀಯವಾದ ಯುಧಿಷ್ಠಿರನ ಸಭಾಮಂದಿರದಲ್ಲಿಯೇ ಕೆಲವು ದಿವಸಗಳು ವಾಸಮಾಡುತ್ತ ಆ ರಾಜಾಧಿರಾಜನ ವೈಭವವನ್ನೂ ಸೌಭಾಗ್ಯವನ್ನೂ ನೋಡುತ್ತಿದ್ದು ಹಸ್ತಿನಾಪುರಕ್ಕೆ ಹಿಂದಿರುಗಿ ದಾರಿಯುದ್ದಕ್ಕೂ ಆ ರಾಜಭವನದ ಸೊಬಗನ್ನೂ ಜ್ಞಾತಿಯ ಸಂಪತ್ತನ್ನೂ ನೆನೆನೆನೆದು ಮರುಗುತ್ತ ಊರಿಗೆ ಹೋಗಿ ಸೇರಿದನು.

———

# ಒಂಬತ್ತನೆಯ ಅಧ್ಯಾಯ

## ದ್ಯೂತ, ದ್ರೌಪದಿಯ ಮಾನಭಂಗ, ವನವಾಸ.

ಧರ್ಮರಾಯನು ಪಡೆದ ಮಹೋನ್ನತಿಯನ್ನೂ ಸೌಭಾಗ್ಯವನ್ನೂ ನೆನೆದು ಸಹಿಸಲಾರದೆ ದುರ್ಯೋಧನನು ಅಸೂಯಾಪರನಾಗಿ ಖಾಂಡವ ಪ್ರಸ್ಥದಲ್ಲಿ ಅವನು ತನಗೆ ತೋರಿದ ಪ್ರೀತಿಯನ್ನೂ ಸೋದರ ಭಾವ ವನ್ನೂ ಮರೆತು, ತನ್ನವನೆಂದು ವಿಶ್ವಾಸವಿಟ್ಟು ಯಜ್ಞಾಂಗಗಳಾದ ಕಾರ್ಯಗಳಲ್ಲಿ ತನಗೂ ಒಂದು ಕಾರ್ಯವನ್ನು ಕೊಟ್ಟು ಗೌರವಿಸಿದುದನ್ನು ಲೆಕ್ಕಿಸದೆ, ತಾನು ಅವನಿಗೆ ಕೀಳಾದೆನೆಂದು ದುಃಖಪಡುತ್ತ ತನ್ನ ದುರಾಸೆಯನ್ನು ಶಕುನಿಯೊಡನೆ ಹೇಳಿಕೊಂಡು ಧರ್ಮರಾಯನ ಸಾಮ್ರಾಜ್ಯವನ್ನು ಹೊತ್ತುಹಾಕುವ ಬಗೆ ಏನೆಂದು ಅವನನ್ನು ಕೇಳಿದನು.

ಅದಕ್ಕೆ ಆ ಮಾಯಾವಿಯು ಭೀಮಾರ್ಜುನರನ್ನು ಯುದ್ಧದಲ್ಲಿ ಗೆಲ್ಲಲಸಾಧ್ಯವೆಂದು ಹೇಳಿ, ಧರ್ಮರಾಯನನ್ನು ನೆತ್ತವಾಡುವುದಕ್ಕೆ ಕರೆಯಿಸಿದರೆ ಅವನನ್ನು ಸೋಲಿಸಿ ಅವನ ದೇಶ ಕೋಶಗಳೆಲ್ಲವನ್ನೂ ಗೆದ್ದುಕೊಡುವೆನೆಂದು ಆಸೆ ಹುಟ್ಟಿಸಿ ದುರ್ಯೋಧನನನ್ನು ದ್ಯೂತಕ್ಕೆ ಪ್ರೋತ್ಸಾಹಪಡಿಸಿದನು.

ಆ ದುಷ್ಟ ಮಂತ್ರಿಯ ಮಾತನ್ನು ಕೇಳಿ ದುರ್ಯೋಧನನು ದ್ಯೂತವಾಡುವುದಕ್ಕೆ ಇಂದ್ರಪ್ರಸ್ಥದಿಂದ ಧರ್ಮರಾಯನನ್ನು ಕರೆಯಿಸೆಂದು ತಂದೆಯನ್ನು ಪೀಡಿಸಿದನು.

ದ್ಯೂತದ ದೆಸೆಯಿಂದ ಅಣ್ಣ ತಮ್ಮಂದಿರೊಳಗೆ ಕಲಹವು ಹುಟ್ಟು ವುದಲ್ಲದೆ ಕುಲವೇ ನಾಶವಾಗುವುದೆಂದು ವಿದುರನು ತಂದೆ ಮಕ್ಕಳಿಬ್ಬ ರಿಗೂ ಹೇಳಿದರೂ, ತಂದೆಯೂ ಮಗನಿಗೆ ತದರ್ಥವನ್ನೇ ಎಷ್ಟೋ ಬಗೆಯಲ್ಲಿ ಉಪದೇಶಮಾಡಿದರೂ, ಅಸೂಯೆಯಿಂದ ಪೀಡಿತನಾದ ದುರ್ಯೋಧನನು ಕುಮಂತ್ರಿ ಶಕುನಿಯ ಜೆಂಬಲವನ್ನು ಕಟ್ಟಿಕೊಂಡು

ತನ್ನ ದುರಾಲೋಚನೆಯನ್ನು ಬಿಡಲಿಲ್ಲ. ಧರ್ಮಜ್ಞನಾದರೂ ಪುತ್ರ ಸ್ನೇಹದಿಂದ ಮಗನ ಮಾತನ್ನು ತೆಗೆದುಹಾಕಲು ಧೃತರಾಷ್ಟ್ರನಿಗೆ ಶಕ್ಯವಾಗಲಿಲ್ಲ. ಧರ್ಮಾತ್ಮರೂ ಉಭಯಕುಲ ಹಿತಚಿಂತಕರೂ ಆದ ಭೀಷ್ಮ ದ್ರೋಣ ಕೃಪಾಚಾರ್ಯರಿಗೆ ಸಕಾಲಕ್ಕೆ ಶಕುನಿ ದುರ್ಯೋಧನರ ಕುಹಕೋಪಾಯವು ತಿಳಿಯಲಿಲ್ಲ. ಆದುದರಿಂದ ದ್ಯೂತವು ನಡೆಯಲೇ ಬೇಕಾಯಿತು.

ಇಷ್ಟವಿಲ್ಲದಿದ್ದರೂ ವಿದುರನು ಧೃತರಾಷ್ಟ್ರನ ಆಜ್ಞಾನುಸಾರ ವಾಗಿ ಧರ್ಮರಾಯನನ್ನು ಕರೆಯುವುದಕ್ಕೆ ಇಂದ್ರಪ್ರಸ್ಥಕ್ಕೆ ಹೋಗಿ ತಾನು ಬಂದ ಕಾರ್ಯವನ್ನು ಧರ್ಮರಾಯನಿಗೆ ತಿಳಿಸಿದನು.

"ದ್ಯೂತವು ಅನರ್ಥಕ್ಕೆ ಮೂಲವು; ನೀನು ನಮ್ಮ ಹಿತಚಿಂತಕ; ನಾವು ನೀನು ಹೇಳಿದ ಹಾಗೆ ಕೇಳುವವರು; ನಿನ್ನ ಅಭಿಪ್ರಾಯ ವೇನು?" ಎಂದು ಧರ್ಮರಾಯನು ವಿದುರನನ್ನು ಕೇಳಿದನು.

ವಿದುರನು—"ದ್ಯೂತವು ಅನರ್ಥಮೂಲವೆಂಬುದನ್ನು ನಾನು ಬಲ್ಲೆನು. ಅದನ್ನು ಆಗಲಿಸಬಾರದೆಂದು ನಾನು ಪ್ರಯತ್ನ ಮಾಡಿದೆನು. ನನ್ನ ಪ್ರಯತ್ನವು ನಡೆಯಲಿಲ್ಲ. ನಿನಗೆ ಯುಕ್ತವಾಗಿ ತೋರಿದಂತೆ ಮಾಡು" ಎಂದನು.

ಧರ್ಮರಾಯ—"ನನಗೆ ಜೂಜಾಡುವುದಕ್ಕೆ ಇಷ್ಟವಿಲ್ಲ. ಅದರೊಳಗೂ ಶಕುನಿ ಮೊದಲಾದ ಮಾಯಾವಿಗಳ ಸಂಗಡ ಆಡುವುದಕ್ಕೆ ಸರ್ವಾತ್ಮನಾ ಇಷ್ಟವಿಲ್ಲ. ಅವರು ಕರೆಯದೆ ಇದ್ದಿದ್ದರೆ ನಾನಾಗಿ ಆಟಕ್ಕೆ ಹೋಗುತ್ತಿರಲಿಲ್ಲ. ಕರೆದಮೇಲೆ ಹೋಗದಿರುವುದು ಹೇಗೆ?" ಎಂದನು.

ಇಂತೆಂದು ಹೇಳಿ, ಹಿರಿಯನಾದ ಧೃತರಾಷ್ಟ್ರನ ಆಜ್ಞೆಯನ್ನು ಮೀರುವುದು ಸರಿಯಲ್ಲನೆಂದು ದ್ರೌಪದಿಯನ್ನೂ ತಮ್ಮಂದಿರನ್ನೂ ಅನುಚರರನ್ನೂ ಕೂಡಿ, ದೇವರಮೇಲೆ ಭಾರಹಾಕಿ ಹಸ್ತಿನಾಪುರಕ್ಕೆ ಪಯಣವಾಡಿದನು.

ಪಾಂಡವರು ಹಸ್ತಿನಾಪುರಕ್ಕೆ ಬಂದಿಳಿದಬಳಿಕ ಶಕುನಿಯು ಧರ್ಮರಾಯನನ್ನು ದ್ಯೂತ ಸಭೆಗೆ ಕರೆಯುವುದಕ್ಕೆ ಹೋಗಲು, ಧರ್ಮರಾಯನು—"ಶಕುನಿ! ಜೂಜಾಡುವುದು ಪರಾಕ್ರಮಶಾಲಿಗಳಾದ ಕ್ಷತ್ರಿಯರಿಗೆ ಯೋಗ್ಯವಲ್ಲ ; ಧರ್ಮ ಯುದ್ಧದಲ್ಲಿ ಗೆಲ್ಲುವುದು ಸತ್ಪುರುಷರಿಗೆ ಅರ್ಹವಾದುದು. ಸುಖವನ್ನಾಗಲಿ ಧನವನ್ನಾಗಲಿ ಮೋಸದಿಂದ ಸಂಪಾದಿಸಲು ನನಗಿಷ್ಟವಿಲ್ಲ" ಎಂದನು.

ಅದಕ್ಕೆ ಶಕುನಿಯು—"ಮೋಸವಿಲ್ಲದೆ ಯಾವುದು ತಾನೆ ನಡೆಯುವುದು? ವಿದ್ವಾಂಸನು ವಿದ್ವಾಂಸನಲ್ಲದವನನ್ನು ಗೆಲ್ಲುವನು; ಅದು ಮೋಸವಲ್ಲವೋ? ಅಸ್ತ್ರವುಳ್ಳವನು ಅಸ್ತ್ರವಿಲ್ಲದವನನ್ನು ಗೆಲ್ಲುವನು ; ಅದು ಮೋಸವಲ್ಲವೋ? ಪ್ರಬಲನು ದುರ್ಬಲನನ್ನು ಗೆಲ್ಲುವನು ; ಜನರು ಅದನ್ನೇಕೆ ಮೋಸವೆನ್ನುವುದಿಲ್ಲ? ಜೂಜಬಲ್ಲವನು ಜೂಜರಿಯದವನನ್ನು ಗೆಲ್ಲುವನು. ಯಾವುದರಲ್ಲಿ ತಾನೆ ಮೋಸವಿಲ್ಲ? ನಾನು ನಿನ್ನನ್ನು ಮೋಸದಿಂದ ಗೆಲ್ಲುವೆನೆಂದು ನೀನು ಹೆದರುವ ಪಕ್ಷಕ್ಕೆ ಸುಮ್ಮನೆ ಮನೆಗೆ ಹೋಗು" ಎಂದನು.

ಧರ್ಮರಾಯನು ಆ ಮಾತನ್ನು ಕೇಳಿ—"ಶಕುನಿ! ದ್ಯೂತವಾಡಲು ನನಗೆ ಮನಸ್ಸಿಲ್ಲ; ಕರೆದರೆ ಆಡುವುದೇ ನನ್ನ ವಾಡಿಕೆ; ನಡೆ, ಹೋಗೋಣ" ಎಂದನು.

ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ಅನೇಕ ರಾಜರು ದ್ಯೂತ ಸಭೆಯನ್ನು ಪ್ರವೇಶಮಾಡಿದರು. ಭೀಷ್ಮ ದ್ರೋಣ ಕೃಪ ವಿದುರರು ಇಷ್ಟವಿಲ್ಲದವರಾದರೂ ಧೃತರಾಷ್ಟ್ರನ ಹಿಂದೆ ಸಭೆಗೆ ಹೋದರು. ದುರ್ಯೋಧನನೂ ಶಕುನಿಯೂ ಪಂತವೊಡ್ಡಿದರು. ಆಟವು ಪ್ರಾರಂಭವಾಯಿತು. ಧರ್ಮರಾಯನು ತನ್ನ ಧನ ಕನಕ ರತ್ನ ರಾಶಿಗಳೆಲ್ಲವನ್ನೂ ಒಂದೊಂದನ್ನಾಗಿ ಸೋಲುತ್ತಾ ಹೋದನು ; ಚತುರನಾದ ಶಕುನಿಯು ಮೋಸಮಾಡಿ ಮಾಡಿ ಗೆಲ್ಲುತ್ತ ಹೋದನು.

ಹೀಗೆ ದ್ಯೂತವು ನಡೆಯುತ್ತಿರಲು ವಿದುರನು ಏನಾದರೂ ಮಾಡಿ ಅದನ್ನು ನಿಲ್ಲಿಸಬೇಕೆಂದಾಲೋಚಿಸಿ—"ಮಹಾರಾಜನೇ!

ದುರ್ಯೋಧನನು ಭರತ ಕುಲವನ್ನು ಮುರಿಯುವುದಕ್ಕೆ ಹುಟ್ಟಿದ್ದಾನೆ. ಅವನು ನಿಮ್ಮೆಲ್ಲರಿಗೂ ಮೃತ್ಯುವೆಂದು ತಿಳಿ. ಕೌರವರು ಸುಖವಾಗಿರಬೇಕೆನ್ನುವ ಪಕ್ಷಕ್ಕೆ ಅರ್ಜುನನು ಈ ಪಾಪಿಯನ್ನು ಕೊಲ್ಲಲಿ. ಆ ಮನೆಹಾಳನು ದ್ಯೂತದಲ್ಲಿ ಗೆಲ್ಲುತ್ತಿರುವುದನ್ನು ಕೇಳಿ ನೀನು ಹಿಗ್ಗುತ್ತಿದ್ದೀಯೆ. ಕೇಳು, ಅವನ ಜಯವೇ ಯುದ್ಧಕ್ಕೂ ಕುರುಕುಲ ವಿನಾಶಕ್ಕೂ ಮೂಲವಾಗುವುದು. ಭೀಮಾರ್ಜುನರು ರೇಗಿಬಿದ್ದರೆ ನೀವು ಬಾಳಲಾರಿರಿ. ಮಹಾರಾಜ! ಜೂಜಾಡಿ ಧನವನ್ನು ಸಂಪಾದಿಸಬೇಕೆ? ಬೇರೆ ದಾರಿಯಿಲ್ಲವೆ? ಪಾಂಡವರ ಭಾಗ್ಯದಿಂದ ನಿಮಗೇನಾಗಬೇಕು? ಅವರು ಹೆಚ್ಚೋ? ಅವರ ಭಾಗ್ಯವು ಹೆಚ್ಚೋ? ಅವರ ಭಾಗ್ಯಕ್ಕೆ ಆಸೆಬಿದ್ದು ಅವರ ವೈರವನ್ನು ಕಟ್ಟಿಕೊಳ್ಳಬೇಡಿರಿ. ದುಷ್ಟ ಶಕುನಿಯನ್ನು ತೊಲಗಿಸು'' ಎಂದು ಬುದ್ಧಿ ಹೇಳಿದನು.

ಅದನ್ನು ಕೇಳಿ ಮೂರ್ಖ ದುರ್ಯೋಧನನು, ತನ್ನ ದುರ್ವ್ಯಾಪಾರಕ್ಕೆ ವಿದುರನು ಅಡ್ಡಬರುತ್ತಿರುವನೆಂದು ಮುನಿದು—''ವಿದುರ! ನಿನಗೇಕೆ ಈ ಮಾತು? ನೀನು ಯಾವಾಗಲೂ ನಮ್ಮನ್ನು ದೂಷಿಸಿ ನಮ್ಮ ಹಗೆಗಳನ್ನು ಭೂಷಿಸುತ್ತೀಯೆ. ನಿನ್ನ ಅಂತರಂಗವನ್ನು ನಾನು ಬಲ್ಲೆನು. ನಮ್ಮ ಅನ್ನವನ್ನುಂಡು ನಮಗೆ ಎರಡು ಬಗೆಯುತ್ತೀಯೆ. ಸ್ವಾಮಿದ್ರೋಹಕ್ಕೆ ಮಿಂಚಿದ ಪಾಪವುಂಟೆ? ಹುಡುಗರನ್ನು ಕಾಣುವಂತೆ ನಮ್ಮನ್ನು ಕಾಣುತ್ತೀಯೆ; ಇದು ಸರಿಯೆ? ನೀನು ನಮ್ಮನ್ನು ಬೈಯ್ಯುವುದೇಕೆ? ನಮ್ಮ ಗುಟ್ಟುಗಳೆಲ್ಲವನ್ನೂ ಹೊರಗೆ ಹಾಕುವುದೇಕೆ? ನಿನ್ನನ್ನು ಕರೆದವರಾರು? ನಿನ್ನ ಹಿತೋಪದೇಶವನ್ನು ಕೇಳಿದವರಾರು? ಇನ್ನು ನಮ್ಮನ್ನು ರೇಗಿಸಬೇಡ; ನೀನು ನಮ್ಮ ಶತ್ರುಗಳ ಮಿತ್ರನು; ಇಲ್ಲಿಂದ ತೊಲಗು'' ಎಂದನು.

''ಮಹಾರಾಜ! ರಾಜರ ಮನಸ್ಸು ಸ್ಥಿರವಲ್ಲ; ಮೊದಲು ಆಶ್ರಯವನ್ನು ಕೊಟ್ಟು ಆಮೇಲೆ ಆಶ್ರಿತರನ್ನು ಬಸಿಕೆಯಿಂದ ಬಡಿಯುವರು. ದುರ್ಯೋಧನ! ಮೂರ್ಖರನ್ನು ಮಾರ್ಗಕ್ಕೆ ತರುವುದು ಸದರವಲ್ಲ; ಪ್ರಿಯವನ್ನು ನುಡಿಯುವ ಪಾಪಿಷ್ಠರು ದೊರೆಯುವರು; ಅಪ್ರಿಯವಾದರೂ ಚಿಂತೆಯಿಲ್ಲವೆಂದು ಹಿತವನ್ನು ನುಡಿಯುವವರು

ದುರ್ಲಭ. ದುರ್ಯೋಧನ! ಅಪ್ರಿಯವಾಗಿದ್ದರೂ ಚಿಂತೆಯಿಲ್ಲ, ಹಿತವನ್ನು ಹೇಳುವವರ ಮಾತನ್ನು ಕೇಳು. ಮಹಾರಾಜನೆ! ದ್ಯೂತವನ್ನು ಇಲ್ಲಿಗೆ ನಿಲ್ಲಿಸು ; ಪಾಂಡವರನ್ನು ರೇಗಿಸಬೇಡ'' ಎಂದು ವಿದುರನು ಹೇಳಿದನು.

ದ್ಯೂತವನ್ನು ನಿಲ್ಲಿಸಬೇಕೆಂದು ವಿದುರನು ಮಾಡಿದ ಸಾಹಸವೆಲ್ಲವೂ ವ್ಯರ್ಥವಾಯಿತು. ಶಕುನಿಯು ಯುಧಿಷ್ಠಿರನ ಪಿತ್ತವೆಲ್ಲವನ್ನೂ ಗೆಲ್ಲುತ್ತ ಗೆಲ್ಲುತ್ತ ಇನ್ನೇನಿದೆ? ಇನ್ನೇನು ಉಳಿದಿದೆ? ಎಂದು ಅಡಿಗಡಿಗೆ ಯುಧಿಷ್ಠಿರನನ್ನು ಕೇಳುತ್ತಿದ್ದನು. ಯುಧಿಷ್ಠಿರನ ಸಕಲ ಸಂಪತ್ತೂ ಕರಗಿತು. ದೇಶ ಹೋಯಿತು, ಕೋಶ ಹೋಯಿತು, ಧನ ಕನಕ ವಸ್ತುಗಳೆಲ್ಲವೂ ಹೋದುವು; ಆನೆ ಕುದುರೆಗಳೂ, ದನಕರುಗಳೂ, ಹೋದುವು. ಆ ಬಳಿಕ ಯುಧಿಷ್ಠಿರನು ತಮ್ಮಂದಿರನ್ನು ಒಬ್ಬೊಬ್ಬರನ್ನಾಗಿ ಸೋತು ಪರಾಧೀನರನ್ನಾಗಿ ಮಾಡಿದನು. ಕಡೆಗೆ ತನ್ನನ್ನೇ ಪಂತಕ್ಕೊಡ್ಡಿಕೊಂಡು ಪರತಂತ್ರನಾದನು. ಆದರೂ ದ್ಯೂತವು ಕೊನೆಮುಟ್ಟಲಿಲ್ಲ. ಇನ್ನೇನು? ಎಂಬ ಶಕುನಿಯ ಸೊಲ್ಲು ಅಡಗಲಿಲ್ಲ. ಕಟ್ಟಕಡೆಗೆ ಯುಧಿಷ್ಠಿರನು ಮಾನಿಷ್ಠೆ ದ್ರೌಪದಿಯನ್ನೂ ಪಂತಕ್ಕೊಡ್ಡಿದನು ; ಧರ್ಮ ಕಾಮಾರ್ಥಗಳ ಸಿದ್ಧಿಗಾಗಿ ಸತ್ಪುರುಷನು ಎಂತಹ ಸ್ತ್ರೀಯನ್ನು ಬಯಸುವನೋ, ಅಂತಹ ಸರ್ವಗುಣಸಂಪನ್ನೆಯೂ ಅನುಕೂಲೆಯೂ ಪ್ರಿಯಂವದೆಯೂ ಆದ ಆ ರಾಜಮಹಿಷಿಯನ್ನೂ ವೈರಿಯ ಪಾಲು ಮಾಡಿದನು. ಸಭಾಸದರೆಲ್ಲರೂ ನಿಟ್ಟುಸಿರು ಬಿಟ್ಟರು ; ಭೀಷ್ಮ ದ್ರೋಣ ಕೃಪರ ಮೈ ಬೆವರಿತು; ವಿದುರನು ದುಃಖದಿಂದ ತಲೆಬಾಗಿ ಕುಳಿತನು.

ಶಕುನಿಯು ''ಗೆದ್ದೆನು'' ಎನ್ನುತ್ತಲೆ, ದುರ್ಯೋಧನನು ''ವಿದುರ! ಹೋಗು, ದ್ರೌಪದಿಯನ್ನು ಕರೆದುಕೊಂಡು ಬಾ; ಮನೆಯಲ್ಲಿ ಕಸ ಗುಡಿಸಿಕೊಂಡು ಬಿದ್ದಿರಲಿ'' ಎಂದನು.

ವಿದುರನು—''ಎಲೋ! ಪಾಪಿಷ್ಠನೆ! ಹೆಮ್ಮೆಯ ಮಾತನ್ನಾಡಬೇಡ. ದ್ರೌಪದಿಯು ನಿಮ್ಮ ದಾಸಿಯಲ್ಲ. ಧರ್ಮರಾಯನು ಯಾವಾಗ ತನ್ನನ್ನೇ ಸೋತನೋ, ಯಾವಾಗ ತನ್ನ ದೇಹವನ್ನೇ ಮಾರಿ

ಕೊಂಡನೋ, ಆಗಲೆ ಅವನ ಸ್ವಾತಂತ್ರ್ಯವೂ ಹೋಯಿತು ; ದ್ರೌಪದಿಯ ಮೇಲೆ ಅವನ ಯಾಜಮಾನ್ಯವೂ ಹೋಯಿತು ; ದ್ರೌಪದಿಯನ್ನು ಪಂತ ಕ್ಕೊಡ್ಡುವುದಕ್ಕೆ ಅವನಾರು ?'' ಎಂದನು.

ದುರಾತ್ಮ ದುರ್ಯೋಧನನು—'' ಸೂತ ! ಅವನು ಕೆಟ್ಟ ; ನೀನು ಹೋಗಿ ದ್ರೌಪದಿಯನ್ನು ಸೆಳೆದುಕೊಂಡು ಬಾ'' ಎಂದನು.

ಸೂತನು ಹೋಗಿ ನಡೆದ ಸಂಗತಿಗಳೆಲ್ಲವನ್ನೂ ತಿಳಿಸಿ ದ್ರೌಪದಿ ಯನ್ನು ಬರಹೇಳುತ್ತಲೆ ಅವಳು—'' ಸೂತ! ಏನೆಂದೆ? ಆ ಜೂದಾ ಳಿಯು ನನ್ನನ್ನು ಸೋತಾಗ ಯಾರಿಗೆ ಒಡೆಯನಾಗಿದ್ದನು ? ಮೊದಲು ಯಾರನ್ನು ಸೋತನು? ತನ್ನನ್ನೋ ನನ್ನನ್ನೋ? ಯುಧಿಷ್ಠಿರ ನನ್ನೂ ಸಭಿಕರನ್ನೂ ಕೇಳಿ ಬಾ, ಹೋಗು'' ಎಂದಳು.

ಸೂತನು ಹೋಗಿ ಆ ಪ್ರಶ್ನೆಯನ್ನು ಕೇಳಿದುದಕ್ಕೆ ಯುಧಿ ಷ್ಠಿರನು ಉಸಿರೆತ್ತಲಿಲ್ಲ; ಸಭಿಕರೂ ಮೌನವಾಗಿದ್ದರು. ದ್ರೌಪದಿಯೇ ಬಂದು ಸಭಿಕರಿಗೆ ಆ ಪ್ರಶ್ನೆಯನ್ನು ಹಾಕಲೆಂದು ದುರ್ಯೋಧನನು ಹೇಳಿದನು. ದುಃಶಾಸನನು ಅಣ್ಣನ ಆಜ್ಞಾನುಸಾರವಾಗಿ ಹೋಗಿ ಬಹಿಷ್ಠೆಯಾಗಿದ್ದ ದ್ರೌಪದಿಯನ್ನು ಮುಂದಲೆಹಿಡಿದು ಬಲಾತ್ಕಾರದಿಂದ ಸೆಳೆದುಕೊಂಡುಬಂದು ಸಭಿಕರ ಮುಂದೆ ನಿಲ್ಲಿಸಿದನು.

ಮಾನಿಷ್ಠೆ ದ್ರೌಪದಿ ಆ ಅವಮಾನವನ್ನು ಸೈರಿಸಲಾರದೆ— ''ಎಲೋ! ದುಃಶಾಸನ! ಪಾಪಿ! ಈ ಸಭೆಯಲ್ಲಿ ಶಾಸ್ತ್ರಜ್ಞರೂ, ಸದಾಚಾರ ಸಂಪನ್ನರೂ, ವೀರ ಪುರುಷರೂ ನೆರೆದಿರುವರು. ಇವರೆಲ್ಲರೂ ನನಗೆ ಹಿರಿಯರು, ಪೂಜ್ಯರು. ಇದು ನನಗೆ ಗುರುಸ್ಥಾನ. ಇವರ ಮುಂದೆ ನಾನು ಹೇಗೆ ನಿಲ್ಲಲಿ? ನನ್ನನ್ನೆಳೆಯಬೇಡ, ಜೋಕೆ! ಇಂದ್ರಾದಿ ದೇವತೆ ಗಳು ನಿನಗೆ ನೆರವಾಗಿ ಬಂದು ನಿಂತರೂ ನನ್ನ ಗಂಡಂದಿರು ನಿನ್ನನ್ನು ಸುಮ್ಮನೆ ಬಿಡರು'' ಎಂದು ದುಃಶಾಸನನ್ನು ಧಿಕ್ಕರಿಸಿ—'' ಭರತ ವಂಶದ ಧರ್ಮವು ನಾಶವಾಯಿತು ! ಭೀಷ್ಮ ದ್ರೋಣ ವಿದುರಾದಿಗಳ ಪೌರುಷವು ನಷ್ಟವಾಯಿತು. ಇಲ್ಲದಿದ್ದರೆ, ಈ ಕುರುವೃದ್ಧರೆಲ್ಲರೂ ಈ ಅನ್ಯಾಯ ವನ್ನು ನೋಡಿಕೊಂಡು ಸುಮ್ಮನಿರುತ್ತಿದ್ದರೆ?'' ಎಂದು ಪ್ರಲಾಪಿ

ನುತ್ತ ಲಜ್ಜೆಯಿಂದಲೂ ಕೋಪದಿಂದಲೂ ಗಂಡಂದಿರ ಕಡೆಗೆ ತಿರುಗಿ ನೋಡಿದಳು.

ದೇಶ ಹೋಯಿತು, ಕೋಶ ಹೋಯಿತು, ತಾವೂ ಪರಾಧೀನರಾದರು ; ಆದರೂ ಪಾಂಡುಪುತ್ರರು ಎದೆಗೆಡಲಿಲ್ಲ. ಯಾವಾಗ ಪತಿವ್ರತೆಯಾದ ದ್ರೌಪದಿಯು ಶೋಕಾಕುಲೆಯಾಗಿ ಅಳುತ್ತ ತಮ್ಮ ಕಡೆಗೆ ತಿರುಗಿದಳೋ ಆಗ ಆ ರಾಜಪುತ್ರರು ದುಃಖಾಕ್ರಾಂತರಾದರು. ದುಷ್ಟ ದುಃಶಾಸನನು ಆ ವೀರೇಂದ್ರಾಣಿಯನ್ನು ಮಾತು ಮಾತಿಗೂ ದಾಸಿಯೆಂದು ಕರೆಯುತ್ತಾ ಅವಳ ಸೆರಗನ್ನು ಹಿಡಿದೆಳೆಯುತ್ತಿದ್ದನು. ಅದನ್ನು ನೋಡಿ ಕಠಿನ ಹೃದಯರಾದ ದುರ್ಯೋಧನ ಶಕುನಿ ಕರ್ಣ ಪ್ರಭೃತಿಗಳು ಕೇಕೆಹಾಕಿದರು! ಉಳಿದವರೆಲ್ಲರೂ ದ್ರೌಪದಿಯ ಪಾಡನ್ನು ನೋಡಿ ದುಃಖಿಸುತ್ತ, ಆ ದುರಾತ್ಮರನ್ನು ಶಪಿಸಿದರು.

ಇದೆಲ್ಲವನ್ನೂ ನೋಡಿ ಭೀಷ್ಮನು— "ಸುಭಗೆ! ಧರ್ಮವು ಬಹು ಸೂಕ್ಷ್ಮವಾದುದು. ಒಂದು ಕಡೆ, ಯಜಮಾನನಲ್ಲದವನಿಗೆ—ಒಡೆಯನಲ್ಲದವನಿಗೆ–ತನ್ನದಲ್ಲದುದನ್ನು ಪಂತಕ್ಕೊಡ್ಡಲು ಅಧಿಕಾರವಿಲ್ಲ, ಇನ್ನೊಂದು ಕಡೆ, ಹೆಂಗಸರು ಗಂಡಂದಿರ ವಶದಲ್ಲಿರತಕ್ಕವರು, ಅವರ ಅಧೀನರು, ಹೀಗಿರುವಲ್ಲಿ, ಯಥಾವತ್ತಾಗಿ ನಿನ್ನ ಪ್ರಶ್ನೆಯನ್ನು ವಿವೇಚನೆ ಮಾಡಿಹೇಳಲು ನನಗೆ ತೋರದು. ಯುಧಿಷ್ಠಿರನಾದರೋ ಸಮೃದ್ಧಿಸಂಪನ್ನವಾದ ಪೃಥ್ವಿಯೆಲ್ಲವನ್ನೂ ಬಿಟ್ಟುಕೊಡಬಲ್ಲನು, ಧರ್ಮವನ್ನು ಬಿಡುವನಲ್ಲ ಅಂತಹವನು 'ಜಿತೋಸ್ಮಿ, ನಾನು ಸೋತೆನು' ಎಂದು ಒಪ್ಪಿಕೊಂಡಿರುವಲ್ಲಿ ನಿನ್ನ ಪ್ರಶ್ನೆಗೆ ನಾನೇನು ಉತ್ತರಕೊಡಲಿ? ಜೂಜಾಡುವುದರಲ್ಲಿ ಶಕುನಿಯು ಅದ್ವಿತೀಯನು ; ಯುಧಿಷ್ಠಿರನು ಅವನಿಗೆ ಮರುಳಾದನು ; ಆದುದರಿಂದ, ನಾನು ನಿನ್ನ ಪ್ರಶ್ನೆಗೆ ಉತ್ತರ ಹೇಳಲಾರೆನು" ಎಂದನು.

ಅದಕ್ಕೆ ದ್ರೌಪದಿಯು—" ಚತುರರೂ ದುಷ್ಟಾತ್ಮರೂ ಅಯೋಗ್ಯರೂ ದ್ಯೂತ ಪ್ರಿಯರೂ ಆದ ಶಕುನಿ ಮೊದಲಾದವರು ಕಪಟವನ್ನರಿಯದ ಧರ್ಮರಾಯನನ್ನು ಕಪಟೋಪಾಯದಿಂದ ದ್ಯೂತಕ್ಕೆಳೆದು ಸೋಲಿಸಿದರು. ಧರ್ಮರಾಯನು ಮೊದಲು ತನ್ನನ್ನು ಸೋತನು.

ಆಮೇಲೆ ನನ್ನನ್ನು ಪಂತಕ್ಕೊಟ್ಟಿದ್ದನು. ಈ ಸಭೆಯಲ್ಲಿರುವ ಕೌರವರು ತಮ್ಮ ಮಕ್ಕಳಿಗೆ ಹೇಗೊ ಹಾಗೆಯೇ ಸೊಸೆಯರಿಗೂ ಯಜಮಾನರು. ಸೊಸೆಯಾದ ನಾನು ಹೇಳಿದುದನ್ನು ಆಲೋಚಿಸಿ ನನ್ನ ಪ್ರಶ್ನೆಗೆ ನ್ಯಾಯವಾದ ಉತ್ತರವನ್ನು ಕೊಡುವುದು ಅವರ ಕೆಲಸ. ವೃದ್ಧರಿಲ್ಲದ ಸಭೆ ಸಭೆಯಲ್ಲ; ಧರ್ಮವನ್ನು ನುಡಿಯದವರು ವೃದ್ಧರಲ್ಲ; ಸತ್ಯವಲ್ಲದುದು ಧರ್ಮವಲ್ಲ; ಕಪಟದಿಂದ ಹೇಳಿದುದು ಸತ್ಯವಲ್ಲ'' ಎಂದಳು.

ದ್ರೌಪದಿಯು ಈ ರೀತಿಯಲ್ಲಿ ದುಃಖದಿಂದ ಸಭಿಕರ ಮುಂದೆ ದೀನೆಯಾಗಿ ಮೊರೆಯಿಡುತ್ತಿರುವುದನ್ನು ನೋಡಿ ದುಃಶಾಸನನು ಕೇಳಲಸಹ್ಯವಾದ, ಆಡಬಾರದ ಪರುಷ ವಾಕ್ಯಗಳನ್ನಾಡುತ್ತ ಸೆರಗನ್ನೆಳೆಯುತ್ತ ದ್ರೌಪದಿಯನ್ನು ಕಾಡುತ್ತಿದ್ದನು. ಅದನ್ನು ನೋಡಿ ಭೀಮನು ಸುಮ್ಮನಿದ್ದ ಅಣ್ಣನ ಮೇಲೆ ರೇಗಿಬಿದ್ದನು; ಅರ್ಜುನನು ಅವನನ್ನು ಸಮಾಧಾನಗೊಳಿಸಿದನು. ತರುವಾಯ, ದುಃಶಾಸನನು ದ್ರೌಪದಿಯ ವಸ್ತ್ರಾಪಹರಣಮಾಡಲು ತೊಡಗಿದನು. ಆಗ ದ್ರೌಪದಿಯು ಮತ್ತೆ ಇಂತೆಂದು ಸಭಿಕರಿಗೆ ಮೊರೆಯಿಟ್ಟಳು:—

"ಅಯ್ಯೋ! ಗಾಳಿಯೂ ಕೂಡ ನೋಕದಹಾಗೆ ನನ್ನನ್ನು ಅರಮನೆಯಲ್ಲಿ ಸಲಹುತ್ತಿದ್ದ ಈ ಪಾಂಡುಪುತ್ರರು ಇಂದು ಈ ದುರಾತ್ಮನು ನನ್ನನ್ನು ಪೀಡಿಸುತ್ತಿರುವುದನ್ನು ನೋಡಿಕೊಂಡು ಸುಮ್ಮನಿರುವರಲ್ಲ! ಎಂತಹ ಹೊತ್ತು ಬಂದಿತು? ಹಿಂದೆ ರಾಜರು ಅಂತಃಪುರದಿಂದ ಸ್ತ್ರೀಯರನ್ನು ಸಭೆಗೆ ಕರೆಯಿಸುತ್ತಿರಲಿಲ್ಲ; ಇಂದು ಕೌರವರಿಂದ ಆ ಸನಾತನ ಧರ್ಮವು ಹಾಳಾಯಿತು. ಪಾಂಡವರ ಪತ್ನಿ, ಧೃಷ್ಟದ್ಯುಮ್ನನ ತಂಗಿ, ವಾಸುದೇವನ ಸಖಿ—ನಾನು ದಾಸಿಯೇ? ಕೌರವರೇ; ನನ್ನನ್ನು ಈ ಸಭೆಗೆಳೆದಿರಲ್ಲ! ನಾನು ಧರ್ಮರಾಯನ ಧರ್ಮಪತ್ನಿ, ಅವನಂತೆಯೇ ಕ್ಷತ್ರಿಯ ವಂಶದಲ್ಲಿ ಹುಟ್ಟಿದವಳು; ನಾನು ದಾಸಿಯೇ? ಅಹುದಾದರೆ ಅಹುದೆನ್ನಿ; ಅಲ್ಲವಾದರೆ ಅಲ್ಲವೆನ್ನಿ; ನೀವು ಹೇಳಿದಂತೆಯೇ ಆಗಲಿ, ಅವರು ನನ್ನನ್ನು ಗೆದ್ದರೆ? ಗೆಲ್ಲಲಿಲ್ಲವೆ? ಹೇಳಿರಿ, ಈ ಪಾಪಿಷ್ಠನು ನನ್ನನ್ನು ಗೋಳಾಡಿಸುತ್ತಿದ್ದಾನೆ; ನಾನು ಎಷ್ಟೆಂದು ಸೈರಿಸಲಿ?"

ಅವಳಾಡಿದ ಮಾತನ್ನು ಕೇಳಿ ಭೀಷ್ಮನು ಇಂತೆಂದನು:— "ಎಲೌ, ಕಲ್ಯಾಣಿಯೆ! ಮಹಾತ್ಮರಾದ ಜ್ಞಾನಿಗಳಿಗೂ ಧರ್ಮ ಗತಿಯು ತಿಳಿಯಲು ಶಕ್ಯವಲ್ಲ; ನೀನು ಕೇಳುವ ವಿಷಯವು ಸೂಕ್ಷ್ಮ ವಾದುದು, ಗಹನವಾದುದು; ನಿನ್ನ ಈ ಪ್ರಶ್ನೆಗೆ ಹೀಗೇ ಸರಿಯೆಂದು ನಿಶ್ಚಯಿಸಿ ನಾನು ಉತ್ತರಕೊಡಲಾರೆನು. ಆದರೆ, ಇಷ್ಟುಮಟ್ಟಿಗೆ ಹೇಳಬಲ್ಲೆನು. ಕೌರವರು ಲೋಭಕ್ಕೂ ಮೋಹಕ್ಕೂ ಒಳಗಾಗಿರು ವುದರಿಂದ ಅವರ ವಿನಾಶಕಾಲವು ದೂರವಾಗಿಲ್ಲ; ನೀನು ಸೊಸೆಯಾಗಿ ಸೇರಿರುವ ಕುಲವು ಎಂತಹ ಸಂಕಟದಲ್ಲಿಯೂ ಧರ್ಮಮಾರ್ಗವನ್ನು ಬಿಡುವುದಲ್ಲ; ನಿನಗೆ ಈ ಪಾಡುಬಂದರೂ ನೀನು ಧರ್ಮದಮೇಲೆಯೇ ದೃಷ್ಟಿಯಿಟ್ಟಿದ್ದೀಯೆ; ಈ ನಡತೆಯು ನಿನಗೆ ಸಲ್ಲುವುದು; ನಿನ್ನ ಪ್ರಶ್ನೆಗೆ ಉತ್ತರವನ್ನು ಕೊಡುವುದಕ್ಕೆ ಯುಧಿಷ್ಠಿರನೊಬ್ಬನೇ ಅಧಿಕಾರಿ; ನಿನ್ನನ್ನು ಅವರು ಗೆದ್ದರೋ ಇಲ್ಲವೋ ಎಂಬುವುದನ್ನು ಹೇಳುವುದಕ್ಕೆ ಅವನೇ ತಕ್ಕವನು."

ದುರ್ಯೋಧನನು ಯುಧಿಷ್ಠಿರಾದಿಗಳನ್ನೂ ದ್ರೌಪದಿಯನ್ನೂ ಮನಸ್ಸು ಬಂದಂತೆಲ್ಲ ಹೀಯಾಳಿಸುತ್ತ ಹೋದನು. ಭೀಮನು ರೋಷಾ ವೇಶವನ್ನು ಹೊಂದಿ ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ನಿರ್ನಾಮ ಮಾಡಿ ಬಿಡುವೆನೆಂದು ಪ್ರತಿಜ್ಞೆಮಾಡಿದನು. ಆಗ ಭೀಷ್ಮ ದ್ರೋಣ ವಿದುರರು—"ನೀನು ಅವರನ್ನು ಸಂಹಾರಮಾಡತಕ್ಕವನೇ ಸರಿ; ಸದರ ಜೇಡ; ತಾಳಿಕೊ" ಎಂದು ಹೇಳಿ ಅವನ ಕೋಪವನ್ನಾರಿಸಿದರು.

ದ್ರೌಪದಿಯ ಪ್ರಶ್ನೆಯನ್ನು ಕುರಿತ ವಿವಾದವೂ ಪರಸ್ಪರ ದೋಷಾ ರೋಪವೂ ಕೊನೆಮುಟ್ಟದೆ ನಡೆಯುತ್ತಿರಲು, ವಿದುರನು—"ಯುಧಿ ಷ್ಠಿರನು ತನ್ನನ್ನು ಸೋಲುವುದಕ್ಕೆ ಮುಂಚೆಯೇ ದ್ರೌಪದಿಯನ್ನು ಸೋತಿದ್ದ ಪಕ್ಷದಲ್ಲಿ ಅವನು ಅವಳಿಗೆ ಒಡೆಯನೆನಿಸಿಕೊಳ್ಳುತ್ತಿದ್ದನು. ತನ್ನನ್ನು ತಾನು ಕಳೆದುಕೊಂಡಮೇಲೆ ಅವನು ಯಾರಿಗೆ ಒಡೆಯನು? ಅವನು ಒಡೆಯನಲ್ಲದಮೇಲೆ ಅವನಿಂದ ಗೆದ್ದೊಡವೆಯಂದರೆ ಕನಸಿನ ಗಂಟಲ್ಲವೆ? ಶಕುನಿಯ ಮಾತನ್ನು ಕೇಳಿ ಅನ್ಯಾಯಕ್ಕೆ ಹೋಗ ಬೇಡಿರಿ" ಎಂದನು.

ಆ ಮಾತನ್ನು ಕೇಳಿ ದುರ್ಯೋಧನನು—"ಭೀಮಾರ್ಜುನರೂ ನಕುಲ ಸಹದೇವರೂ ತಮಗೆ ಯುಧಿಷ್ಠಿರನು ಒಡೆಯನಲ್ಲವೆಂದು ಹೇಳಿ ಬಿಡಲಿ; ದ್ರೌಪದಿಯನ್ನು ದಾಸತ್ವದಿಂದ ಬಿಡುಗಡೆ ಮಾಡುತ್ತೇನೆ" ಎಂದನು.

ಅದಕ್ಕೆ ಅರ್ಜುನನು—"ದ್ಯೂತಕ್ಕೆ ಮುಂದೆ, ಅವನು ರಾಜನು, ಕುಂತೀ ಸುತನು, ಧರ್ಮರಾಯನು, ಮಹಾತ್ಮನು, ನಮ್ಮೊಡೆಯನು; ಸೋತಮೇಲೆ ಅವನು ಯಾರೊಡೆಯನು?" ಎಂದು ಕೇಳಿದನು.

ಆ ಬಳಿಕ ಕರ್ಣನಿಂದ ಪ್ರೇರಿತನಾಗಿ ದುಃಶಾಸನನು ದ್ರೌಪದಿಯನ್ನು ಬಲತ್ಕಾರಮಾಡಿ ಎಳೆದುಕೊಂಡು ಹೋಗುವುದಕ್ಕೆ ಪ್ರಯತ್ನ ಮಾಡಲು, ದ್ರೌಪದಿಯು—"ಭೀಷ್ಮ ದ್ರೋಣ ಅಶ್ವತ್ಥಾಮ ಕೃಪಾಚಾರ್ಯರುಗಳಿರಾ! ನನ್ನನ್ನು ರಕ್ಷಿಸಿರಿ! ವಿದುರ! ಧರ್ಮಿಷ್ಠನೇ! ಧರ್ಮವತ್ಸಲನೇ! ನನ್ನನ್ನು ರಕ್ಷಿಸು! ಧೃತರಾಷ್ಟ್ರ ಮಹಾರಾಜನೇ! ನಿನ್ನ ಸೊಸೆಯನ್ನು ರಕ್ಷಿಸು. ಗಾಂಧಾರಿ! ನೀನು ಮಹಾಭಾಗೆ, ಸರ್ವಜ್ಞೆ; ನಾನು ಸುಯೋಧನನ ಬಾಧೆಯಿಂದ ಬಳಲಿದ್ದೇನೆ; ಅವನ ಕಾಟವನ್ನು ತಾಳಲಾರೆನು, ನನ್ನನ್ನು ಕರುಣಿಸು. ಕುಂತಿ! ನೀನು ಆರ್ಯೆ; ವೀರಜನನಿ, ಅನಾರ್ಯನಿಂದ ಹಿಂಸೆಪಡುತ್ತಿರುವ ನನ್ನನ್ನು—ನಿನ್ನ ಸೊಸೆಯನ್ನು ಏಕೆ ಸಲಹೆ? ನನ್ನ ಮೇಲೆ ನಿನಗೆ ಕರುಣೆಯಿಲ್ಲವೆ? ಸುಯೋಧನನ ಕೈಗೆ ಸಿಕ್ಕಿ ಕೆಟ್ಟೆನಲ್ಲ! ನನ್ನ ಪಾಲಿಗೆ ಪಾಂಡುರಾಯ, ಧರ್ಮರಾಯ ಪ್ರಭೃತಿಗಳಾರೂ ಇಲ್ಲದೆಹೋದರಲ್ಲ! ಪತಿವ್ರತೆಯಾದರೂ ಮಂದಭಾಗ್ಯೆಯಾದ ನಾನು ಇನ್ನೇಕಿರಬೇಕು?" ಎಂದು ಗೋಳಾಡಿದಳು.

ಆಗ ವಿದುರನು—"ಮಹಾರಾಜ! ಈ ರೀತಿಯಲ್ಲಿ ನೀವು ದ್ರೌಪದಿಯನ್ನು ಗೋಳಾಡಿಸಿದರೆ, ಭೀಮಾರ್ಜುನರೂ ನಕುಲ ಸಹದೇವರೂ ನಿನ್ನನ್ನೂ ನಿನ್ನ ಮಕ್ಕಳನ್ನೂ ಮಂತ್ರಿಗಳನ್ನೂ ನಾಶಮಾಡದೆ ಬಿಡರು. ನಿನ್ನ ಮಗನನ್ನು ತಡೆ; ಇಲ್ಲದಿದ್ದರೆ ನೀವು ಕೆಟ್ಟುಹೋಗುವಿರಿ" ಎಂದು ಹೇಳಿದನು.

ದುರ್ಯೋಧನನು ದ್ರೌಪದಿಗೆ ಮಾಡುತ್ತಿದ್ದ ಅಪಮಾನವನ್ನು ಸೈರಿಸಲಾರದೆ ಭೀಮನು ಕ್ರೋಧಪರವಶನಾಗಿ—"ನಾನು ದುರ್ಯೋಧನನನ್ನೂ, ಅರ್ಜುನನು ಕರ್ಣನನ್ನೂ, ಸಹದೇವನು ಶಕುನಿಯನ್ನೂ ಕೊಲ್ಲದೆ ಬಿಡೆವು" ಎಂದು ಪ್ರತಿಜ್ಞೆ ಮಾಡಿದನು.

ಕೋಪಾವಿಷ್ಟನಾದ ಅರ್ಜುನನು ಬಾಣಗಳನ್ನು ಕೈಗೆ ತೆಗೆದುಕೊಂಡು ಕಾಲಾಂತಕನಂತೆ—"ಈ ವೈರಿಗಳೆಲ್ಲರನ್ನೂ ಸುಟ್ಟುಬಿಡುವೆನು" ಎಂದನು.

ಆಗ ಧರ್ಮರಾಯನು—"ಅರ್ಜುನ! ಈಗ ಆ ಸಾಹಸಕ್ಕೆ ಹೋಗಬೇಡ; ನಮ್ಮ ಯಶಸ್ಸು ಕೆಡುವುದು; ಲೋಕಹಿತಾರ್ಥವಾಗಿ ನಿನ್ನ ಕೋಪವನ್ನು ಶಮನಮಾಡಿಕೊ" ಎಂದು ತಮ್ಮನನ್ನು ಸಂತಯಿಸಿದನು.

ಆ ವೇಳೆಗೆ ಹಲವು ದುರ್ನಿಮಿತ್ತಗಳು ಕಂಡುಬರಲಾಗಿ, ಧೃತರಾಷ್ಟ್ರನು—"ದುರ್ಯೋಧನ! ದುಷ್ಟ! ಯಾವಾಗ ಕುರುಪುಂಗವರ ಧರ್ಮಪತ್ನಿಯನ್ನು ಸಭೆಯಲ್ಲಿ ದುರ್ಭಾಷೆಯಾಡಿ ಅಪಮಾನಪಡಿಸಿದೆಯೋ ಆಗಲೆ ನೀನು ಕೆಟ್ಟೆ" ಎಂದು ಮಗನಿಗೆ ಹೇಳಿ, ಸ್ವಕೀಯರ ಹಿತವನ್ನು ಕೋರಿ ದ್ರೌಪದಿಯನ್ನು ಸಮಾಧಾನಗೊಳಿಸಲು ಯತ್ನಿಸಿದನು.

ದುರ್ಯೋಧನನೇ ಮೊದಲಾದ ತನ್ನವರು ಧರ್ಮಚಾರಿಣಿಯಾದ ದ್ರೌಪದಿಯನ್ನು ಹಲವು ಬಗೆಯಲ್ಲಿ ಗೋಳಾಡಿಸಿದುದರಿಂದ ತನಗೂ ತನ್ನ ಮಕ್ಕಳಿಗೂ ಏನೋ ವಿಪತ್ತು ಕಾದಿದ್ದಿರುವುದೆಂದು ಹೆದರಿ—"ದ್ರೌಪದಿ! ನಿನಗೆ ಬೇಕಾದ ವರಗಳನ್ನು ಕೇಳಿಕೊ. ನೀನು ನನ್ನ ಸೊಸೆಗಳೆಲ್ಲರೊಳಗೆ ಶ್ರೇಷ್ಠೆ; ಧರ್ಮಪರಾಯಣೆ" ಎಂದನು.

ದ್ರೌಪದಿಯು—"ಮಹಾರಾಜನೆ! ನೀನು ವರವನ್ನು ಕೊಡುವುದಾದರೆ, ಧರ್ಮನಿಷ್ಠನೂ ಶ್ರೀಮಂತನೂ ಆದ ಯುಧಿಷ್ಠಿರನು ದಾಸನೆನಿಸಿಕೊಳ್ಳದಹಾಗೆ ಮಾಡು; ರಾಜಕುಮಾರನಾದ ನನ್ನ

ಮಗನನ್ನು, ಅರಿಯದವರು ದಾಸಪುತ್ರನೆನ್ನದ ಹಾಗೆ ಮಾಡು" ಎಂದಳು.

ಧೃತರಾಷ್ಟ್ರನು—"ಕಲ್ಯಾಣಿ! ಹಾಗೆಯೇ ಆಗಲಿ; ಇನ್ನೊಂದು ವರವನ್ನು ಕೇಳು; ನಿನ್ನ ಯೋಗ್ಯತೆಗೆ ಒಂದು ವರವು ಸಾಲದು" ಎಂದನು.

ದ್ರೌಪದಿಯು—"ಸರಥರೂ ಧನುರ್ಧಾರಿಗಳೂ ಆದ ಭೀಮಾರ್ಜುನರೂ, ಯಮಳರಾದ ನಕುಲ ಸಹದೇವರೂ ದಾಸರೆನಿಸಿಕೊಳ್ಳದೆ ಸ್ವವಶರಾಗಿರುವಂತೆ ವರವನ್ನು ಕೊಡು" ಎಂದು ಕೇಳಿದಳು.

ಧೃತರಾಷ್ಟ್ರನು—"ಎಲೌ ಮಹಾಭಾಗೆ! ನೀನು ಕೋರಿದಂತಾಗಲಿ, ನೀನು ಧರ್ಮಚಾರಿಣಿ; ಎರಡು ವರಗಳು ಸಾಲವು; ಮತ್ತೊಂದನ್ನು ಕೋರು" ಎನಲು,

ದ್ರೌಪದಿಯು—"ಲೋಭದಿಂದ ಧರ್ಮನಾಶವಾಗುವುದು; ನಾನು ಮೂರು ವರಗಳಿಗೆ ಅರ್ಹಳಲ್ಲ. ಕ್ಷತ್ರಿಯ ಸ್ತ್ರೀಯರಿಗೆ ಎರಡು ವರಗಳಿಗಿಂತ ಹೆಚ್ಚಾಗಿ ಸಲ್ಲವು. ಮಹಾರಾಜನೇ! ಈ ಪಾಪಿಷ್ಠ ದಾಸ್ಯದಿಂದ ಮುಕ್ತರಾದ ನನ್ನ ಗಂಡಂದಿರು ಸತ್ಕಾರ್ಯಗಳನ್ನು ಮಾಡಿ ಸಮಸ್ತ ಸಂಪದಗಳನ್ನೂ ಸಂಪಾದಿಸಬಲ್ಲರು; ಎರಡು ವರಗಳು ಸಾಕು" ಎಂದಳು.

ಈ ಪ್ರಕಾರವಾಗಿ ಪಾಂಡವರು ಹೋಗಿದ್ದ ಸ್ವಾತಂತ್ರ್ಯವನ್ನೂ ಧನ ಕನಕ ವಸ್ತುಗಳನ್ನೂ ಪಡೆದುಕೊಂಡು ಇಂದ್ರಪ್ರಸ್ಥಕ್ಕೆ ಹೊರಡಲು ನಿಶ್ಚಯಿಸಿ ಧೃತರಾಷ್ಟ್ರನನ್ನು ಬೀಳ್ಕೊಳ್ಳಹೋದರು.

ಆಗ ಮಹಾರಾಜನು ಯುಧಿಷ್ಠಿರನನ್ನು ಉಪಚಾರೋಕ್ತಿಗಳಿಂದ ಸಮಾಧಾನಗೊಳಿಸಿ ಕಡೆಗೆ—"ಉತ್ತಮ ಪುರುಷರು ವೈರಿಗಳ ಸುಕೃತಗಳನ್ನು ಸ್ಮರಿಸುವರೇ ಹೊರತು ದುಷ್ಕೃತಗಳನ್ನೆಂದಿಗೂ ಸ್ಮರಿಸರು. ನೀನು ದುರ್ಯೋಧನನ ಕಾಠಿಣ್ಯವನ್ನು ಮನಸ್ಸಿನಲ್ಲಿಡಬೇಡ. ನೀನು ಗುಣವನ್ನೇ ಎಣಿಸುವವನಾದರೆ ನಿಮ್ಮ ತಾಯಿ ಗಾಂಧಾರಿಯನ್ನು ನೋಡು, ವೃದ್ಧನೂ ಅಂಧನೂ ಆದ ನನ್ನನ್ನು ನೋಡು. ನನ್ನ ಮಿತ್ರ

ರನ್ನು ನೋಡಲಿಚ್ಛೆಯಿಂದಲೂ, ನನ್ನ ಮಕ್ಕಳ ಬಲಾಬಲವನ್ನು ಪರೀಕ್ಷಿಸಲಿಚ್ಛೆಯಿಂದಲೂ ಈ ದ್ಯೂತಕ್ಕೆ ಅನುಮೋದಿಸಿದೆನು. ನಿನ್ನಂತಹ ರಾಜನೂ, ಧೀಮಂತನೂ ಸರ್ವಶಾಸ್ತ್ರವಿಶಾರದನೂ ಆದ ಮಂತ್ರಿಯೂ ಇರುವಲ್ಲಿ ಕೌರವರಿಗೆ ಭಯವೇನು? ನಿನ್ನಲ್ಲಿ ಧರ್ಮ, ಅರ್ಜುನನಲ್ಲಿ ಧೈರ್ಯ, ಭೀಮಸೇನನಲ್ಲಿ ಪರಾಕ್ರಮ, ಯಮಳರಾದ ನಕುಲ ಸಹದೇವರಲ್ಲಿ ಗುರುಶುಶ್ರೂಷೆ ಇರುವುವು. ಅಜಾತ ಶತ್ರುವೆ! ನಿನಗೆ ಶುಭವಾಗಲಿ, ಖಾಂಡವಪ್ರಸ್ಥಕ್ಕೆ ಹೋಗಿ ಸುಖವಾಗಿರು. ನನ್ನ ಮಕ್ಕಳಲ್ಲಿ ಭ್ರಾತೃಭಾವವನ್ನಿಡು. ನಿನ್ನ ಮನಸ್ಸು ಸದಾ ಧರ್ಮದಮೇಲಿರಲಿ" ಎಂದನು.

ತರುವಾಯ ಯುಧಿಷ್ಠಿರನು ಧೃತರಾಷ್ಟ್ರನಿಗೆ ನಮಸ್ಕಾರಮಾಡಿ ತಮ್ಮಂದಿರನ್ನೂ ದ್ರೌಪದಿಯನ್ನೂ ಕರೆದುಕೊಂಡು ಇಂದ್ರಪ್ರಸ್ಥಕ್ಕೆ ಪಯಣಮಾಡಿದನು.

ಇತ್ತ ದುಃಶಾಸನಾದಿಗಳು ತಾವು ಕಷ್ಟಪಟ್ಟು ಸಂಪಾದಿಸಿದ ಸಂಪತ್ತೆಲ್ಲವನ್ನು ವೃದ್ಧ ಮಹಾರಾಜನು ಶತ್ರುಗಳ ಪಾಲಮಾಡಿದನೆಂದು ವ್ಯಥಪಡುತ್ತ ದುರ್ಯೋಧನನೊಡನೆ ಧೃತರಾಷ್ಟ್ರನ ಬಳಿಗೆ ಹೋದರು. ದುರ್ಯೋಧನನು ತಂದೆಯ ಕಾಲಮೇಲೆ ಬಿದ್ದು, ಅರ್ಜುನಾದಿಗಳ ಶೌರ್ಯ ಧೈರ್ಯಗಳನ್ನು ವರ್ಣಿಸಿ, ಅವರಿಂದ ತಮಗುಂಟಾಗ ಬಹುದಾದ ಅನರ್ಥಗಳೆಲ್ಲವನ್ನೂ ವಿವರಿಸಿ, ಯುದ್ಧದಿಂದಲಾದರೂ ಕಪಟೋಪಾಯದಿಂದಲಾದರೂ ಅಹಿತವನ್ನು ಮಾಡಬಂದ ಶತ್ರುವನ್ನು ಸರ್ವೋಪಾಯದಿಂದಲೂ ಸಂಹಾರಮಾಡಬೇಕೆಂಬ ದೇವ ಪುರೋಹಿತನಾದ ಬೃಹಸ್ಪತಿಯ ನೀತಿವಾಕ್ಯವನ್ನು ಉದಾಹರಿಸಿ—"ಅಯ್ಯ! ನಾವು ಯುಧಿಷ್ಠಿರಾದಿಗಳನ್ನು ನಾನಾಪ್ರಕಾರವಾಗಿ ನೋಯಿಸಿದೆವು. ಅವರು ನಮ್ಮಿಂದಪಟ್ಟ ಬಾಧೆಗಳನ್ನು ಎಷ್ಟು ಮಾತ್ರವೂ ಮರೆಯುವ ರಲ್ಲ. ದ್ರೌಪದಿಗೆ ನಾವು ಮಾಡಿದ ಅಪಮಾನವನ್ನು ಅವರಲ್ಲೊಬ್ಬರೂ ಕ್ಷಮಿಸರು. ಇನ್ನೊಂದು ಬಾರಿ ಪಗಡೆಯಾಡಿ ಅವರನ್ನು ವನವಾಸಕ್ಕೆ ಸಾಗಿಸುವ ಆಲೋಚನೆ ಮಾಡಿದ್ದೇವೆ. ಧರ್ಮರಾಯನನ್ನು ಮರಳಿ

ದ್ಯೂತಕ್ಕೆ ಕರೆಯಿಸು'' ಎಂದು ವಿನಯಪೂರ್ವಕವಾಗಿ ಕೇಳಿ
ಕೊಂಡನು.

ಧೃತರಾಷ್ಟ್ರನು ಮಗನ ಮಾತಿಗೆ ಮನಸ್ಸು ಕರಗಿದವನಾದರೂ
ಅನುದ್ಯೂತದಿಂದ ತನ್ನವರಿಗೆ ವಿಪತ್ತು ತಪ್ಪದೆ ಸಂಭವಿಸುವುದೆಂದು
ಭಯಪಟ್ಟು, ಪಾಂಡವರೊಡನೆ ಸ್ನೇಹವನ್ನು ಬೆಳೆಯಿಸುವಂತೆ ಅನೇಕ
ವಿಧವಾಗಿ ಮಗನಿಗೆ ಬುದ್ಧಿ ಹೇಳಿದನು. ದುರ್ಯೋಧನನು ತಂದೆಯ
ಮಾತನ್ನು ಕೇಳದೆ ಹೋಗಲು ಉಪಾಯಾಂತರವನ್ನರಿಯದೆ ಪುನರ್ದ್ಯೂತ
ವಾಗಲಿ ಎಂದೊಪ್ಪಿದನು. ಭೀಷ್ಮ ದ್ರೋಣಾದಿಗಳೂ ಮತ್ತೆ ದ್ಯೂತವು
ಬೇಡವೆಂದು ಹೇಳಿದರು. ಪುತ್ರಸ್ನೇಹದಿಂದ ಧೃತರಾಷ್ಟ್ರನು ಅವರ
ಮಾತನ್ನು ಉಪೇಕ್ಷೆಮಾಡಿ ಪಾಂಡವರನ್ನು ಕರೆತರುವಂತೆ ಹೇಳಿ
ದೂತನನ್ನು ಕಳುಹಿಸಿಕೊಟ್ಟನು.

ಆಗ ಧರ್ಮದರ್ಶಿನಿಯಾದ ಗಾಂಧಾರಿಯು ದುಃಖಾಕ್ರಾಂತ
ಳಾಗಿ—''ಮಹಾರಾಜ! ಈ ದುರ್ಯೋಧನನು ಕುಲವನ್ನು
ನಾಶಮಾಡುವುದಕ್ಕೆ ಹುಟ್ಟಿದ್ದಾನೆ. ಅವನಿಂದ ನಮಗೆ ವಿನಾಶಕಾಲ
ಪ್ರಾಪ್ತವಾಗಿದೆ. ಸ್ವದೋಷದಿಂದ ಕೆಡಬೇಡ. ಬಾಲಬುದ್ಧಿಯುಳ್ಳ ಈ
ದುಷ್ಟರ ಆಲೋಚನೆಗೊಪ್ಪಬೇಡ. ಈ ಘೋರ ಕುಲಕ್ಷಯಕ್ಕೆ ನೀನು
ಕಾರಣವಾಗಬೇಡ. ಶಾಂತರಾದ ಪೃಥೆಯ ಮಕ್ಕಳನ್ನು ಯಾರು
ತಾನೇ ರೇಗಿಸಲಾದೀತು? ಶ್ರೇಯಸ್ಸಿನ ನಿಮಿತ್ತವಾಗಿ ಆಗಲಿ
ಅಶ್ರೇಯಸ್ಸಿನ ನಿಮಿತ್ತವಾಗಿ ಆಗಲಿ ದುರ್ಬುದ್ಧಿಗಳು ಶಾಸ್ತ್ರಕ್ಕೊಳ
ಗಾಗರು. ವೃದ್ಧರು ಬಾಲಮತಿಗಳಾಗಬಾರದು. ನೀನು ನಿನ್ನ ಮಕ್ಕಳಿಗೆ
ಯಜಮಾನನಾಗಿರು. ನನ್ನ ಮಾತನ್ನು ಕೇಳು. ಈ ಕುಲಗೇಡಿಯನ್ನು
ತೊರೆದುಬಿಡು. ಪುತ್ರಸ್ನೇಹದಿಂದ ಮೊದಲೇ ನೀನು ಈ ಕೆಲಸವನ್ನು
ಮಾಡಲಿಲ್ಲ. ಈಗ ಅದರ ಫಲವು ಪ್ರಾಪ್ತವಾಗಿದೆ. ಶಮ ಧರ್ಮ
ನಯಗಳನ್ನು ಬಿಡದೆ ಬುದ್ಧಿವಂತನಾಗಿರು. ಕ್ರೂರಕೃತ್ಯಗಳಿಂದ ಸಂಪಾ
ದಿಸಿದ ಸಿರಿಯು ಧ್ವಂಸವಾಗಿ ಹೋಗುವುದು. ನ್ಯಾಯದಿಂದ ಸಂಪಾದಿ
ಸಿದ ಸಿರಿಯು, ಸುಸ್ಥಿರವಾಗಿ ಪುತ್ರ ಪೌತ್ರ ಪಾರಂಪರ್ಯವಾಗಿ ನಡೆದು

ಬರುವುದು. ಮಾತಿಗೆ ಮರುಳಾಗಬೇಡ'' ಎಂದು ಗಂಡನಿಗೆ ಬುದ್ಧಿ ಹೇಳಿದಳು.

ಗಾಂಧಾರಿಯ ಮಾತನ್ನು ಕೇಳಿ ಧೃತರಾಷ್ಟ್ರನು—''ನಮ್ಮ ಕುಲಕ್ಕೆ ಕೇಡುಗಾಲ ಬಂದರೆ ಬಂದುಹೋಗಲಿ. ಅದನ್ನು ನಾನು ತಡೆಯಲಾರೆನು. ದುರ್ಯೋಧನನು ಮನಸ್ಸುಬಂದಂತೆ ಹೋಗಲಿ; ಪಾಂಡವರು ಮತ್ತೆ ಬರಲಿ, ಪಗಡೆಯಾಡಲಿ; ಏನಾದರೂ ಆಗಿ ಹೋಗಲಿ'' ಎಂದುತ್ತರವನ್ನು ಕೊಟ್ಟು ಸುಮ್ಮನಾದನು.

ಧೃತರಾಷ್ಟ್ರನು ಕಳುಹಿಸಿಕೊಟ್ಟ ದೂತನು ಅರೆದಾರಿ ಪಯಣ ಮಾಡಿದ್ದ ಧರ್ಮರಾಯನನ್ನು ಸೇರಿ ಮಹಾರಾಜನ ಅಪ್ಪಣೆಯನ್ನು ಬಿನ್ನಯಿಸಿದನು.

ಅದಕ್ಕೆ ಯುಧಿಷ್ಠಿರನು ''ವಿಧಾತನ ನಿಯಮಾನುಸಾರವಾಗಿ ಪ್ರಾಣಿಗಳು ಶುಭಾಶುಭಗಳನ್ನು ಪಡೆಯುವುವು. ನಾನು ದ್ಯೂತವಾಡಲಿ ಆಡದೆ ಹೋಗಲಿ ಅವುಗಳು ಆಗದೆ ತೀರವು. ವೃದ್ಧನು ದ್ಯೂತಕ್ಕೆ ಬರ ಹೇಳಿದ್ದಾನೆ. ದ್ಯೂತವು ಕ್ಷಯಕರವೆಂಬುದನ್ನು ಬಲ್ಲೆನು, ಮಾಡುವು ದೇನು? ಹಿರಿಯನಾಜ್ಞೆಯನ್ನು ಮೀರಲಾರೆನು'' ಎಂದು ನುಡಿದು ತಮ್ಮಂದಿರನ್ನೂ ಹೆಂಡತಿಯನ್ನೂ ಕರೆದುಕೊಂಡು ಹಸ್ತಿನಾಪುರಕ್ಕೆ ಹಿಂದಿರುಗಿದನು. ಬುದ್ಧಿಶಾಲಿಯಾದರೂ, ಲಜ್ಜೆಯೊಂದುಕಡೆ ಧರ್ಮ ವೊಂದುಕಡೆ ತನ್ನನ್ನು ಬಾಧಿಸುತ್ತಿದ್ದರೂ, ಶಕುನಿಯು ಮೋಸಗಾರ ನೆಂದು ತಿಳಿದಿದ್ದರೂ ಅವನು ಕೌರವರಿಗೆ ವಿನಾಶಕಾಲವು ಸಮೀಪಿಸಿದೆ ಯೆಂದು ಭಾವಿಸಿ ಮತ್ತೆ ಪಗಡೆಯಾಟಕ್ಕೆ ಕುಳಿತನು.

ಮತ್ತೆ ದ್ಯೂತವಾರಂಭವಾಯಿತು. ಯಾರು ಸೋತರೆ ಅವರು ರಾಜ್ಯವನ್ನು ಪರಿತ್ಯಾಗಮಾಡಿ ಹನ್ನೆರಡು ವರ್ಷಗಳಕಾಲ ವನವಾಸ ವನ್ನೂ ತರುವಾಯ ಜನಭರಿತವಾದೊಂದೂರಿನಲ್ಲಿ ಒಂದು ವರ್ಷ ಅಜ್ಞಾತವಾಸವನ್ನೂ ಮಾಡುವಂತೆಯೂ, ಅಜ್ಞಾತವಾಸಿಗಳು ಅವಧಿಗೆ ಮುಂಚೆ ಯಾರ ಕಣ್ಣಿಗಾದರೂ ಬಿದ್ದಲ್ಲಿ ಮತ್ತೆ ಹನ್ನೆರಡು ವರ್ಷಗಳು ವನವಾಸ ಮಾಡುವಂತೆಯೂ ಪಂತಮಾಡಿಕೊಂಡರು. ಧರ್ಮರಾಯನೂ

ಶಕುನಿಯೂ ಮರಳಿ ಪಗಡೆಯಾಡಿದರು; ಮರಳಿ ಧರ್ಮರಾಯನು ಸೋತನು.

ರಾಜಪುತ್ರರೈವರೂ ತಮ್ಮ ಪತ್ನಿಯ ಸಮೇತರಾಗಿ, ರಾಜವೇಷ ಭೂಷಣಗಳನ್ನು ತೆಗೆದಿಟ್ಟು ಕೃಷ್ಣಾಜಿನವನ್ನುಟ್ಟು ಹೊದ್ದು, ಅರಣ್ಯ ಯಾತ್ರೆಗೆ ಅಣಿಯಾದರು. ಆಗ ಧರ್ಮರಾಯನು ಭೀಷ್ಮ ಧೃತರಾಷ್ಟ್ರಾದಿ ವೃದ್ಧರನ್ನೂ ಮಂತ್ರಿಗಳನ್ನೂ ಗಾಂಧಾರಿಯನ್ನೂ ಸಂಬೋಧಿಸಿ—"ನಾವು ವನವಾಸಕ್ಕೆ ಹೋಗಿಬರುವೆವು, ಅಪ್ಪಣೆಯೆ" ಎನ್ನಲು, ಅವರೆಲ್ಲರೂ ಲಜ್ಜೆಯಿಂದ ಮೌನವನ್ನು ತಾಳಿದರು; ಕೆಲವರು ಪಾಂಡವರಿಗೆ ಶುಭವಾಗಲೆಂದು ಮನಸ್ಸಿನಲ್ಲಿಯೇ ಹರಸಿದರು. ಆ ಬಳಿಕ ಯುಧಿಷ್ಠಿರನು ಭೀಷ್ಮ ದ್ರೋಣಾದಿಗಳ ಅಡಿಗೆರಗಿ ಪ್ರಯಾಣೋನ್ಮುಖನಾದನು.

ದ್ರೌಪದಿಯು ಹೊರಡುವುದಕ್ಕೆ ಸಿದ್ಧಳಾಗಿ ಹೇಳಿಕೊಳ್ಳಲು ಕುಂತಿಯ ಬಳಿಗೆ ಹೋದಳು. ಕುಂತಿಯು ಶೋಕಸಂತಪ್ತಳಾಗಿ—"ವತ್ಸೆ! ಈ ಮಹದ್ವ್ಯಸನವು ಪ್ರಾಪ್ತವಾಯಿತೆಂದು ಶೋಕಪಡದಿರು. ನೀನು ಸ್ತ್ರೀಧರ್ಮವನ್ನು ಬಲ್ಲವಳು, ಮತ್ತು ಶೀಲವತಿ. ಎಲ್ಲವನ್ನೂ ಬಲ್ಲ ನಿನಗೆ ಪತಿಸೇವೆಯ ವಿಷಯದಲ್ಲಿ ನಾನು ಹೇಳತಕ್ಕುದೇನಿದೆ? ನೀನು ಸಾಧ್ವಿ, ಗುಣಸಂಪನ್ನೆ, ಉಭಯಕುಲಕ್ಕೂ ಭೂಷಣವಾಗಿದ್ದೀಯೆ. ಅನಘೆ! ನಿನ್ನ ಕೋಪಾಗ್ನಿಯಿಂದ ಕೌರವರು ಬೆಂದುಹೋಗದಿರುವುದು ಅವರ ಭಾಗ್ಯವೇ ಸರಿ! ನಿನ್ನ ಧರ್ಮವೇ ನಿನ್ನನ್ನು ಕಾಯುವುದು. ಕ್ಷಿಪ್ರದಲ್ಲಿಯೇ ನಿನಗೆ ಶ್ರೇಯಸ್ಸುಂಟಾಗುವುದು. ವನದಲ್ಲಿ ನನ್ನ ಮಗ ಸಹದೇವನನ್ನು ಮಾತ್ರ ಚೆನ್ನಾಗಿ ನೋಡಿಕೊ" ಎಂದು ಹೇಳಿ, ಸೊಸೆಯನ್ನು ಹೋಗಿ ಬಾ ಎಂದಳು.

ತರುವಾಯ ಆ ವೀರಮಾತೆ ಮಕ್ಕಳ ಹತ್ತಿರ ಹೋಗಿ—"ನೀವು ಸದ್ಧರ್ಮಚಾರಿತ್ರರು. ನಿಮಗೆ ಇಂತಹ ವ್ಯಸನವು ಹೇಗೆ ಬಂದಿತು? ಈ ವಿಧಿ ವಿಪರ್ಯಾಸಕ್ಕೇನು ಕಾರಣ? ನಿಮ್ಮನ್ನು ಹೆತ್ತ ನನ್ನ ಭಾಗ್ಯದೋಷವೇ ಕಾರಣವಾಗಿರಬೇಕು. ಉತ್ಸಾಹ ಧೈರ್ಯ ಬಲ ಈ ಗುಣ

ಗಳಲ್ಲಿ ನಿಮಗೆ ಬಡತನವಿಲ್ಲ ಆದರೂ ಸರ್ವಸ್ವವನ್ನೂ ಕಳೆದುಕೊಂಡು ಗತಿಹೀನರಾಗಿ ನೀವು ವನವಾಸಕ್ಕೆ ಹೋಗುವಂತೆ ಆದುದು ಹೇಗೆ? ಕೃಷ್ಣಾ! ನೀನೇಕೆ ನನ್ನಕೈಯುಬಿಟ್ಟೆ; ದ್ವಾರಕಾವಾಸನೆ! ಎಲ್ಲಿದ್ದೀಯೇ? ನೀನೇಕೆ ನನ್ನನ್ನೂ ಈ ನರೋತ್ತಮರನ್ನೂ ರಕ್ಷಿಸೆ? ಧರ್ಮಾತ್ಮರು, ಯಶೋವಂತರು, ವೀರರೂ ಆದ ಈ ನನ್ನ ಮಕ್ಕಳಮೇಲೆ ದಯೆಯಿಡು. ನೀತ್ಯರ್ಥಗಳನ್ನು ಬಲ್ಲವರಾದ ಭೀಷ್ಮ ದ್ರೋಣ ಕೃಪಾಚಾರ್ಯರು ನಮ್ಮ ಕುಲನಾಥರಾಗಿದ್ದೂ ಕೂಡ ನಮಗೀ ಆಪತ್ತು ಎಲ್ಲಿಂದ ಬಂದಿತು? ಸಹದೇವ! ನೀನು ನನ್ನನ್ನು ಬಿಟ್ಟು ಹೋಗಬೇಡ, ಇಲ್ಲಿಯೇ ಇದ್ದು ನನ್ನನ್ನು ಸಲಹುವ, ಪುಣ್ಯವನ್ನು ಕಟ್ಟಿಕೊ" ಎಂದೀ ಪ್ರಕಾರವಾಗಿ ಪ್ರಲಾಪಿಸಿದಳು.

ಅವರು ಕಾಡಿಗೆ ಹೋಗಲುದ್ಯುಕ್ತರಾಗಿರುವುದನ್ನು ಕಂಡು ಪುರವಾಸಿಗಳು ಗೋಳಿಡಲಾರಂಭಿಸಿದರು. ಬಾಲಕ ಬಾಲಕಿಯರು ಕಣ್ಣೀರನ್ನು ಸುರಿಸುತ್ತಾ ಅವರ ಹತ್ತಿರಹೋಗಿ ನಿಂತರು; ಯುವಕ ಯುವತಿಯರು ವಿಷಣ್ಣವದನರಾಗಿ ಅವರನ್ನು ನೋಡಹೊರಟರು. ವೃದ್ಧ ಸ್ತ್ರೀಪುರುಷರು ಅಳುತ್ತಾ ಅವರ ಬೆನ್ನಹತ್ತಿದರು. ಸಮಸ್ತ ಖಾಂಡವಪ್ರಸ್ಥವೂ ಹಸ್ತಿನಾಪುರವೂ ದುಃಖಾಕುಲವಾಗಿ ಆರ್ತಸ್ವರ ದಿಂದ ಪರಿಪೂರ್ಣವಾಯಿತು. ಆಬಾಲವೃದ್ಧರೂ ಕುಂತೀಪುತ್ರರ ಗುಣ ಕೀರ್ತನವನ್ನು ಮಾಡುತ್ತಾ ನಿಟ್ಟುಸಿರನ್ನು ಬಿಡುತ್ತಿದ್ದರು.

ಅದನ್ನು ಕಂಡು ಯುಧಿಷ್ಠಿರನು ಮೃದು ಮಧುರ ಸ್ವರದಿಂದ— "ಪುರವಾಸಿಗಳಿರಾ! ನನ್ನಲ್ಲಿ ಯಾವ ಗುಣವಿಲ್ಲದಿದ್ದರೂ ನೀವು ಕರುಣಾ ವಶವರ್ತಿಗಳಾಗಿ ಗುಣಕೀರ್ತನ ಮಾಡುತ್ತಿರುವಿರಿ; ನಾನು ಕೃತಾರ್ಥ ನಾದೆನು. ಹಸ್ತಿನಾಪುರದಲ್ಲಿ ಪಿತಾಮಹ ಭೀಷ್ಮನೂ, ಮಹಾರಾಜ ಧೃತರಾಷ್ಟ್ರನೂ, ಧರ್ಮವತ್ಸಲ ವಿದುರನೂ, ಜನನಿ ಕುಂತಿಯೂ ಇರುವರು. ಅವರು ಶೋಕ ಸಂತಾಪದಿಂದ ಬಳಲುತ್ತಿದ್ದಾರೆ. ನೀವು ನನ್ನ ಹಿತಚಿಂತಕರು; ನನ್ನ ಸ್ವಕೀಯರ ರಕ್ಷಣಾಭಾರವನ್ನು ನಿಮ್ಮ ಕೈಯಲ್ಲಿಟ್ಟಿದ್ದೇನೆ; ಅವರನ್ನು ನೀವು ರಕ್ಷಿಸಿರಿ; ನೀವೆಲ್ಲರೂ ಇನ್ನು ನಿಲ್ಲಿರಿ" ಎಂದನು.

ಯುಧಿಷ್ಠಿರನ ಮಧುರ ವಚನವನ್ನು ಕೇಳಿ ಪುರವಾಸಿಗಳು ತಮ್ಮ ತಮ್ಮ ವಿಲಾಪ ಪರಿತಾಪಗಳನ್ನು ಮೆಲ್ಲ ಮೆಲ್ಲಗೆ ಅಡಗಿಸಿಕೊಂಡು ಹಿಂದಿರುಗಿದರು. ಪಾಂಡವರು ಕುಂತಿಯನ್ನು ವಿದುರನ ಮನೆಯಲ್ಲಿರಿಸಿ ಕೃಷ್ಣೆಯ ಸಮೇತರಾಗಿ ಪುಣ್ಯತೀರ್ಥವಾದ ಜಾಹ್ನವೀತೀರಕ್ಕೆ ಹೋಗಿ ತಾಪಸರ ವೇಷವನ್ನು ತಾಳಿ ಅರಣ್ಯ ಸಂಚಾರಿಗಳಾದರು. ಇಂತು, ಯುಧಿಷ್ಠಿರನ ವಿಸ್ತಾರ ಸಾಮ್ರಾಜ್ಯವು ದುರ್ಯೋಧನನ ಪಾಲಾಯಿತು; ಪಾಂಡವರು ಗತಸರ್ವಸ್ವರಾಗಿ ಅಡವಿಯ ಪಾಲಾದರು.

---

## ಹತ್ತನೆಯ ಅಧ್ಯಾಯ

---

### ಅಜ್ಞಾತವಾಸ, ಗೋಧನ ರಕ್ಷಣ, ದ್ರುಪದರಾಯನ ಪುರೋಹಿತನ ದೌತ್ಯ, ಸಂಜಯನ ದೌತ್ಯ.

ಪಾಂಡವರಿಗೆ ಬಂದ ಪಾಡನ್ನು ನೋಡಿ ಭೀಷ್ಮನು ಹಗಲಿರಳೂ ಮರುಗಿದನು. ಪಾಂಡವರಿಗೆ ಸಾಮ್ರಾಜ್ಯ ಪಟ್ಟವು ಬಂದುದಕ್ಕೆ ಅವನು ಇದುವರೆಗೆ ಎಷ್ಟು ಆನಂದಪಟ್ಟನೋ ಈಗ ಅಷ್ಟು ವ್ಯಥೆಪಟ್ಟನು. ಯುಧಿಷ್ಠಿರನ ಯಾಗದ ವೈಭವವನ್ನು ನೋಡಿ ಅವನೆಷ್ಟು ಆಹ್ಲಾದ ಪಟ್ಟನೋ ಆ ರಾಜಕುಮಾರರು ಅರಣ್ಯವಾಸಕ್ಕೆ ಗುರಿಯಾದುದನ್ನು ನೋಡಿ ಅಷ್ಟೂ ಅಷ್ಟು ದುಃಖಪಟ್ಟನು. ಧೃತರಾಷ್ಟ್ರ ದುರ್ಯೋಧನರ ಪಾಪ ಬುದ್ಧಿಯಿಂದ ಗೃಹಚ್ಛಿದ್ರವಾಯಿತು; ಆ ಗೃಹಚ್ಛಿದ್ರದಿಂದ ಕುಲ ನಾಶವಾಗಿಯೇ ತೀರುವುದು. ಭೀಮನಿಗೆ ಸೈರಣೆಯಿಲ್ಲ, ಅರ್ಜುನನು ಪರಾಕ್ರಮಶಾಲಿ, ಅವರೆಷ್ಟು ಮಾತ್ರಕ್ಕೂ ದುರ್ಯೋಧನನು ತಮಗೆ ಮಾಡಿದ ಅಪಮಾನವನ್ನೂ ಅನ್ಯಾಯವನ್ನೂ ಸಹಿಸಿಕೊಂಡು ಸುಮ್ಮ ನಿರುವರಲ್ಲ. ದುರ್ಯೋಧನಾದಿಗಳಿಗೆ ಇದು ಕೇಡುಗಾಲ—ಎಂದೀ ಬಗೆಯಾಗಿ ಭೀಷ್ಮನು ಮನಸ್ಸಿನಲ್ಲಿಯೇ ತೊಳಲಿದನು.

ಇತ್ತ, ಪಾಂಡವರು ಅತಿ ಕಷ್ಟದಿಂದ ಹನ್ನೆರಡು ವರ್ಷಗಳು ವನವಾಸ ಮಾಡಿದರು. ಅನಂತರದಲ್ಲಿ ಅವರು ಒಂದು ವರ್ಷಕಾಲ ಮತ್ಸ್ಯ ರಾಜ್ಯಾಧಿಪತಿ ವಿರಾಟನ ಮನೆಯಲ್ಲಿ ಅಜ್ಞಾತವಾಸ ಮಾಡು ವಂತೆ ನಿಶ್ಚಯಿಸಿ ಒಂದು ದುರಾರೋಹವಾದ ಪರ್ವತ ಶಿಖರದ ಮೇಲಿದ್ದ ಒಂದು ಶಮೀವೃಕ್ಷದ ಮೇಲೆ ತಮ್ಮ ಆಯುಧಗಳನ್ನಿಟ್ಟು ಗುಪ್ತವೇಷದಲ್ಲಿ ವಿರಾಟನ ಅರಮನೆಗೆ ಹೋದರು. ಅಲ್ಲಿ ಅವರು ಬೇರೆ ಬೇರೆಯ ಹೆಸರುಗಳನ್ನಿಟ್ಟುಕೊಂಡು ಬೇರೆ ಬೇರೆಯ ಕೆಲಸಗಳನ್ನು ಮಾಡಲೊಪ್ಪಿಕೊಂಡರು. ಯುಧಿಷ್ಠಿರನು ಕಂಕನೆಂಬ ಹೆಸರನ್ನಿಟ್ಟು ಕೊಂಡು ವಿರಾಟರಾಜನಿಗೆ ಪಗಡೆಯಾಟದಲ್ಲಿ ಒಡನಾಡಿಯಾದನು;

ಭೀಮನು ಬಲ್ಲವನೆಂದು ಹೆಸರಿಟ್ಟುಕೊಂಡು ಬಾಣಸಿಗನಾದನು; ಅರ್ಜುನನು ಹೆಂಗಸಿನ ಉಡುಗೆ ತೊಡುಗೆಗಳನ್ನು ಹಾಕಿಕೊಂಡು ಬೃಹನ್ನಳೆಯೆಂಬ ಹೆಸರಿಂದ ವಿರಾಟರಾಜನ ಮಗಳು ಉತ್ತರೆಗೆ ನೃತ್ಯ ಗೀತಗಳನ್ನು ಕಲಿಸಲೊಪ್ಪಿಕೊಂಡನು; ನಕುಲನು ಗ್ರಂಥಿಕನೆಂಬ ಹೆಸರಿಂದ ವಿರಾಟನ ಕುದುರೆಗಳನ್ನು ಕಾಯುವ ಕೆಲಸಕ್ಕೆ ನಿಂತನು; ಸಹದೇವನು ಗೊಲ್ಲನ ವೇಷವನ್ನು ಹಾಕಿಕೊಂಡು ಅರಿಷ್ಟನೇಮಿ ಯೆಂದು ಹೆಸರುಗೊಂಡು ದನ ಕಾಯುವ ಕೆಲಸವನ್ನೊಪ್ಪಿಕೊಂಡನು. ದ್ರೌಪದಿಯು ಸೈರಂಧ್ರಿಯೆಂಬ ಹೆಸರನ್ನು ಧರಿಸಿ ವಿರಾಟರಾಯನ ರಾಣಿಯಾದ ಸುಧೇಷ್ಣೆಯ ಚೇಟಿಯಾಗಿ ಪರಿಚರ್ಯವನ್ನು ಮಾಡ ತೊಡಗಿದಳು.

ಅಜ್ಞಾತವಾಸದಲ್ಲಿರುವಾಗ ಪಾಂಡವರು ಜನದೃಷ್ಟಿಗೆ ಬಿದ್ದರೂ ಬೀಳಬಹುದೆಂದಾಲೋಚಿಸಿ ಅವರನ್ನು ಕಂಡುಹಿಡಿಯುವ ನಿಮಿತ್ತ ವಾಗಿ ದುರ್ಯೋಧನನು ಜಲಸ್ಥಲಮಾರ್ಗವಾಗಿ ಗೂಢಚಾರರನ್ನು ಕಳುಹಿಸಿದನು. ಅವರು ನಾನಾ ವೇಷಗಳನ್ನು ಹಾಕಿಕೊಂಡು ಊರೂರು ಗಳನ್ನೂ ಕೇರಿ ಕೇರಿಗಳನ್ನೂ ಬಳಸಿ ಅರಸಿಬಂದರೂ ಪಾಂಡವರ ಸುಳಿವನ್ನೇ ಕಾಣದೆ ಹತಾಶರಾಗಿ ಹಸ್ತಿನಾಪುರಕ್ಕೆ ಮರಳಿದರು. ಮಹಾರಾಜ ದುರ್ಯೋಧನನು ಭೀಷ್ಮ ದ್ರೋಣ ಪ್ರಭೃತಿ ಮಂತ್ರಿ ವರ್ಗದಿಂದಲೂ ಭ್ರಾತೃವರ್ಗದಿಂದಲೂ ಕೂಡಿ ಒಡ್ಡೋಲಗದಲ್ಲಿರುವ ಸಮಯದಲ್ಲಿ ಚಾರರು ಬಂದು ಸಭೆಯ ಮುಂದೆ ಕೈಜೋಡಿಸಿಕೊಂಡು ನಿಂತು ಇಂತೆಂದು ಬಿನ್ನಯಿಸಿದರು :—

"ಮಹಾಸ್ವಾಮಿ! ನಾವು ದುರವಗಾಹವಾದ ನಿಬಿಡಾರಣ್ಯ ಗಳನ್ನೂ ಉತ್ತುಂಗ ಶೈಲ ಶಿಖರಗಳನ್ನೂ ದುಷ್ಪ್ರವೇಶ ದುರ್ಗಗಳನ್ನೂ ಜನಸಮಾಕೀರ್ಣ ರಾಜ್ಯಗಳನ್ನೂ ವಿಚಿತ್ರ ಸೌಧಾವಳಿಗಳಿಂದ ಪರಿ ವೃತವಾದ ರಾಜಧಾನಿ ಪ್ರಭೃತಿ ಸಕಲ ಸ್ಥಳಗಳನ್ನೂ ಬಿಡದೆ ಬಳಸಿದೆವು; ಎಲ್ಲೆಲ್ಲಿ ಅಲೆದು ಅರಸಿದರೂ ಪಾಂಡವರ ಸುಳಿವನ್ನು ಕಾಣಲಿಲ್ಲ; ಅವರು ತಮ್ಮ ಪತ್ನಿಯೊಡನೆ ಯಾವ ದಾರಿಯಲ್ಲಿ ಎತ್ತಹೋದರೋ, ಯಾವ ಊರಿನಲ್ಲಿ ಯಾವ ವೇಷದಲ್ಲಿರುವರೋ ಒಂದೂ ತಿಳಿಯಲಿಲ್ಲ.

ಅಥವಾ, ಅವರು ಯಾವ ನಿರ್ಜನಾರಣ್ಯದಲ್ಲಿ ನರಿ ನಾಯಿಗಳ ಪಾಲಾದರೋ, ಕಾಣದೂರಿಗೆ ಹೋಗಿ ಹಗೆಗಳ ಕೈಗೆ ಸಿಕ್ಕಿ ಮಡಿದರೋ, ಮತ್ತೇನಾದರೋ ತಿಳಿಯದು. ನಾವು ವಿರಾಟರಾಜ್ಯಕ್ಕೆ ಹೋಗಿ ನೋಡಿದೆವು; ಅಲ್ಲಿ ತಮ್ಮ ಪರಮ ಶತ್ರುವಾದ ಆ ರಾಜನ ಸೇನಾಪತಿ ಕೀಚಕನು ಯಾರೂ ಕಂಡು ಕೇಳದ ಗಂಧರ್ವರಿಂದ ಹತನಾದನೆಂದು ಕೇಳಿದೆವು; ಮುಂದೇನ ಮಾಡಬೇಕೋ ಅಪ್ಪಣೆಯಾಗಬೇಕು.''

ಮಹಾರಾಜ ದುರ್ಯೋಧನನು ಚಾರರ ಮಾತನ್ನು ಕೇಳಿ ಕಳವಳ ಗೊಂಡು ಭೀಷ್ಮಾದಿಗಳ ಕಡೆ ತಿರುಗಿ, ಈ ಸಂದರ್ಭದಲ್ಲಿ ಏನಮಾಡ ಬೇಕೋ ಆಲೋಚಿಸಿ ಹೇಳಿರೆಂದು ಕೇಳಿದನು. ಮಹಾಮತಿ ಭೀಷ್ಮನು ಧೃತರಾಷ್ಟ್ರ ದುರ್ಯೋಧನರ ಮನೆಯಲ್ಲಿ ಉಂಡು ಉಟ್ಟರೂ ಪಾಂಡವರಿಗೆ ವಿರೋಧಿಯಲ್ಲ; ಅವನು ದುರ್ಯೋಧನನು ಕೇಳಿದ ಮಾತಿಗೆ ಇಂತೆಂದು ಉತ್ತರಕೊಟ್ಟನು:—

''ವತ್ಸ! ಯುಧಿಷ್ಠಿರನಿಗೆ ಯಾವ ಕಾರ್ಯದಿಂದ ಅನಿಷ್ಟ ವಾಗುವ ಸಂಭವವಿದೆಯೋ ಆ ಕಾರ್ಯದಲ್ಲಿ ಆಲೋಚನೆ ಹೇಳುವುದು ನಮ್ಮಂತಹವರ ಕೆಲಸವಲ್ಲ. ನಾನು ನಿಮ್ಮೆಲ್ಲರ ಶುಭವನ್ನು ಕೋರು ವಂತೆಯೇ ಯುಧಿಷ್ಠಿರ ಪ್ರಭೃತಿಗಳ ಶುಭವನ್ನೂ ಕೋರುತ್ತಿರುವೆನು. ಅಜ್ಞಾತವಾಸ ಮಾಡುತ್ತಿರುವಾಗ ಪಾಂಡವರು ನಿನ್ನ ದೃಷ್ಟಿಗೆ ಬಿದ್ದು ಮತ್ತೆ ಹನ್ನೆರಡು ವರ್ಷಗಳ ಕಾಲ ನಿಬಿಡಾರಣ್ಯದಲ್ಲಿ ಅಲೆಯುತ್ತಿರಲಿ ಎಂದು ನಾನೆಂದಿಗೂ ಕೋರೆನು. ಈಗ ನಾನು ಹೇಳುವ ಮಾತು ಈರ್ಷ್ಯಾಮೂಲಕವಾದುದೂ ಅಲ್ಲ, ಅನ್ಯಾಯವೂ ಅಲ್ಲ. ಯಾವನು ಸತ್ಯವ್ರತನೋ ಅವನು ಸಭಾಮಧ್ಯದಲ್ಲಿ ನಿಂತು ನಿರ್ದಾಕ್ಷಿಣ್ಯವಾಗಿ ಯಥಾರ್ಥವಾದ ಉಪದೇಶವನ್ನೇ ಮಾಡುವನು; ನಾನು ಯಥಾರ್ಥ ವನ್ನು ಹೇಳದೆಹೋದರೆ ಧರ್ಮಭ್ರಷ್ಟನಾಗುವೆನು. ನೀನು ಯಾವಾಗ ಜಿಜ್ಞಾಸಮಾಡಿದರೂ ನಾನು ನನ್ನ ಮನೋಗತವನ್ನು ಮರೆಮಾಜದೆ ಸ್ಪಷ್ಟಾಕ್ಷರದಲ್ಲಿ ನಿನಗೆ ಹೇಳದೆ ಬಿಡೆನು; ನಾನು ಬಾಯ್ಬಿಟ್ಟು ಹೇಳುತ್ತೇನೆ, ಕೇಳು—ಯುಧಿಷ್ಠಿರನು ಸತ್ಯ, ಧೃತಿ, ಕ್ಷಮೆ, ತೇಜಸ್ವಿತೆ, ಸರಳತೆ—ಇತ್ಯಾದಿ ಸದ್ಗುಣಗಳಲ್ಲಿ ಅದ್ವಿತೀಯನು,

ಅವನಿಗೆ ಸಮಾನರಿಲ್ಲ; ಅವನ ಪುಣ್ಯಬಲದಿಂದ, ಅವನು ಕಾಲಿಟ್ಟಲ್ಲಿ ಪಾಪಸ್ಪರ್ಶವಾಗದು; ಅಲ್ಲಿ ವಾಸಮಾಡುವವರು ಸದಾಚಾರ ಸಂಪನ್ನರಾಗಿ ಅನುದಿನವೂ ಸತ್ಕಾರ್ಯವನ್ನೇ ಮಾಡುತ್ತಿರುವರು. ಯುಧಿಷ್ಠಿರನು ಧರ್ಮಬುದ್ಧಿಯಿಂದ ಪ್ರೇರಿತನಾಗಿ ಅನುಕ್ಷಣವೂ ಧರ್ಮಮಾರ್ಗದಲ್ಲಿಯೇ ನಡೆಯುತ್ತಿರುವನು. ನಾನು ಅವನಿಗೆ ಅಮಂಗಳವನ್ನು ಕೋರೆನು.''

ಭೀಷ್ಮನು ಹೀಗೆಂದು ನುಡಿದು ಮೌನವನ್ನು ಧರಿಸುತ್ತಲೆ ದ್ರೋಣಾಚಾರ್ಯ ಪ್ರಭೃತಿಗಳಾದ ವಯೋವೃದ್ಧರೂ ಧರ್ಮಾನುರಕ್ತರೂ ಅವನ ಸ್ಪಷ್ಟೋಕ್ತಿಯನ್ನು ಮೆಚ್ಚಿ ಅನುಮೋದಿಸಿದರು.

ಅನಂತರದಲ್ಲಿ ದುರ್ಯೋಧನನು ವಿರಾಟ ಸೇನಾಪತಿ ಕೀಚಕನು ಹತನಾದನೆಂಬ ವಾರ್ತೆಯಿಂದ ಉತ್ಸಾಹಗೊಂಡು ಕರ್ಣ ಪ್ರಭೃತಿಗಳ ಆಲೋಚನೆಯನ್ನು ಕೇಳಿ, ಭೀಷ್ಮ ದ್ರೋಣ ವೀರ ಪ್ರಮುಖರೊಡನೆ ವಿರಾಟನ ಗೋಧನ ಹರಣಾರ್ಥವಾಗಿ ಪಯಣಮಾಡಿದರು. ಗೋಗ್ರಹಣಕ್ಕೆ ಕೌರವ ಸೇನೆಯು ಬರುತ್ತಲೆ ವಿರಾಟಕುಮಾರನಾದ ಉತ್ತರನು ಸುಸಜ್ಜಿತ ಸೇನಾ ಸಮೇತನಾಗಿ ಗೋಧನ ರಕ್ಷಣೆಗೆ ಹೊರಟನು. ಬೃಹನ್ನಳಾ ವೇಷಧಾರಿಯಾದ ಅರ್ಜುನನು ಉತ್ತರನ ಸಾರಥಿಯಾದನು. ಆದರೆ ಉತ್ತರನು ಕೌರವ ವೀರರ ಮುಂದೆ ಹೆದರಿದುದನ್ನು ಕಂಡು ಅರ್ಜುನನು ಶಮೀವೃಕ್ಷದಲ್ಲಿ ಬಚ್ಚಿಟ್ಟಿದ್ದ ಪ್ರಸಿದ್ಧ ಗಾಂಡೀವವನ್ನೂ ಬಾಣಗಳನ್ನೂ ತೆಗೆದುಕೊಂಡುಬಂದು ಉತ್ತರನನ್ನು ಸಾರಥಿಯಾಗಿರೆಂದು ತಾನೇ ಯುದ್ಧಕ್ಕೆ ನಿಂತನು. ನಿಮಿಷಮಾತ್ರದಲ್ಲಿ ಕೌರವ ಸೇನೆಯು ಗಾಂಡೀವಧರನಾದ ಅರ್ಜುನನ ಗುರುತುಹಿಡಿಯಿತು. ಭೀಷ್ಮನು ಅರ್ಜುನನ ಪರಾಕ್ರಮವನ್ನೂ ಹೊಳೆಯುತ್ತಿರುವ ಮುಖಮಂಡಲವನ್ನೂ ಗಾಂಡೀವಕ್ಕೆ ತೊಡಿಸಿದ್ದ ವಿಚಿತ್ರ ಶರಜಾಲದ ಜೋಡಣೆಯನ್ನೂ ನೋಡಿ ಅವನೇ ಅರ್ಜುನನೆಂದು ನಿಶ್ಚಯಿಸಿ, ಏಕಕಾಲದಲ್ಲಿ ಆಹ್ಲಾದವನ್ನೂ ವಿಸ್ಮಯವನ್ನೂ ಪಟ್ಟನು. ವೀರನ ಗುಣವನ್ನು ವೀರನೇ ಬಲ್ಲನಾದುದರಿಂದ, ಕೌರವ ಸಭೆಯಲ್ಲಿ ಭೀಷ್ಮ ದ್ರೋಣರನ್ನು ಬಿಟ್ಟರೆ ಇನ್ನಾರೂ ಅರ್ಜುನನ ವೀರತ್ವವನ್ನೂ ಅಸ್ತ್ರ ಪ್ರಯೋಗದಲ್ಲಿ ಅವನ

ಕೌಶಲ ಮರ್ಮವನ್ನೂ ಬಲ್ಲವರಿರಲಿಲ್ಲ. ಅರ್ಜುನನು ಯುದ್ಧಕ್ಕೆ ಸಜ್ಜಿತನಾಗಿ ಬಂದು ನಿಂತುದನ್ನು ಕಂಡು ಕೌರವರ ಪರಾಜಯವು ತಪ್ಪಿದುದಲ್ಲವೆಂದು ಭೀಷ್ಮನು ತಿಳಿದುಕೊಂಡನು. ಅಜ್ಞಾತವಾಸ ಕಾಲದಲ್ಲಿಯೇ ಅರ್ಜುನನು ಕಾಣಿಸಿಕೊಂಡನು; ಸಂಕೇತಾನುಸಾರ ವಾಗಿ ಪಾಂಡವರು ಮತ್ತೆ ಹನ್ನೆರಡು ವರ್ಷಗಳು ಅರಣ್ಯವಾಸ ಮಾಡ ಬೇಕಾಗುವುದು, ಎಂದೆಣಿಸಿ ದುಯೋರ್ಧನನು ಹಿಗ್ಗಿದನು.

ಆಗ ಭೀಷ್ಮನು—"ಕುರುರಾಜ! ಪಾಂಡವರು ಆಡಿದಂತೆ ನಡೆ ಯುವರು, ದುರಾಸೆಯಿಲ್ಲದವರು, ಪರಮ ಧಾರ್ಮಿಕರು. ಅವರು ಧರ್ಮ ಭ್ರಷ್ಟರಾಗುವರೆಂದು ನಾನೆಂದಿಗೂ ನಂಬೆನು. ಅವರು ಅಜ್ಞಾತವಾಸ ದಲ್ಲಿ ಒಂದು ವರ್ಷವಲ್ಲ, ವರ್ಷದಮೇಲೆ ಐದು ತಿಂಗಳು ಕಳೆದಿರುವರು. ಅರ್ಜುನನು ಅದನ್ನು ತಿಳಿದೇ ಯುದ್ಧಕ್ಕೆ ಬಂದಿದ್ದಾನೆ, ಸಂದೇಹವಿಲ್ಲ. ಪಾಂಡವರಿಗೆ ಕಪಟೋಪಾಯದಿಂದ ರಾಜ್ಯವನ್ನು ಸಂಪಾದಿಸಿಕೊಳ್ಳುವ ಅಭಿಲಾಷೆ ಇದ್ದಿದ್ದ ಪಕ್ಷದಲ್ಲಿ ಕಪಟ ದ್ಯೂತದಲ್ಲಿಯೇ ಅವರ ಸಾಮರ್ಥ್ಯ ವನ್ನು ತೋರಿಸುತ್ತಿದ್ದರು. ಅವರು ಆಟವಾಡುವಂತೆ ಸುಲಭವಾಗಿ ಪ್ರಾಣವನ್ನು ತೊರೆಯಬಲ್ಲರು; ಅಸತ್ಯ ಪಥದಲ್ಲಿ ಮಾತ್ರ ಹೆಜ್ಜೆ ಯಿಡರು" ಎಂದು ಹೇಳಿ ಅಸ್ತ್ರ ಪ್ರಯೋಗದಲ್ಲಿ ಅರ್ಜುನನ ಶ್ರೇಷ್ಠತ್ವ ವನ್ನು ಕೊಂಡಾಡಿದನು. ದ್ರೋಣಾಚಾರ್ಯನೂ ಅರ್ಜುನನ ಮಹಿಮೆ ಯನ್ನು ಪ್ರಶಂಸೆಮಾಡಿದನು. ಆದರೆ ದುಯೋರ್ಧನನೂ ಕರ್ಣನೂ ಅರ್ಜುನನ ಸಾಮರ್ಥ್ಯವನ್ನು ತೃಣೀಕರಿಸಿ ತಮ್ಮ ಹೆಮ್ಮೆಯನ್ನೇ ದುರಾಗ್ರಹದಿಂದ ಸಾಡುತ್ತಿದ್ದರು. ಭೀಷ್ಮನು ಕುರುರಾಜನ ಕಾರ್ಯ ಭಾರವನ್ನು ವಹಿಸಿದ್ದುದರಿಂದ ಅರ್ಜುನನ ವಿಪಕ್ಷ ಪಕ್ಷವಾಗಿಯೇ ರಣರಂಗದಲ್ಲಿ ನಿಂತು ಕದನಕ್ಕೆ ಪ್ರವರ್ತಿಸಿದನು. ಭೀಷ್ಮನು ಎಣಿಸಿ ದ್ದಂತೆಯೇ ಅರ್ಜುನನು ಗೆದ್ದನು. ಕೌರವರು ಆಕಳುಗಳನ್ನು ಅಪಹರಿ ಸಲಾರದೆ ಹತಾಶರಾಗಿ ಬಂದ ದಾರಿಯನ್ನು ಹಿಡಿದರು.

ವಿರಾಟರಾಯನು ತನ್ನ ಮಗನ ಮೂಲಕವಾಗಿ ಅರ್ಜುನನ ವೃತ್ತಾಂತವನ್ನೂ ಗೋಧನ ರಕ್ಷಣೆಯಾದುದನ್ನೂ ಕೇಳಿ ಆಹ್ಲಾದ ಪಟ್ಟನು. ಕೃಷ್ಣಾ ಸಮೇತರಾದ ಪಾಂಡವರ ಪೂರ್ವೋತ್ತರವು ತಿಳಿಯ

ಬರುತ್ತಲೆ ಅವನ ಆನಂದಕ್ಕೆ ಕೊನೆಯಿಲ್ಲವಾಯಿತು. ಆಗ ಅವನು ತನ್ನ ಮಗಳನ್ನು ಅರ್ಜುನನಿಗೆ ಕೊಡುವ ಆಲೋಚನೆ ಮಾಡಿದನು. ಆದರೆ, ಅರ್ಜುನನು ಸಂವತ್ಸರಕಾಲ ವಿರಾಟ ಕುಮಾರಿಗೆ ವಿದ್ಯೆಯನ್ನು ಕಲಿಸುತ್ತಿದ್ದನು. ಶಿಷ್ಯಳಿಗೆ ಗುರುವಿನಲ್ಲಿ ಎಷ್ಟು ಶ್ರದ್ಧಾಭಕ್ತಿ ಇದ್ದಿತೋ ಗುರುವಿಗೂ ಶಿಷ್ಯಳಲ್ಲಿ ಅಷ್ಟು ಪ್ರೀತಿಯಿದ್ದಿತು. ಈ ಬಗೆಯ ಸಂಬಂಧ ವನ್ನಾಲೋಚಿಸಿ ಅರ್ಜುನನು ಉತ್ತರೆಯನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳುವೆನೆಂದನು; ಅದಕ್ಕೆ ವಿರಾಟನೂ ಒಪ್ಪಿದನು. ಕೂಡಲೆ ಶ್ರೀಕೃಷ್ಣನಿಗೆ ಹೇಳಿಕಳುಹಿಸಲು, ಆತನು ತನ್ನ ಸೋದರಳಿಯನಾದ ಅಭಿಮನ್ಯುವನ್ನು ಕರೆದುಕೊಂಡು ಸ್ವಜನ ಪರಿಜನ ಸಮೇತನಾಗಿ ವಿರಾಟನ ರಾಜಧಾನಿಗೆ ಬಂದನು. ಪಾಂಡವರ ಮಾವನಾದ ದ್ರುಪದ ರಾಯನೂ ತನ್ನ ಸ್ವಕೀಯರೊಡನೆ ಅಲ್ಲಿಗೆ ಬಂದು ಸೇರಿದನು. ವಿರಾಟ ನಗರದಲ್ಲಿ ಸಂಭ್ರಮದಿಂದ ಅಭಿಮನ್ಯುವಿಗೂ ಉತ್ತರೆಗೂ ವಿವಾಹ ವಾಯಿತು.

ವಿವಾಹೋತ್ಸವ ಮುಗಿದ ಮಾರನೆಯದಿನ ಬೆಳಗಾಗುತ್ತಲೆ ಮದುವೆಗೆ ಬಂದಿದ್ದ ರಾಜರೆಲ್ಲರೂ ವಿರಾಟರಾಯನ ಸಭಾ ಭವನದಲ್ಲಿ ಸೇರಿದರು. ಆ ರಾಜರ ಸಂಭಾಷಣೆಯೆಲ್ಲ ಮುಗಿದ ತರುವಾಯ, ಶ್ರೀಕೃಷ್ಣನು ಪಾಂಡವರ ಕಾರ್ಯ ಪ್ರಸ್ತಾವವನ್ನೆತ್ತಿದನು.

ಧರ್ಮರಾಯನು ಶಕುನಿಯ ಸಂಗಡ ಜೂಜಾಡಿ ಮೋಸಹೋಗಿ ರಾಜ್ಯವನ್ನು ಕಳೆದುಕೊಂಡು ವನವಾಸದಲ್ಲಿಯೂ ಅಜ್ಞಾತವಾಸ ದಲ್ಲಿಯೂ ಪಟ್ಟ ಪಾಡುಗಳೆಲ್ಲವನ್ನೂ ವರ್ಣಿಸಿ, ಕೃಷ್ಣನು ಇಂತೆಂದನು:– "ಈ ಸಂದರ್ಭದಲ್ಲಿ, ಧರ್ಮರಾಯ ದುರ್ಯೋಧನರಿಬ್ಬರಿಗೂ ಯಾವುದು ಹಿತವೋ, ಕುರುಪಾಂಡವರಿಬ್ಬರಿಗೂ ಯಾವುದು ಧರ್ಮವೋ, ಯಾವುದು ವಿಹಿತವೋ, ಯಶಸ್ಕರವೋ ತಾವೆಲ್ಲರೂ ಯೋಚಿಸಿರಿ. ಅಧರ್ಮದಿಂದ ಬರುವುದಾದರೆ ಧರ್ಮರಾಯನು ಸುರ ಸಾಮ್ರಾಜ್ಯವನ್ನಾದರೂ ಒಲ್ಲನು; ಧರ್ಮಾರ್ಥಗಳೆರಡಕ್ಕೂ ಕುಂದಿಲ್ಲದಂತೆ ಒಂದು ಗ್ರಾಮದ ಯಾಜಮಾನ್ಯವು ಬಂದರೂ ಸಾಕೆನ್ನುವನು. ದುರ್ಯೋಧನಾದಿಗಳು ಸ್ವಸಾಮರ್ಥ್ಯದಿಂದ ರಣದಲ್ಲಿ ಅರ್ಜುನನನ್ನು ಗೆಲ್ಲಲಾರರು. ಆದರೂ

ಯುಧಿಷ್ಠಿರ ಪ್ರಭೃತಿಗಳು ಅವರ ಕ್ಷೇಮವನ್ನೇ ಕೋರುತ್ತಿರುವರು. ತಾವೆಲ್ಲರೂ ದುರ್ಯೋಧನಾದಿಗಳ ದುರಾಸೆಯನ್ನೂ ಯುಧಿಷ್ಠಿರನ ಧರ್ಮ ಬುದ್ಧಿಯನ್ನೂ ಅವರವರ ಸಂಬಂಧವನ್ನೂ ಆಲೋಚಿಸಿ ಕರ್ತವ್ಯವನ್ನು ನಿಶ್ಚಯಿಸಿರಿ. ಅರ್ಧ ರಾಜ್ಯವನ್ನು ಕೊಟ್ಟು ಸಂಧಿ ಮಾಡಿಕೊಂಡರೆ ಕೌರವರು ಉಳಿಯುವರು; ಇಲ್ಲವಾದರೆ ಶೂರರಾದ ಪಾಂಡವರು ಮಿತ್ರರೊಡನೆ ಸೇರಿ ಕೌರವರೆಲ್ಲರನ್ನೂ ನಾಶಮಾಡುವರು. ಈ ಅರ್ಥವನ್ನು ಧೃತರಾಷ್ಟ್ರನಿಗೆ ತಿಳಿಸುವುದಕ್ಕಾಗಿ ಧರ್ಮಶೀಲನೂ ಕುಲೀನನೂ ಸಮರ್ಥನೂ ಆದ ಒಬ್ಬ ದೂತನನ್ನು ಕಳುಹಿಸುವುದು ಆವಶ್ಯಕ.''

ನಿಷ್ಪಕ್ಷಪಾತ ಬುದ್ಧಿಯಿಂದ ಹೇಳಿದ ಕೃಷ್ಣನ ಧರ್ಮಾರ್ಥಸಾಧಕವಾದ ಮಧುರ ವಾಕ್ಯವನ್ನು ಕೇಳಿ ಬಲರಾಮನು, ತಮ್ಮನ ಮಾತು ಧರ್ಮ ಸಮ್ಮತವಾದುದೆಂದು ಕೊಂಡಾಡಿದರೂ ಧರ್ಮರಾಯನು ತಾನಾಗಿ ಶಕುನಿಯ ಸಂಗಡ ಜೂಜಾಡಿ ಸೋತಿರುವಲ್ಲಿ ಶಕುನಿಯ ಅಪರಾಧವೇನು? ಎಂದು ಧರ್ಮರಾಯನನ್ನು ಮೂದಲಿಸಿ ದುರ್ಯೋಧನನಲ್ಲಿ ಪಕ್ಷಪಾತವನ್ನು ತೋರಿಸಿ ಕಡೆಗೆ, "ಸಂಧಿಯಿಂದ ಬರುವ ಅರ್ಥವೇ ಅರ್ಥವು; ಯುದ್ಧದಲ್ಲಿ ಅನ್ಯಾಯದಿಂದ ಬರುವ ಅರ್ಥವು ಅರ್ಥವೇ ಅಲ್ಲ'' ಎಂದು ನುಡಿದು ಕೃಷ್ಣನ ಮಾತನ್ನು ಅನುಮೋದಿಸಿದನು.

ಆ ಬಳಿಕ ಸಾತ್ಯಕಿಯೆದ್ದು ಬಲರಾಮನಾಡಿದ ಮಾತನ್ನು ಆಕ್ಷೇಪಿಸುತ್ತ—"ಮನುಷ್ಯನ ಮನಸ್ಸು ಇರುವಂತೆಯೇ ಅವನ ಬಾಯಿಂದ ಬರುವ ಮಾತೂ ಇರುವುದು. ನಿನ್ನ ಮನಸ್ಸಿನಂತೆಯೇ ನಿನ್ನ ಮಾತು. ಒಂದೇ ಕುಲದಲ್ಲಿ ಬಲಶಾಲಿಗಳೂ ಹುಟ್ಟುವರು, ಹಂದೆಗಳೂ ಹುಟ್ಟುವರು. ನೀನು ಹಂದೆ; ನೀನಾಡಿದ ಮಾತಿಗೆ ನನಗೆ ಕೋಪವಿಲ್ಲ; ಇವರೆಲ್ಲರೂ ನಿನ್ನ ಮಾತನ್ನು ಕೇಳಿಕೊಂಡು ಸುಮ್ಮನಿರುವರಲ್ಲಾ ಎಂದು ನನಗೆ ಕೋಪ. ಧರ್ಮರಾಯನಮೇಲೆ ದೋಷಲೇಶವನ್ನಾದರೂ ಈ ಸಭೆಯ ಮಧ್ಯದಲ್ಲಿ ನಿಂತುಹೇಳುವಷ್ಟು ಧೈರ್ಯವು ನಿನಗೆಲ್ಲಿಂದ ಬಂದಿತು? ಇಂತಹ ಮಾತನ್ನಾಡುವುದಕ್ಕೆ ನಿನ್ನನ್ನು ಈ ಸಭೆಗೆ ಹೇಗೆ

ಬಿಟ್ಟರು ? ಖೂಳ ಶಕುನಿಯು ಕಪಟವನ್ನರಿಯದ ಧರ್ಮರಾಯನನ್ನು ದ್ಯೂತದಲ್ಲಿ ಸೋಲಿಸಿದನು. ಪಂತವನ್ನು ಕಟ್ಟಿದಂತೆ ಧರ್ಮರಾಯನು ತಪ್ಪದೆ ನಡೆದನು. ಈಗ ಅವನು ರಾಜ್ಯವನ್ನು ಕೇಳುವುದು ಅನ್ಯಾಯವೆ ? ದುರ್ಯೋಧನಾದಿಗಳಿಗೆ ಭೀಷ್ಮ ದ್ರೋಣಾದಿಗಳು ಎಷ್ಟೋ ಬಗೆಯಲ್ಲಿ ಬುದ್ಧಿ ಹೇಳಿ ಪಾಂಡವರಿಗೆ ಅವರ ಪೈತೃಕ ರಾಜ್ಯವನ್ನು ಕೊಡಿರೆಂದು ಎಷ್ಟು ಬೇಡಿದರೂ ಅವರು ಕೇಳಲಿಲ್ಲ. ಅವರನ್ನು ಬಾಣದಿಂದ ಬೇಡುವುದೇ ಸರಿಯೆಂದು ನನಗೆ ತೋರುವುದು. ನಮ್ಮನ್ನು ಕೊಲ್ಲಬಂದ ಶತ್ರುಗಳನ್ನು ಕೊಲ್ಲುವುದು ಅಧರ್ಮವಲ್ಲ. ಅಂತಹವರನ್ನು ಯಾಚಿಸುವುದು ಅಧರ್ಮವು, ಅಕೀರ್ತಿಕರವು. ಇಂದು ಧರ್ಮರಾಯನಿಗೆ ರಾಜ್ಯವು ಬರಬೇಕು ; ಇಲ್ಲವೆ, ಶತ್ರುಗಳೆಲ್ಲರೂ ರಣದಲ್ಲಿ ಹತರಾಗಬೇಕು '' ಎಂದನು.

ಅನಂತರದಲ್ಲಿ ವೃದ್ಧ ದ್ರುಪದರಾಯನು ಸಾತ್ಯಕಿಯ ಮಾತನ್ನು ಪೋಷಿಸುತ್ತ—'' ಮಹಾ ಬಾಹುವೇ ! ನೀನು ಹೇಳುವುದೇ ಸರಿ. ದುರ್ಯೋಧನನು ಒಳ್ಳೆಯ ಮಾತಿಗೆ ರಾಜ್ಯವನ್ನು ಕೊಡುವನಲ್ಲ. ಧೃತರಾಷ್ಟ್ರನು ಮಗನ ಮಾತನ್ನು ಮೀರುವನಲ್ಲ. ಭೀಷ್ಮದ್ರೋಣರು ಅವರ ಹಂಗಿಗೊಳಗಾಗಿ ಅವರು ಆಡಿದಂತೆ ಆಡುವರು. ಕರ್ಣ ಶಕುನಿಗಳು ಮೂರ್ಖರು. ಅವರೂ ಅವರ ಜಾಡೆಯನ್ನು ಹಿಡಿಯುವರು. ನನ್ನ ಬುದ್ಧಿಗೆ ಬಲದೇವನ ಮಾತು ಸರಿಹೋಗದು. ಮೃದು ವಾಕ್ಯವನ್ನಾಡಿದರೆ ಆ ಪಾಪಾತ್ಮ ದುರ್ಯೋಧನನು ಆಡಿದವರನ್ನು ಅಶಕ್ತರೆನ್ನುವನು. ಆದುದರಿಂದ ನಾವು ಯುದ್ಧ ಸನ್ನಾಹವನ್ನು ಮಾಡುವುದು ಆವಶ್ಯಕ. ನಮ್ಮ ಮಿತ್ರ ರಾಜರನ್ನು ಸೇನಾ ಸಮೇತರಾಗಿ ಬರಹೇಳಲು ದೂತರನ್ನು ಕಳುಹಿಸೋಣ. ಧೃತರಾಷ್ಟ್ರನ ಬಳಿಗೆ ನನ್ನ ಪುರೋಹಿತನನ್ನು ದೂತನನ್ನಾಗಿ ಕಳುಹಿಸುವೆನು. ಆ ಬ್ರಾಹ್ಮಣನು ಧೃತರಾಷ್ಟ್ರ ದುರ್ಯೋಧನರಿಗೂ ಭೀಷ್ಮ ದ್ರೋಣ ವಿದುರಾದಿಗಳಿಗೂ ನಮ್ಮ ಸಂದೇಶವನ್ನು ತಿಳಿಸಲಿ '' ಎಂದನು.

ಶ್ರೀಕೃಷ್ಣನು ದ್ರುಪದರಾಯನಾಡಿದ ಮಾತನ್ನು ಕೊಂಡಾಡಿ— '' ತಾವು ಆಡಿದ ಮಾತು ತಮಗೆ ಅನುಗುಣವಾಗಿಯೂ ಬಲಶಾಲಿಗಳಾದ

ಪಾಂಡವರ ಇಷ್ಟಾರ್ಥಸಿದ್ಧಿಗೆ ಅನುಕೂಲವಾಗಿಯೂ ಇರುವುದು. ನೀತಿಯನ್ನು ಬಯಸುವರಾದ ನಾವು ತಾವು ಹೇಳಿದಂತೆ ಮಾಡುವುದೇ ಕರ್ತವ್ಯ. ಆದರೆ ಕುರುಪಾಂಡವರು ಅವರವರೊಳಗೆ ಮನಸ್ಸು ಬಂದಂತೆ ನಡೆದುಕೊಂಡರೂ, ಬಂಧುತ್ವದಲ್ಲಿ ನಮಗೆ ಅವರಿಬ್ಬರೂ ಸಮಾನರು. ತಾವೂ ನಾವೂ ವಿವಾಹಾರ್ಥವಾಗಿ ಬಂದವರು. ವಿವಾಹವಾಯಿತು. ಸಂತೋಷವಾಗಿ ನಾವು ಇನ್ನು ನಮ್ಮ ನಮ್ಮ ಊರಿಗೆ ಹೊರಡೋಣ. ವಯಸ್ಸಿನಲ್ಲಿಯೂ ಜ್ಞಾನದಲ್ಲಿಯೂ ತಾವು ವೃದ್ಧತಮರು ! ನಾವೆಲ್ಲರೂ ತಮಗೆ ಶಿಷ್ಯರ ಹಾಗೆ, ಧೃತರಾಷ್ಟ್ರನು ತಮ್ಮನ್ನು ಮಾನ್ಯರೆಂದೆಣಿಸಿರುವನು, ದ್ರೋಣ ಕೃಪಾಚಾರ್ಯರಿಬ್ಬರೂ ತಮ್ಮ ಮಿತ್ರರು. ಪಾಂಡವರ ಕಾರ್ಯಾರ್ಥವಾಗಿ ಕೌರವರ ಬಳಿಗೆ ತಾವು ದೂತನನ್ನು ಕಳುಹಿಸಬೇಕೆಂಬುದೇ ನಮ್ಮೆಲ್ಲರ ಅಭಿಪ್ರಾಯ. ಕುರುರಾಯನು ನ್ಯಾಯಕ್ಕೆ ಕಟ್ಟುಬಿದ್ದು ಸಂಧಿಮಾಡಿಕೊಳ್ಳುವ ಪಕ್ಷದಲ್ಲಿ ಕುರುಪಾಂಡವರಿಗಿರುವ ಭ್ರಾತೃಭಾವಕ್ಕೆ ಕುಂದುಬಾರದಿರುವುದು. ಹಾಗೆ ಮಾಡದೆ ದುರ್ಯೋಧನನು ಬೆರತು ಬುದ್ಧಿಹೀನನಾಗಿ ಸಾಮಕ್ಕೊಡಂಬಡದ ಪಕ್ಷಕ್ಕೆ, ಮೊದಲು ಇತರ ರಾಜರೆಲ್ಲರನ್ನೂ ಕರೆಯಕಳುಹಿಸಿ, ಆಮೇಲೆ ನಮ್ಮನ್ನು ಬರಹೇಳಿರಿ. ಆಗ ಮಂದಬುದ್ಧಿ ದುರ್ಯೋಧನನೂ ಅವನ ಅಮಾತ್ಯರೂ ಬಂಧು ಬಳಗವೂ ಅರ್ಜುನನ ಗಾಂಡೀವದಿಂದ ಹತರಾಗದೆ ಹೋಗರು ” ಎಂದನು.

ತರುವಾಯ, ಕೃಷ್ಣನು ವಿರಾಟರಾಯನ ಸತ್ಕಾರವನ್ನು ಕೈಕೊಂಡು ದ್ವಾರಕಾಪಟ್ಟಣಕ್ಕೆ ಪಯಣಮಾಡಿದನು. ಮದುವೆಗಾಗಿ ಬಂದಿದ್ದವರೆಲ್ಲರೂ ತಮ್ಮತಮ್ಮ ಊರಿಗೆ ತೆರಳಿದರು. ಆಗ ಯುಧಿಷ್ಠಿರನೂ ವಿರಾಟನೂ ಯುದ್ಧಸನ್ನಾಹವನ್ನು ಮಾಡತೊಡಗಿ ಮಿತ್ರರಾಜರ ಸಾಹಾಯ್ಯವನ್ನು ಪಡೆಯುವುದಕ್ಕಾಗಿ ದೂತರನ್ನು ಕಳುಹಿಸಿದರು. ಅವರು ಕೋರಿದ ರಾಜರೆಲ್ಲರೂ ಸೇನಾಸಮೇತರಾಗಿ ಬಂದು ಸೇರಿದರು. ಪಾಂಡವರು ಯುದ್ಧಸನ್ನಾಹ ಮಾಡುತ್ತಿರುವುದನ್ನು ಕೇಳಿ ದುರ್ಯೋಧನಾದಿಗಳು ತಮ್ಮ ಮಿತ್ರ ರಾಜರನ್ನೂ ಸೇನಾ ಸಮೇತರನ್ನಾಗಿ ಕರೆಯಿಸಿಕೊಂಡರು. ದ್ರುಪದರಾಯನು, ಧೃತರಾಷ್ಟ್ರನ ಬಳಿಗೆ ಹೋಗಿ

ಆಡತಕ್ಕ ಮಾತುಗಳೆಲ್ಲವನ್ನೂ ತನ್ನ ಪುರೋಹಿತನಿಗೆ ಬೋಧಿಸಿ ಅವನನ್ನು ಹಸ್ತಿನಾಪುರಕ್ಕೆ ಕಳುಹಿಸಿದನು. ನೀತಿ ಶಾಸ್ತ್ರಾರ್ಥವನ್ನು ಬಲ್ಲ ಆ ಬ್ರಾಹ್ಮಣನು ಶಿಷ್ಯರೊಡಗೂಡಿ ಪಾಂಡವರ ಹಿತಾರ್ಥವಾಗಿ ಹಸ್ತಿನಾಪುರಕ್ಕೆ ಪ್ರಯಾಣಮಾಡಿದನು.

ಇತ್ತ ಅರ್ಜುನನು ಕೃಷ್ಣನ ದರ್ಶನಾರ್ಥವಾಗಿ ದ್ವಾರಕಿಗೆ ಹೊರಟನು. ಆ ವರ್ತಮಾನವನ್ನು ಕೇಳಿ ದುರ್ಯೋಧನನೂ ಕೃಷ್ಣನನ್ನು ಕಾಣುವ ಸಲುವಾಗಿ ಹೊರಟನು. ಇಬ್ಬರೂ ಏಕ ಕಾಲದಲ್ಲಿ ದ್ವಾರಕಾ ಪಟ್ಟಣವನ್ನು ಸೇರಿ ಕೃಷ್ಣನನ್ನು ನೋಡಹೋದರು. ಕೃಷ್ಣನು ನಿದ್ದೆ ಹೋಗುತ್ತಿರಲಾಗಿ ದುರ್ಯೋಧನನು ಅವನ ತಲೆಯ ದೆಸೆಯಲ್ಲಿಯೂ ಅರ್ಜುನನು ಅವನ ಕಾಲ ದೆಸೆಯಲ್ಲಿಯೂ ಕುಳಿತರು. ಕೃಷ್ಣನಿಗೆ ಎಚ್ಚರವಾಗುತಲೆ ಕೃಷ್ಣನು ಮೊದಲು ಅರ್ಜುನನ್ನು ನೋಡಿ ಆಮೇಲೆ ದುರ್ಯೋಧನನನ್ನು ನೋಡಿದನು. ಕೃಷ್ಣನು ಅವರಿಬ್ಬರ ಯೋಗ ಕ್ಷೇಮವನ್ನು ವಿಚಾರಿಸಿ ಬಂದ ಕಾರ್ಯವೇನೆಂದು ಕೇಳಿದನು. ದುರ್ಯೋಧನನು "ಈಗ ಪ್ರಾಪ್ತವಾಗಿರುವ ಯುದ್ಧದಲ್ಲಿ ನಿಮ್ಮ ಸಾಹಾಯ್ಯವನ್ನು ಬೇಡಲು ಬಂದೆನು" ಎಂದನು.

ಅದಕ್ಕೆ ಕೃಷ್ಣನು—"ನನಗೆ ಸಖ್ಯದಲ್ಲಿ ನೀವಿಬ್ಬರೂ ಸಮ. ಆದರೆ ಚಿಕ್ಕವನ ಕೋರಿಕೆಯನ್ನು ಮೊದಲು ಕೇಳುವುದು ಧರ್ಮವಾದುದರಿಂದ ಅರ್ಜುನನ ಕೋರಿಕೆಯನ್ನು ಮೊದಲು ಕೇಳಿ ತಿಳಿದುಕೊಳ್ಳುವೆನು" ಎಂದು ನುಡಿದು, "ಅರ್ಜುನ! ರಣ ಪಟುವಾಗಿರುವ ನನ್ನ ನಾರಾಯಣೀ ಸೇನೆಯು ಆಯುಧಗಳನ್ನು ಧರಿಸಿ ಸಿದ್ಧವಾಗಿರುವುದು. ನಾನು ಅಸ್ತ್ರವನ್ನು ಧರಿಸೆನು. ಯುದ್ಧಮಾಡೆನು. ನಿನಗೆ ನನ್ನ ಸೇನೆಯು ಬೇಕೊ ನಾನು ಬೇಕೊ? ಹೇಳು" ಎಂದು ಕೇಳಿದನು.

ಆಗ ಅರ್ಜುನನು ಕೃಷ್ಣ ಬಲವೇ ಬಲವೆಂದು ಕೃಷ್ಣನನ್ನೂ, ದುರ್ಯೋಧನನು ಸೇನಾ ಬಲವನ್ನು ನಚ್ಚಿ ಅವನ ದೊಡ್ಡ ದಂಡನ್ನೂ ವರಿಸಿ ಸಂತುಷ್ಟರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹಿಂದಿರುಗಿದರು. ಅಹಂಕಾರಶೂನ್ಯನಾದ ಶ್ರೀಕೃಷ್ಣನು ಅರ್ಜುನನು ಕೇಳಿಕೊಂಡಂತೆ, ಅವನ ಸಾರಥಿಯಾಗುವುದಕ್ಕೂ ಒಪ್ಪಿದನು.

ಯುಧಿಷ್ಠಿರನ ಮಿತ್ರ ರಾಜರೆಲ್ಲರೂ ಸೇನಾ ಸಮೇತರಾಗಿ ಉಪಪ್ಲವ್ಯದಲ್ಲಿಯೂ ದುರ್ಯೋಧನನ ಮಿತ್ರ ರಾಜರು ತಮ್ಮ ಸೇನೆಗಳೊಡನೆ ಹಸ್ತಿನಾಪುರದಲ್ಲಿಯೂ ಬಂದಿಳಿದರು.

ಇತ್ತ, ದ್ರುಪದರಾಯನ ಪುರೋಹಿತನು ಹಸ್ತಿನಾಪುರವನ್ನು ಸೇರಿ, ರಾಜಸಭೆಗೆ ಹೋಗಿ, ಧೃತರಾಷ್ಟ್ರ ಭೀಷ್ಮ ವಿದುರರಿಂದ ಸತ್ಕಾರವನ್ನು ಪಡೆದು, ಕುಶಲ ಪ್ರಶ್ನೆಗಳಾದ ಬಳಿಕ, ಸಮಸ್ತ ಸೇನಾನಾಯಕರ ಸಮಕ್ಷದಲ್ಲಿ ದ್ರುಪದರಾಯನು ಹೇಳಿಕಳುಹಿಸಿದ ಮಾತನ್ನು ಇಂತೆಂದು ಅರಿಕೆಮಾಡಿದನು :—

"ಮಹಾ ಬಾಹುಗಳಿರಾ! ತಾವೆಲ್ಲರೂ ಸನಾತನ ರಾಜಧರ್ಮವನ್ನು ಬಲ್ಲವರು. ಧೃತರಾಷ್ಟ್ರನ ಮಕ್ಕಳೂ ಪಾಂಡುವಿನ ಮಕ್ಕಳೂ ಪಿತ್ರಾರ್ಜಿತ ಧನದಲ್ಲಿ ಸಮಭಾಗಸ್ಥರು. ಈ ಧನವನ್ನೆಲ್ಲ ಧೃತರಾಷ್ಟ್ರನ ಮಕ್ಕಳೇ ತೆಗೆದುಕೊಂಡಿರುವರು ; ಪಾಂಡುವಿನ ಮಕ್ಕಳಿಗೆ ಅವರ ಭಾಗವು ಬರಲಿಲ್ಲ. ಆ ಮಹಾತ್ಮರನ್ನು ಸಾಯಗೊಳಿಸುವವರೆಗೂ ಧಾರ್ತರಾಷ್ಟ್ರರು ಉಪಾಯಗಳನ್ನು ಮಾಡಿದರು ; ಆಯುಃಶೇಷವಿದ್ದುದರಿಂದ ಅವರು ಉಳಿದುಕೊಂಡರು. ಮೇಲಾಗಿ, ಅವರು ತಮ್ಮ ಬಾಹುಬಲದಿಂದ ಸಂಪಾದಿಸಿದ ರಾಜ್ಯವನ್ನು ಕೂಡ ಆ ಕ್ಷುದ್ರ ದುರ್ಯೋಧನಾದಿಗಳು ಶಕುನಿಯ ಸಾಹಾಯ್ಯದಿಂದ ಮೋಸಮಾಡಿ ಅಪಹರಿಸಿದರು. ಪಾಂಡವ ವೀರರು ರಾಜಸಭೆಯಲ್ಲಿ ಪತ್ನಿಯೊಡನೆ ಹಲವು ಬಗೆಯ ಅವಮಾನಗಳನ್ನೂ ಅರಣ್ಯವಾಸಾದಿ ನಾನಾ ಕ್ಲೇಶಗಳನ್ನೂ ಅನುಭವಿಸಿದರು. ಕುರುಪುಂಗವರೇ! ಹಿಂದೆ ಆದುದಾಯಿತೆಂದು ಧಾರ್ತರಾಷ್ಟ್ರರ ಕಿಲ್ಬಿಷಗಳೆಲ್ಲವನ್ನೂ ಮರೆತು, ಪಾಂಡವರು ಸಂಧಿಯನ್ನಪೇಕ್ಷಿಸುವರು. ಯುದ್ಧಮಾಡುವ ಸಲುವಾಗಿ ದುರ್ಯೋಧನಾದಿಗಳು ಕಾರಣಗಳನ್ನು ಹೇಳಿದರೂ ಅವು ಒಪ್ಪತಕ್ಕುವಲ್ಲ. ಸುಹೃಜ್ಜನರಾದ ನೀವು ಪಾಂಡವರ ನಡತೆಯನ್ನೂ ದುರ್ಯೋಧನನ ನಡತೆಯನ್ನೂ ಪರ್ಯಾಲೋಚಿಸಿ ಧೃತರಾಷ್ಟ್ರನ ಮಕ್ಕಳನ್ನು ಸಂಧಿಗೊಪ್ಪಿಸಬೇಕು. ಪಾಂಡವರು ವೀರರಾದರೂ ಕೌರವರೊಡನೆ ವಿಗ್ರಹವನ್ನು ಬಯಸರು. ಲೋಕಕ್ಕೆ ಹಾನಿಯಾಗದಂತೆಯೇ, ಪ್ರಾಣಿ ನಾಶವಾಗದಂತೆಯೇ, ಅವರು ತಮ್ಮ

ಭಾಗವನ್ನು ಪಡೆಯಬೇಕೆಂದಿರುವರು. ಪಾಂಡವರ ವಿಪುಲ ಸೇನೆ, ಅರ್ಜುನನ ಪ್ರತಾಪ, ಕೃಷ್ಣನ ಬುದ್ಧಿ—ಇವುಗಳ ಮುಂದೆ ಕಾಳಗಕ್ಕೆ ನಿಲ್ಲಬಲ್ಲ ಧೀರರುಂಟೆ? ಕೌರವರೇ! ನ್ಯಾಯವಾಗಿ ಪಾಂಡವರಿಗೆ ಸಲ್ಲಬೇಕಾದುದನ್ನು ಅವರಿಗೆ ಕೊಡಿಸಿಬಿಡಿರಿ; ಈ ಸಮಯವನ್ನು ಬಿಡಬೇಡಿರಿ.''

ಪ್ರಾಜ್ಞನಾದ ಭೀಷ್ಮನು ಆ ಬ್ರಾಹ್ಮಣನು ಹೇಳಿದುದೆಲ್ಲವನ್ನೂ ಸಾವಧಾನವಾಗಿ ಕೇಳಿ—''ಕೃಷ್ಣನ ಸಹಿತವಾಗಿ ಸರ್ವರೂ ಕ್ಷೇಮವಾಗಿರುವುದು ನಮ್ಮ ಭಾಗ್ಯವೇ ಸರಿ; ಅವರು ಸಾಹಾಯ್ಯಸಂಪನ್ನರಾಗಿರುವುದೂ ನಮ್ಮ ಭಾಗ್ಯವೇ ಸರಿ; ಅವರು ಧರ್ಮಮಾರ್ಗದಲ್ಲಿ ನಡೆಯುತ್ತಿರುವುದೂ ನಮ್ಮ ಪುಣ್ಯವೇ; ಅವರು ಯುದ್ಧಾಭಿಲಾಷೆಯನ್ನು ಬಿಟ್ಟು ಸಂಧಿಯನ್ನು ಬಯಸುತ್ತಿರುವುದೂ ನಮ್ಮ ಪುಣ್ಯವೇ. ನೀವು ಹೇಳುವುದೆಲ್ಲವೂ ಸತ್ಯವೇ ಆದರೂ, ನನ್ನ ಮನಸ್ಸಿಗೆ ನಿಮ್ಮ ವಾಕ್ಯ ಅತಿ ತೀಕ್ಷ್ಣವಾಗಿ ತೋರುವುದು. ನೀವು ಬ್ರಾಹ್ಮಣ ಸ್ವಭಾವ ವಶವರ್ತಿಗಳಾಗಿ ಹೀಗೆ ಮಾತನಾಡಿದಂತೆ ತೋರುತ್ತಿದೆ. ಅದು ಹೇಗಾದರೂ ಇರಲಿ, ಪಾಂಡವರು ರಾಜ್ಯವನ್ನು ಕೇಳುವುದೇನೋ ನ್ಯಾಯ; ಅವರು ಇಲ್ಲಿಯೂ ಕಾಡಿನಲ್ಲಿಯೂ ಕಷ್ಟಗಳನ್ನು ಅನುಭವಿಸಿದರು; ಅಜ್ಞಾತವಾಸದಲ್ಲಿ ಪಡಲಾರದ ಪಾಡು ಪಟ್ಟರು; ಅವರು ಆಡಿದಂತೆ ನಡೆದರು. ಈಗ ಅವರು ರಾಜ್ಯಕ್ಕೆ ಅರ್ಹರೆಂಬುದಕ್ಕೆ ಅಣುಮಾತ್ರವೂ ಸಂದೇಹವಿಲ್ಲ. ಧನುರ್ಧಾರಿಯಾದ ಅರ್ಜುನನು ಬಲಶಾಲಿಯೆಂಬುದಕ್ಕೂ ಸಂಶಯವಿಲ್ಲ. ಅವನ ಪರಾಕ್ರಮದ ಮುಂದೆ ನಿಲ್ಲಬಲ್ಲ ಮಲ್ಲರು ಮೂರು ಲೋಕದಲ್ಲಿಯೂ ಇರರು. ಉಳಿದವರ ಮಾತು ಹೋಗಲಿ, ದೇವೇಂದ್ರನು ಕೂಡ ರಣಭೂಮಿಯಲ್ಲಿ ಅವನ ಮುಂದೆ ನಿಲ್ಲಲಾರನು'' ಎಂದು ಪುರೋಹಿತನ ಮಾತನ್ನು ಅನುಮೋದಿಸಿ ಮಾತನಾಡಿದನು.

ಹೀಗೆ ಭೀಷ್ಮನು ಅರ್ಜುನನನ್ನು ಕೊಂಡಾಡಿದುದನ್ನು ದುರಾತ್ಮನಾದ ಕರ್ಣನು ಕೇಳಿ ಸಹಿಸಲಾರದೆ ಅವನ ಮಾತಿಗೆ ಅಡ್ಡಬಂದು— ''ಎಲೈ ಬ್ರಾಹ್ಮಣನೇ! ನೀನು ಹೇಳಿದುದು ಯಾರಿಗೆ ತಾನೆ ತಿಳಿಯದು?

ಹಾಡಿದುದನ್ನೇ ಹಾಡುತ್ತೀಯೆ. ಧರ್ಮರಾಯನು ದ್ಯೂತದಲ್ಲಿ ಸೋತು ವನವಾಸವನ್ನೂ ಅಜ್ಞಾತವಾಸವನ್ನೂ ಮಾಡಲೊಪ್ಪಿಕೊಂಡನು; ಒಪ್ಪಂದದ ಮೇರೆಗೆ ನಡೆಯದೆ ಅವನು ಅನ್ಯರ ಬಲವನ್ನು ಕಟ್ಟಿಕೊಂಡು ಮೂರ್ಖನೋಪಾದಿಯಲ್ಲಿ ಪೈತೃಕ ರಾಜ್ಯವನ್ನು ಕೇಳುತ್ತಾನೆ; ಅವನು ಬೆದರಿಸಿದ ಮಾತ್ರಕ್ಕೇ ದುರ್ಯೋಧನನು ಒಂದಡಿಯ ನೆಲವನ್ನೂ ಕೊಡನು; ಧರ್ಮಾರ್ಥವಾಗಿ ಬೇಡಿದರೆ ಸಮಸ್ತ ಭೂಮಂಡಲವನ್ನಾದರೂ ಕೊಡಬಲ್ಲನು. ಅವರು ತಾತ ಮುತ್ತಾತಂದಿರ ರಾಜ್ಯವನ್ನು ಅಪೇಕ್ಷಿಸಿದಲ್ಲಿ ವನವಾಸಕಾಲವು ಪೂರೈಸಲಿ; ಆಮೇಲೆ ಬೇಕಾದರೆ ಅವರು ಬಂದು ದುರ್ಯೋಧನನ ಮರೆಯಲ್ಲಿ ಸುರಕ್ಷಿತವಾಗಿರಲಿ" ಎಂದು ನುಡಿದನು.

ಆ ಮಾತನ್ನು ಕೇಳಿ ಭೀಷ್ಮಪಿತಾಮಹನು—"ಕರ್ಣ! ಸುಮ್ಮನೆ ಏಕೆ ಮಾತನಾಡುತ್ತೀಯೆ? ಅರ್ಜುನನು ಒಬ್ಬನೇ ಆರ್ವರು ರಥಿಕರನ್ನು ಬಡಿದು ಕೆಡವಿದಾಗ ನೀನೆಲ್ಲಿದ್ದೆ? ಜ್ಞಾಪಿಸಿಕೊ. ಈ ಬ್ರಾಹ್ಮಣನು ಹೇಳಿದಂತೆ ನಡೆಯದೆ ಹೋದರೆ ದುರ್ಯೋಧನನು ತನ್ನ ಅಮಾತ್ಯರೊಡನೆ ನಾಶವಾಗುವುದೇನೋ ಸತ್ಯ" ಎಂದು ನುಡಿದು ಪುರೋಹಿತನು ನ್ಯಾಯಸಮ್ಮತವಾಗಿ ಆಡಿದ ಮಾತನ್ನು ಅನುಮೋದಿಸಿ, ಅವನು ಅಸಂಗತವಾಗಿ ಆಡಿದ ನಿಷ್ಠುರ ವಾಕ್ಯವನ್ನು ಆಕ್ಷೇಪಿಸಿ, ತನ್ನ ಮಾತಿಗೆ ಅಡ್ಡಬಂದು ದೂತನನ್ನೂ ತನ್ನನ್ನೂ ತಿರಸ್ಕರಿಸಿ ಮಾತನಾಡಿದ ಕರ್ಣನ ಪೊಳ್ಳು ಮಾತನ್ನು ನಿರ್ದಾಕ್ಷಿಣ್ಯವಾಗಿ ಎತ್ತಿಹಾಕಿದನು.

ಆಗ ಧೃತರಾಷ್ಟ್ರನು ಕರ್ಣನನ್ನು ಜರೆದು, ಭೀಷ್ಮನನ್ನು ಸಂತೈಸಿ—"ಭೀಷ್ಮನಾಡಿದ ಮಾತು ನಮಗೂ ಪಾಂಡವರಿಗೂ ಮಾತ್ರವೇ ಅಲ್ಲ, ಲೋಕಕ್ಕೂ ಹಿತಕರವಾದುದು, ನಾನು ಆಲೋಚಿಸಿ ಸಂಜಯನನ್ನು ಪಾಂಡವರ ಬಳಿಗೆ ಕಳುಹಿಸುವೆನು; ನೀವು ಊರಿಗೆ ಪಯಣ ಮಾಡಬಹುದು" ಎಂದು ಹೇಳಿ ಆ ಬ್ರಾಹ್ಮಣನನ್ನು ಕಳುಹಿಸಿ ಕೊಟ್ಟನು.

ಅನಂತರದಲ್ಲಿ ಧೃತರಾಷ್ಟ್ರನು ಸಂಜಯನನ್ನು ಕರೆಯಿಸಿ—"ಸಂಜಯ! ಪಾಂಡವರು ಉಪಪ್ಲವ್ಯದಲ್ಲಿ ಪಾಳೆಯ ಮಾಡಿರುವರು.

ಅವರು ನಮ್ಮಿಂದ ಎಷ್ಟೋ ಹಿಂಸೆಪಟ್ಟರು; ಅವಮಾನವನ್ನೂ ಪಟ್ಟರು; ಆದರೂ ನಮ್ಮಲ್ಲಿ ಕ್ರೋಧವಿಡದೆ ಶಾಂತರಾಗಿರುವರು. ಅವರು ತಮ್ಮ ಸಂಪತ್ತನ್ನು ಸ್ವಬಲದಿಂದ ಸಂಪಾದಿಸಿದರು; ಆದರೂ ನನಗೆ ವಿಧೇಯರಾಗಿಯೇ ಇರುವರು. ದುರ್ಯೋಧನನೂ ಅವನಿಗಿಂತ ಅಲ್ಪನಾದ ಕರ್ಣನೂ ಅವರನ್ನು ದ್ವೇಷಿಸುವರೇ ಹೊರತು ಲೋಕದಲ್ಲಿ ಬೇರೆ ಯಾರೂ ಅವರನ್ನು ದ್ವೇಷಿಸರು. ದುರ್ಯೋಧನನು ಅವರ ಭಾಗವನ್ನು ದಕ್ಕಿಸಿಕೊಳ್ಳುವುದು ಶಕ್ಯವೆಂದೆಣಿಸುತ್ತಾನೆ; ಇದೊಂದು ಬಯಲಾಸೆ. ಯುದ್ಧಕ್ಕೆ ಮುಂದೆಯೇ ಅವರ ಭಾಗವನ್ನು ಅವರಿಗೆ ಬಿಟ್ಟುಬಿಡುವುದು ಲೇಸು. ಕೃಷ್ಣನು ಅರ್ಜುನನಿಗೆ ಸಾರಥಿಯಾಗುವನೆಂದು ಕೇಳುತ್ತೇನೆ. ಯುದ್ಧಕ್ಕೆ ಹೋಗದಿರುವುದೇ ಮಂದಬುದ್ಧಿ ದುರ್ಯೋಧನನಿಗೆ ಶ್ರೇಯಸ್ಕರವು. ಭೀಮಾರ್ಜುನರೂ ನಕುಲಸಹದೇವರೂ ಸಾಮಾನ್ಯರಲ್ಲ; ಆದರೂ ನಾನು ಧರ್ಮರಾಯನಿಗೆ ಹೆದರುವಷ್ಟು ಭೀಮಾರ್ಜುನರಿಗೂ, ಕಡೆಗೆ, ಕೃಷ್ಣನಿಗೂ ಹೆದರೆನು. ಯುಧಿಷ್ಠಿರನು ಧರ್ಮಿಷ್ಠನು, ಮಹಾ ತಪಸ್ವಿ, ಬ್ರಹ್ಮಚರ್ಯನಿಷ್ಠನು, ಸಂಕಲ್ಪ ಮಾತ್ರದಿಂದಲೇ ಅವನ ಇಷ್ಟಾರ್ಥವು ನೆರವೇರುವುದು. ಸಂಜಯ! ನೀನು ಬೇಗ ಹೊರಡು. ಯುಧಿಷ್ಠಿರನನ್ನೂ ಕೃಷ್ಣನನ್ನೂ ಕಂಡು ಪಾಂಡವರ ಸಂಗಡ ನಾನು ಶಾಂತಿಯನ್ನು ಬಯಸುವೆನೆಂದು ತಿಳಿಸು. ಭರತ ಕುಲಕ್ಕೆ ಹಿತವಾಗುವಂತೆ ಯಾರಾರಿಗೆ ಯಾವ ಯಾವ ಸಮಯದಲ್ಲಿ ಏನೇನು ಹೇಳುವುದು ಉಚಿತವೋ ಅದೆಲ್ಲವನ್ನೂ ಹೇಳು" ಎಂದನು.

ಧೃತರಾಷ್ಟ್ರನ ಆಜ್ಞೆಯ ಪ್ರಕಾರವಾಗಿ ಸಂಜಯನು ಉಪಪ್ಲವ್ಯಕ್ಕೆ ಹೋಗಿ ಕುರುರಾಯನ ಸಂದೇಶವನ್ನು ಪಾಂಡವರಿಗೆ ನಿರೂಪಿಸಲು, ಯುಧಿಷ್ಠಿರನು ಇಂತೆಂದು ನುಡಿದನು:—"ಸಂಜಯ! ನಾನು ಯುದ್ಧವನ್ನು ಅಪೇಕ್ಷಿಸುವೆನೆಂದು ಹೇಳಲಿಲ್ಲವಲ್ಲ. ಯುದ್ಧವಾಗುವುದಕ್ಕಿಂತ ಯುದ್ಧವಾಗದಿರುವುದು ಲೇಸು. ಮನುಷ್ಯನು ಶ್ರಮಪಡದೆಯೇ ಕೃತಾರ್ಥನಾಗುವ ಪಕ್ಷಕ್ಕೆ ಅವನು ಸುಲಭವಾದ ಕಾರ್ಯವನ್ನು ಕೂಡ ಮಾಡನು; ಇನ್ನು, ಯುದ್ಧಕ್ಕೆ ಹೋಗುವನೆ? ಕುಂತಿಯ ಮಕ್ಕಳು ಸುಖವನ್ನಪೇಕ್ಷಿಸುವುದೇನೋ ದಿಟ. ಆದರೆ ಅವರು ಮಾಡುವ

ಕಾರ್ಯವೆಲ್ಲವೂ ಧರ್ಮಯುಕ್ತವಾದುದು, ಲೋಕಕ್ಕೆ ಹಿತಕರ ವಾದುದು. ಅವರು ಕೇವಲ ಧರ್ಮ ಸಮ್ಮತವಾದ ಸುಖವನ್ನು ಆಶಿಸು ವರೇಹೊರತು ಬರಿಯ ಇಂದ್ರಿಯ ಸುಖವನ್ನು ಬಯಸುವರಲ್ಲ. ಧೃತರಾಷ್ಟ್ರನ ಮಹಾಂತವಾದ ಭೋಗವನ್ನು ನೋಡು, ನಮ್ಮ ಬದುಕನ್ನೂ ನೋಡು. ಆಸೆಯಿರುವಲ್ಲಿ ಸುಖವು ಬರುವುದೆ? ಅಷ್ಟು ಐಶ್ವರ್ಯವಿದ್ದರೂ ಧೃತರಾಷ್ಟ್ರನು ಏಕೆ ಗೋಳಿಡುತ್ತಾನೆ? ಅವನು ಮೂರ್ಖನಾದ ಮಗನ ಮಾತಿಗೆ ಕಿವಿಗೊಟ್ಟು ಯಾವಾಗ ಪ್ರಾಜ್ಞನಾದ ವಿದುರನ ಬುದ್ಧಿವಾದವನ್ನು ಕೇಳದೆ ಹೋದನೋ, ಆಗಲೇ ಕೌರವರು ಕೆಟ್ಟರು. ಈಗ ಅರ್ಥಲುಬ್ಧನಾದ ದುರ್ಯೋಧನನ ಮಂತ್ರಿಗಳು, ದುಃಶಾಸನ ಕರ್ಣ ಶಕುನಿಗಳೆಂಬ ತ್ರಿಮೂರ್ತಿಗಳು ತಾನೆ? ಇನ್ನು, ಕೌರವರಿಗೆ ಕ್ಷೇಮವೆಲ್ಲಿಯದು? ಧೃತರಾಷ್ಟ್ರನೂ ಅವನ ಮಗನೂ ನಿಷ್ಕಂಟಕವಾದ ಪೃಥ್ವೀಸಾಮ್ರಾಜ್ಯಕ್ಕೆ ಆಸೆಪಡುತ್ತಿದ್ದಾರೆ. ಸರ್ವಸ್ವವೂ ತಮ್ಮದೇ ಎನ್ನುವ ಲುಬ್ಧರಿಗೆ ನಿಷ್ಕಂಟಕ ರಾಜ್ಯವಾಗಲಿ, ಶಾಂತಿಯಾಗಲಿ ಎಲ್ಲಿಂದ ಬರುವುದು? ದುರ್ಯೋಧನನು ರಾಜ್ಯವನ್ನು ಹೇಗೆ ಸಂಪಾದಿಸಿದನೋ ಲೋಕಕ್ಕೇ ತಿಳಿಯುವುದು. ನಾನು ಹೇಳ ಬೇಕೆ? ಅವನು ಪಾಂಡವರದೆಲ್ಲವನ್ನೂ ದಕ್ಕಿಸಿಕೊಳ್ಳಬಹುದೆಂದೆಣಿ ಸುತ್ತಾನೆ. ಸಂಜಯ! ಸಿಂಹ ಶಾರ್ದೂಲಗಳಂತಿರುವ ಭೀಮಾರ್ಜು ನರೂ ನಕುಲ ಸಹದೇವರೂ ಜೀವಿಸಿರುವವರೆಗೂ ಇಂದ್ರನು ಕೂಡ ನಮ್ಮ ಐಶ್ವರ್ಯವನ್ನು ಅಪಹರಿಸುವ ಸಾಹಸ ಮಾಡನು. ನಾವು ಪಟ್ಟ ಕ್ಲೇಶವನ್ನೂ ನೀನು ಬಲ್ಲೆ; ನಾವು ದುರ್ಯೋಧನನ ವಿಷಯದಲ್ಲಿ ಹೇಗೆ ನಡೆದುಕೊಂಡೆವೋ ಅದನ್ನೂ ಬಲ್ಲೆ. ನಿನ್ನ ಮೇಲೆ ನನಗಿರುವ ಗೌರವದಿಂದ ಅವರನ್ನು ಕ್ಷಮಿಸುವೆನು. ಈಗಲೂ ಅವರು ಪೂರ್ವ ದಂತೆಯೇ ನಡೆಯುತ್ತಿರುವರು. ಆದರೂ ನೀನು ಹೇಳಿದಂತೆಯೇ ಆಗಲಿ, ಭರತಕುಲಾಗ್ರಣಿಯಾದ ಸುಯೋಧನನು ನನ್ನ ಇಂದ್ರಪ್ರಸ್ಥ ವನ್ನು ನನಗೆ ಕೊಡಲಿ.''

ಆ ಮಾತಿಗೆ ಸಂಜಯನು—''ಪಾಂಡವ ನೀನು ಧರ್ಮನಿಷ್ಠ ನೆಂಬುದು ಲೋಕವೆಲ್ಲವೂ ಕೇಳಿ ಬಲ್ಲುದು. ಈಗ ನಾನು ಕಣ್ಣಿಂದ

ನೋಡುತ್ತಿರುವೆನು. ಎಲೈ ಅಜಾತಶತ್ರುವೇ! ಕೌರವರು ನಿನ್ನ ಭಾಗ
ವನ್ನು ಕೊಡದೆ ಹೋದರೂ ಚಿಂತೆಯಿಲ್ಲ; ನೀನು ಅವರ ಸಂಗಡ
ಯುದ್ಧಕ್ಕೆ ಮಟ್ಟಿಗೆ ಹೋಗದಿರು. ಯುದ್ಧಮಾಡಿ ರಾಜ್ಯವನ್ನು ಸಾಧಿಸು
ವುದಕ್ಕಿಂತ ಭಿಕ್ಷಾಟನವೇ ಶ್ರೇಯಸ್ಕರವೆಂದು ನನಗೆ ತೋರುವುದು.
ನೀನು ಪ್ರಾಜ್ಞನು, ಧರ್ಮಿಷ್ಠನು, ಈವರೆಗೂ ಕಾಮ ಕ್ರೋಧಗಳಿಗೆ
ವಶನಾಗಿ ಯಾವ ಪಾಪ ಕರ್ಮವನ್ನೂ ಮಾಡಿದವನಲ್ಲ; ಈಗ ನೀನೇಕೆ
ಅಂತಹ ಕಾರ್ಯಕ್ಕೆ ಕೈಹಾಕುತ್ತೀಯೆ? ಸೈರಣೆಯನ್ನು ತಂದುಕೋ.
ನೀನು ಕ್ರೋಧದಿಂದ ಯುದ್ಧಕ್ಕೆ ಹೋದರೆ ಭೀಷ್ಮ ದ್ರೋಣರು
ಮೊದಲಾದ ಹಿರಿಯರೂ ನಂಟರೂ ಇಷ್ಟರೂ ಹತರಾಗರೆ? ಅವರೆಲ್ಲರೂ
ಹೋದಮೇಲೆ ಸಾಗರಾಂತ ಪೃಥ್ವಿಯ ಸಾಮ್ರಾಜ್ಯವನ್ನು ಗೆದ್ದರೂ
ನಿನಗೇನು ಸುಖ? ಯುದ್ಧದಿಂದ ಘೋರ ನರಹತ್ಯವಾಗುವುದು.
ಕ್ಷಮೆಯನ್ನು ಅವಲಂಬಿಸು. ಯುದ್ಧವನ್ನು ಮಾಡೆಂದು ನಿನ್ನ ಮಂತ್ರಿ
ಗಳು ನಿನ್ನನ್ನು ಕಾಡಿಸಿದರೆ ಸರ್ವಸ್ವವನ್ನೂ ಅವರಿಗೊಪ್ಪಿಸಿ ಹೊರಟು
ಹೋಗು" ಎಂದು ಯುದ್ಧವನ್ನು ನಿಂದಿಸಿ ಕ್ಷಾಂತಿಯನ್ನು
ಶ್ಲಾಘಿಸಿದನು.

ಧರ್ಮರಾಯನು—"ಸಂಜಯ! ಧರ್ಮವೇ ಶ್ರೇಷ್ಠವೆಂದು
ನೀನು ಹೇಳುವುದು ಸತ್ಯವೇ ಸರಿ; ಆದರೂ ಯಾವುದು ಧರ್ಮವೋ
ಯಾವುದು ಅಧರ್ಮವೋ ಎಲ್ಲ ಸಮಯಗಳಲ್ಲಿಯೂ ತಿಳಿಯುವುದು
ಕಷ್ಟ. ಸಾಮಾನ್ಯವಾಗಿ ಆಯಾ ವರ್ಣದವರು ಅವರವರ ಧರ್ಮವನ್ನು
ಆಚರಿಸಬೇಕು. ಆದರೆ ಆಪತ್ಕಾಲದಲ್ಲಿ ಧರ್ಮಗಳು ವ್ಯತ್ಯಸ್ತವಾಗು
ವುದು. ಸಾಮಾನ್ಯ ಕಾಲದಲ್ಲಿ ನಿತ್ಯಧರ್ಮವನ್ನು ಬಿಡುವರೂ ಆಪತ್ಕಾಲ
ದಲ್ಲಿ ಆಪದ್ಧರ್ಮವನ್ನು ಬಿಡುವರೂ ಇಬ್ಬರೂ ಮೂರ್ಖರೆ. ಸಂಜಯ!
ಪೃಥ್ವಿಯಲ್ಲಿ ಎಷ್ಟೇ ಧನವಿದ್ದರೂ ನಾನು ಅದನ್ನು ಅಧರ್ಮದಿಂದ
ಸಂಪಾದಿಸಲು ಆಶಿಸುವನಲ್ಲ. ಅಷ್ಟೇಕೆ? ಕೃಷ್ಣನು ಇಲ್ಲಿಯೇ ಇರುವನು.
ಅವನು ಧರ್ಮೇಶ್ವರನು, ಕುಶಲನು, ನೀತಿಶಾಸ್ತ್ರವನ್ನು ಬಲ್ಲವನು,
ಬ್ರಾಹ್ಮಣರನ್ನು ಉಪಾಸಿಸುವವನು. ಅವನನ್ನು ಕೇಳೋಣ; ನಾನು
ಸಾಮೋಪಾಯಕ್ಕೊಡಂಬಡದಿದ್ದರೆ ನಿಂದ್ಯನಾಗುವೆನು, ಯುದ್ಧಮಾಡ

ಲೊಡಂಬಡದಿದ್ದರೆ ಸ್ವಧರ್ಮಭ್ರಷ್ಟನಾಗುವೆನು; ಹೀಗಿರುವಲ್ಲಿ ಉತ್ತಮ ಪಕ್ಷವಾವುದು? ಶ್ರೀಕೃಷ್ಣನು ಹೇಳಲಿ. ಅನೇಕ ರಾಜಾಧಿರಾಜರು ಅವನ ಬುದ್ಧಿವಾದವನ್ನು ಕೈಕೊಂಡು ಶತ್ರುಗಳನ್ನು ನಿಗ್ರಹಿಸಿ ಮಿತ್ರರನ್ನು ಸಂತೋಷ ಪಡಿಸಿರುವರು. ಕಾರ್ಯಾಕಾರ್ಯಗಳನ್ನು ನಿಶ್ಚಯಿಸಿ ಹೇಳುವುದರಲ್ಲಿ ಅವನಿಗಿಂತ ಸಮರ್ಥರಿಲ್ಲ; ಅವನು ನಮಗೆ ಪ್ರಿಯನು; ಉಭಯ ಪಕ್ಷಕ್ಕೂ ಹಿತವನ್ನು ಕೋರುವನು; ಅವನ ಮಾತನ್ನು ನಾನೆಂದಿಗೂ ಮೀರೆನು" ಎಂದನು.

ಆ ಮಾತಿಗೆ ಕೃಷ್ಣನು ಇಂತೆಂದನು:—"ಸಂಜಯ! ನಾನು ಪಾಂಡವರಿಗೆ ವಿನಾಶವನ್ನೆಂದಿಗೂ ಕೋರೆನು; ಅಷ್ಟೇ ಅಲ್ಲ, ಅವರು ಐಶ್ವರ್ಯವಂತರಾಗಿ ತಮ್ಮ ಇಷ್ಟಾರ್ಥಗಳೆಲ್ಲವನ್ನೂ ಪಡೆಯಲೆಂದೂ ಕೋರುವೆನು; ಸೂತ! ಹಾಗೆಯೇ ಬಹುಪುತ್ರವಂತನಾದ ಧೃತರಾಷ್ಟ್ರನ ವೃದ್ಧಿಯನ್ನೂ ಬಯಸುವೆನು. ಸಂಧಿಯ ಮಾತನ್ನು ಬಿಟ್ಟು ಬೇರೆ ಯಾವುದನ್ನೂ ಅವರಿಗೆ ಹೇಳೆನು. ಸಂಧಿಯು ಧೃತರಾಷ್ಟ್ರರಾಯನಿಗೆ ಇಷ್ಟವೆಂದು ನೀನು ಹೇಳುತ್ತೀಯೆ; ಅದು ಪಾಂಡವರಿಗೂ ಇಷ್ಟವೇ. ಸಂಜಯ! ಇನ್ನು ಪಾಂಡುಪುತ್ರನ ಶಮೋಗುಣಕ್ಕಿಂತಲೆ? ಧೃತರಾಷ್ಟ್ರನೂ ಅವನ ಮಕ್ಕಳೂ ದುರಾಸೆಯುಳ್ಳವರು; ಇನ್ನು ಕಲಹವಾಗದಿರುವುದು ಹೇಗೆ? ಧರ್ಮರಾಯನು ಯುದ್ಧಕ್ಕೆ ಹೋಗುವುದು ದೋಷವೆ? ಬ್ರಾಹ್ಮಣಾದಿ ನಾಲ್ಕು ವರ್ಣದವರೂ ತಂತಮ್ಮ ಕರ್ತವ್ಯ ಕರ್ಮಗಳನ್ನು ಮಾಡುವುದು ಅಧರ್ಮವೆ? ಜಗತ್ತೆಲ್ಲವೂ ಕರ್ಮದಿಂದಲೇ ನಡೆಯುತ್ತಿರುವುದು. ಈ ಲೋಕ ಧರ್ಮವನ್ನು ಬಲ್ಲವನಾದರೂ ಧೃತರಾಷ್ಟ್ರನ ಮಕ್ಕಳ ಸಲುವಾಗಿ ನೀನು ಪಕ್ಷಪಾತ ಬುದ್ಧಿಯಿಂದ ಯುದ್ಧವು ಕೂಡದೆನ್ನುವುದು ಸರಿಯೆ? ಕೌರವರ ವಧೆಯನ್ನು ಬಿಟ್ಟು ಬೇರೆ ಯಾವ ಉಪಾಯದಿಂದಾದರೂ ಅವರು ರಾಜ್ಯವನ್ನು ಸಾಧಿಸಬಹುದಾದರೆ ಅವರು ಆ ಉಪಾಯವನ್ನು ಅವಲಂಬಿಸದೆ ಹೋಗರು. ಅದರಿಂದ ಧರ್ಮವೂ ಉಳಿಯುವುದು, ಪುಣ್ಯವೂ ಬರುವುದು. ಅಂತಹ ಉಪಾಯವು ಇಲ್ಲದ ಪಕ್ಷದಲ್ಲಿ ಕ್ಷತ್ರಿಯ ಧರ್ಮವನ್ನು ಅವಲಂಬಿಸಿ ಯಥಾಶಕ್ತಿ ಯುದ್ಧಮಾಡುವುದೇ ಕ್ಷತ್ರಿಯನ ಕರ್ತವ್ಯ. ಅದರಿಂದ

ಮರಣವು ಪ್ರಾಪ್ತವಾದರೆ, ಅದೂ ಶ್ಲಾಘ್ಯವೇ. ಒಳ್ಳೆಯದು, ನೀನು ಸಾವುವೊಂದೇ ಒಪ್ಪತಕ್ಕುದು ಎನ್ನುವೆಯೋ? ಹಾಗಾದರೆ, ಕ್ಷತ್ರಿಯರು ಯುದ್ಧಮಾಡುವುದು ಧರ್ಮತಂತ್ರವೋ, ಯುದ್ಧ ಮಾಡದಿರುವುದು ಧರ್ಮತಂತ್ರವೋ ಹೇಳು. ನೀನು ಮೊದಲು ಚಾತುರ್ವರ್ಣ್ಯ ಸಂವಿಭಾಗವನ್ನೂ ಆಯಾ ವರ್ಣದ ಕರ್ಮವನ್ನೂ ಪರ್ಯಾಲೋಚಿಸಿ ಆಮೇಲೆ ನಿನ್ನ ಇಷ್ಟಬಂದಂತೆ ಪಾಂಡವರನ್ನು ದೂಷಿಸು, ಇಲ್ಲವೆ ಭೂಷಿಸು. ಧರ್ಮದಿಂದ ಪ್ರಜಾರಕ್ಷಣೆ ಮಾಡುವುದೇ ಕ್ಷತ್ರಿಯಧರ್ಮ. ಯಾವಾಗ ರಾಜರು ಬಲಿಷ್ಠರಾಗಿ ಅನ್ಯರ ಐಶ್ವರ್ಯಕ್ಕೆ ಆಸೆಪಡ್ಡು ಪರ ಹಿಂಸಕರಾಗುವರೋ ಆಗ ರಾಜರಿಗೆ ಪರಸ್ಪರ ಯುದ್ಧವು ಅವಶ್ಯಂಭಾವಿ. ಆಗ ಅಸ್ತ್ರ ಶಸ್ತ್ರಗಳೆಲ್ಲವೂ ನಿರ್ಮಿತವಾಗುವುವು. ಕೌರವರು ಅಧರ್ಮವನ್ನು ಆಚರಿಸಿದುದರಿಂದ ಈಗ ಆ ಅನಿಷ್ಟವು ಪ್ರಾಪ್ತವಾಗಿದೆ. ಧೃತರಾಷ್ಟ್ರನೂ ಅವನ ಮಗನೂ ಪಾಂಡವರಿಗೆ ನ್ಯಾಯವಾಗಿ ಸಲ್ಲತಕ್ಕುದೆಲ್ಲವನ್ನೂ ಅಪಹರಿಸಿರುವರು. ದುರ್ಯೋಧನನು ರಾಜಧರ್ಮವನ್ನು ಉಲ್ಲಂಘಿಸಿರುವನು. ಕೌರವರೆಲ್ಲರೂ ಅವನ ಮಾರ್ಗವನ್ನೇ ಹಿಡಿದು ಹೋಗುತ್ತಿರುವರು. ಸಂಜಯ! ಯಾರೂ ಕಾಣದಂತೆ ಧನವನ್ನು ಹೊತ್ತುಹಾಕುವ ಕಳ್ಳನೂ, ಎಲ್ಲರೂ ಕಾಣುವಂತೆ ಹಗಲೇ ಬಲ್ಮೆಯಿಂದ ಧನವನ್ನು ಅಪಹರಿಸುವ ಕಳ್ಳನೂ ಇಬ್ಬರೂ ಅಪರಾಧಿಗಳೇ; ಇಬ್ಬರೂ ದಂಡನೆಗೆ ಅರ್ಹರೇ. ಅವರನ್ನು ದಂಡಿಸುವುದು ಪುಣ್ಯವೇ ಹೊರತು ಪಾಪವಲ್ಲ. ಅವರ ಕಡಿಮೆ ಏನು? ದುರ್ಯೋಧನನ ಹೆಚ್ಚೇನು? ಆ ಮೂರ್ಖನು ಪಾಂಡವರ ಸೊತ್ತನ್ನು ಅಪಹರಿಸಿರುವನು. ಪರ ರಾಜ್ಯವನ್ನು ಅಪಹರಿಸುವುದಕ್ಕಿಂತಲೂ ಅನ್ಯಾಕ್ರಾಂತವಾದ ತಮ್ಮ ಪೈತೃಕ ರಾಜ್ಯವನ್ನು ಬರಮಾಡಿಕೊಳ್ಳುವುದು ಪಾಪವೆ? ಅದಕ್ಕಾಗಿ ಯುದ್ಧಮಾಡಿ ಸಾಯುವುದೂ ಪುಣ್ಯವಲ್ಲವೆ? ಸಂಜಯ! ಸಭಾ ಮಧ್ಯದಲ್ಲಿ ದುಃಶಾಸನನು ದ್ರೌಪದಿಯ ವಿಷಯದಲ್ಲಿ ನಡೆದ ನಡತೆ ಎಂತಹುದು ಯೋಚಿಸು. ಅದನ್ನು ಕಣ್ಣಾರೆ ನೋಡುತ್ತ ಭೀಷ್ಮ ಮುಖ್ಯರಾದ ಕೌರವರೆಲ್ಲರೂ ಏಕೆ ಸುಮ್ಮನಿದ್ದರು? ಆಗ ನೀನು ಧರ್ಮದ ಮಾತನ್ನೇ ಎತ್ತದೆ ಈಗ ಪಾಂಡುಪುತ್ರನಿಗೆ ಧರ್ಮೋಪದೇಶವನ್ನು

ಮಾಡುವುದಕ್ಕೆ ಬಂದೆಯಾ? ಇದು ಸರಿಯೆ? ಒಳ್ಳೆಯದು, ನಾನೇ ಹೋಗಿ ಈ ವಿಷಯವನ್ನು ಕುರಿತು ಕೌರವರ ಸಂಗಡ ಮಾತನಾಡಿ ಬರುವೆನು. ಕುರುಪಾಂಡವರಿಬ್ಬರಿಗೂ ಸಾಮೋಪಾಯದಿಂದ ಸಂಧಿ ಮಾಡಿಸಿದಲ್ಲಿ ನಾನೊಂದು ಪುಣ್ಯಕಾರ್ಯವನ್ನು ಮಾಡಿದಂತಾಗುವುದು; ಅಲ್ಲದೆ, ಸರ್ವರೂ ಸುಖವಾಗಿರುವಂತೆಯೂ ಆಗುವುದು; ಕೌರವರನ್ನು ಮೃತ್ಯುಪಾಶದಿಂದ ಬಿಡಿಸಿದಂತೆಯೂ ಆಗುವುದು. ಕುಂತಿಯ ಮಕ್ಕಳಂತು ಧೃತರಾಷ್ಟ್ರನ ಆಜ್ಞೆಯಂತೆ ನಡೆಯುವುದಕ್ಕೆ ಸಿದ್ಧರಾಗಿರುವರು; ಅವರ ಜ್ಞಾತಿಗಳಾದರೋ ಕದನಕ್ಕೆ ಕಾಯ್ದಿರುವರು. ಮಹಾತ್ಮರೂ ಧರ್ಮಚಾರಿಗಳೂ ಆದ ಪಾಂಡವರು ಯುದ್ಧಮಾಡುವುದಕ್ಕೆ ಸಮರ್ಥರಾಗಿದ್ದರೂ ಕೌರವರಲ್ಲಿ ಶಾಂತ ಭಾವದಿಂದಲೇ ನಡೆದುಕೊಳ್ಳುತ್ತಿರುವರು. ಇದೆಲ್ಲವನ್ನೂ ಧೃತರಾಷ್ಟ್ರನಿಗೆ ತಿಳಿಸು. ಆಮೇಲೆ ಅವನಿಗೆ ಹೇಗೆ ತೋರಿದರೆ ಹಾಗೆ ಮಾಡಲಿ.''

ಸಂಜಯನು ಯುಧಿಷ್ಠಿರಾದಿಗನ್ನು ಕಂಡು ಉಪಚಾರೋಕ್ತಿಗಳನ್ನಾಡಿ ಬೀಳ್ಕೊಳ್ಳುವಾಗ ಯುಧಿಷ್ಠಿರನು ಭೀಷ್ಮನೇ ಆದಿಯಾಗಿ ದಾಸ ದಾಸಿಯರ ಪರ್ಯಂತ ಸರ್ವರಿಗೂ ಯಥಾಯೋಗ್ಯವಾಗಿ ವಂದನಾದಿಪೂರ್ವಕ ತಮ್ಮೆಲ್ಲರ ಕುಶಲವನ್ನೂ ತಿಳಿಸುವಂತೆ ಹೇಳಿ, ಮೂರ್ಖನೂ ಶಠನೂ, ಪಾಪಶೀಲನೂ ಆದ ದುರ್ಯೋಧನನಿಗೆ ಇಂತೆಂದು ಹೇಳೆಂದನು:—

"ಧರ್ಮವೇ ನಿತ್ಯ. ನನ್ನ ಶತ್ರುಗಳನ್ನು ನಿಗ್ರಹಿಸುವುದಕ್ಕೆ ನನಗಿರುವ ಬಲವೂ ಧರ್ಮವೇ. ನಾವಿರುವಲ್ಲಿ ಕುರುರಾಜ್ಯವೆಲ್ಲವನ್ನೂ ನಿರುಪದ್ರವವಾಗಿ ನೀನೊಬ್ಬನೇ ಆಳಬೇಕೆಂಬುದು ದುರಾಸೆಯೇ ಹೊರತು ಬೇರೆಯಲ್ಲ. ಅದೆಂದಿಗೂ ಸಾಧ್ಯವಾಗಲಾರದು. ನಾವೆಂತೂ ನಿನಗೆ ಅಪ್ರಿಯವಾದುದನ್ನು ಮಾಡೆವು. ಭಾರತ ಮುಖ್ಯ ವೀರನೆ! ನನ್ನ ಇಂದ್ರಪ್ರಸ್ಥವನ್ನು ನನಗೆ ಕೊಡು, ಇಲ್ಲವೆ ಯುದ್ಧಕ್ಕೆ ಬಾ.''

ಇದಲ್ಲದೆ ಅವನು ಕುರುರಾಯನು ಪರಿವಾರಸಮೇತನಾಗಿರುವಾಗ ಅವನಿಗೆ ಅಭಿವಾದನಪೂರ್ವಕವಾಗಿ ಈ ವಿಜ್ಞಾಪನೆಯನ್ನು ತಿಳಿಸೆಂದನು: "ಮಹಾರಾಜನೇ! ನಿನ್ನ ಪ್ರಭಾವದಿಂದ ಪಾಂಡವರು ಸುಖವಾಗಿ

ಜೀವಿಸಿರುವರು. ನಿನ್ನ ಅನುಗ್ರಹದಿಂದ ಆ ಹುಡುಗರಿಗೆ ರಾಜ್ಯವು ಪ್ರಾಪ್ತವಾಗಿದ್ದಿತು. ಮೊದಲು ಅವರನ್ನು ರಾಜ್ಯದಲ್ಲಿ ನೆಲೆಗೊಳಿಸಿ ಈಗ ಅವರನ್ನು ಕೈ ಬಿಡಬೇಡ; ನೀನು ಉಪೇಕ್ಷಿಸಿದಲ್ಲಿ ಅವರು ಕೆಡುವರು. ಈ ರಾಜ್ಯವೆಲ್ಲವೂ ಒಬ್ಬನಿಗೇ ಅಲ್ಲ, ಇಬ್ಬರಿಗೂ ಸೇರಿದುದು. ಅಯ್ಯಾ! ನಾವು ಒಂದಾಗಿ ಬದುಕಬೇಕೆಂದು ಇಚ್ಛೈಸುವೆವು; ಶತ್ರುಗಳ ವಶವಾಗಬೇಡ.''

ಹಾಗೆಯೇ, ಅವನು ಭಾರತ ಪಿತಾಮಹ ಭೀಷ್ಮನಿಗೆ ನಮಸ್ಕಾರ ಪೂರ್ವಕವಾಗಿ ಇಂತೆಂದು ಅರಿಕೆಮಾಡಿದನು:—'' ಮುಳುಗಿ ಹೋಗಿದ್ದ ಶಂತನು ವಂಶವನ್ನು ತಾವು ಉದ್ಧಾರಮಾಡಿದಿರಿ. ತಾತ! ನಿಮ್ಮ ಮೊಮ್ಮಕ್ಕಳು ಪರಸ್ಪರ ಪ್ರೀತಿವಂತರಾಗಿರುವಹಾಗೆ ಮಾಡಿರಿ!''

ಹಾಗೆಯೇ, ಅವನು ಕೌರವರಿಗೆ ಮಂತ್ರಧಾರಿಯಾದ ವಿದುರನಿಗೆ— '' ಸೌಮ್ಯನೇ! ಯುಧಿಷ್ಠಿರನ ಹಿತವನ್ನು ಕೋರಿ ಸಂಧಿಯಾಗುವಂತೆ ಮಾಡು '' ಎಂದು ಹೇಳಿಕಳುಹಿಸಿದನು.

ಆಮೇಲೆ, ಅವನು ದುರ್ಯೋಧನನು ಕೌರವರ ಸಮೂಹದಲ್ಲಿ ಕುಳಿತಿರುವಾಗ ಆತನನ್ನು ತಾನು ಮರಳಿ ಮರಳಿ ಬೇಡಿಕೊಂಡೆನೆಂದು ಆ ಕೋಪಿಷ್ಠನಿಗೆ ಈ ಮಾತನ್ನು ತಿಳಿಸೆಂದನು—'' ನಾವು ಬಲಿಷ್ಠರಾದರೂ ನಿಮ್ಮನ್ನು ಕೊಲ್ಲಲೊಲ್ಲದೆ, ನೀವು ಪಡಿಸಿದ ಕಷ್ಟಗಳೆಲ್ಲವನ್ನೂ ಅನುಭವಿಸಿದೆವು; ನೀವು ಮಾಡಿದ ಅವಮಾನಗಳೆಲ್ಲವನ್ನೂ ಸಹಿಸಿದೆವು. ಆದುದಾಗಿ ಹೋಯಿತು. ಅವೆಲ್ಲವನ್ನೂ ಮರೆತುಬಿಡುವೆವು. ನೀನು ಹೆರರ ಸೊತ್ತನ್ನು ದಕ್ಕಿಸಿಕೊಳ್ಳಬೇಕೆಂಬ ದುರಾಸೆಯನ್ನು ಬಿಟ್ಟರೆ ನಮ್ಮೊಳಗೆ ಶಾಂತಿಯೂ ಪ್ರೀತಿಯೂ ಹುಟ್ಟುವುವು. ನಾನೆಂತೂ ಶಾಂತಿಯನ್ನು ಬಯಸುತ್ತಿರುವೆನು. ಸುಯೋಧನ! ಕಡೆಗೆ ನಿನ್ನ ಐವರು ಅಣ್ಣತಮ್ಮಂದಿರಿಗೆ ಐದು ಗ್ರಾಮಗಳನ್ನು ಕೊಟ್ಟರೂ ಸಾಕು; ಅಲ್ಲಿಗೆ ನಮ್ಮ ವ್ಯಾಜ್ಯವು ಹರಿಯುವುದು. ನಾನು ಸಂಧಿಗೂ ಸಿದ್ಧನಾಗಿರುವೆನು, ಯುದ್ಧಕ್ಕೂ ಸಿದ್ಧನಾಗಿರುವೆನು; ಧರ್ಮವನ್ನೂ ಆರ್ಜಿಸಬಲ್ಲೆನು, ಧನವನ್ನೂ ಆರ್ಜಿಸಬಲ್ಲೆನು; ಸಮಯೋಚಿತವಾಗಿ ಮೃದುವಾಗಿಯೂ ಇರಬಲ್ಲೆನು, ಕಠಿನವಾಗಿಯೂ ಇರಬಲ್ಲೆನು.''

ಸಂಜಯನು ಯುಧಿಷ್ಠಿರಾದಿಗಳನ್ನು ಬೀಳ್ಕೊಂಡು ಹಸ್ತಿನಾಪುರಕ್ಕೆ ಬಂದು ಆ ದಿನ ರಾತ್ರಿಯೇ ಧೃತರಾಷ್ಟ್ರನ ಬಳಿಗೆ ಹೋಗಿ ಯುಧಿಷ್ಠಿರನ ಕುಶಲ ಪ್ರಶ್ನಾದಿಗಳನ್ನು ಅರಿಕೆಮಾಡಿ, "ನೀನು ಸಂಧಿಗೊಪ್ಪದೆ ಹೋದರೆ ಅರ್ಜುನನು ಕೌರವರೆಲ್ಲರನ್ನೂ ಸುಟ್ಟು ಬಿಡುವನು. ನಿನ್ನ ದೋಷದಿಂದಲೇ ಈ ಅನರ್ಥವು ಸಂಭವಿಸಿದಂತಾಗುವುದು" ಎಂದು ಧೃತರಾಷ್ಟ್ರನನ್ನು ನಿಂದಿಸಿ, ಆ ದಿವಸ ಮನೆಗೆ ಹೊರಟುಹೋದನು.

ಆ ಮಾತನ್ನು ಕೇಳಿದಾಗಲಿಂದ ಧೃತರಾಷ್ಟ್ರನು ತನ್ನ ಮಕ್ಕಳಿಗೆ ಕೇಡುಗಾಲ ಬಂದಿತೆಂದು ತೊಳಲಿ ಬಳಲಿದನು. ತಾನೂ ತನ್ನ ಮಕ್ಕಳೂ ಪಾಂಡವರಿಗೆ ಮಾಡಿದ ಅನ್ಯಾಯಗಳನ್ನು ಸ್ಮರಿಸುತ್ತ ಯುಧಿಷ್ಠಿರನ ಧರ್ಮಪರಾಯಣತೆಯನ್ನೂ, ಭೀಮಾರ್ಜುನರ ಶೌರ್ಯವನ್ನೂ ನೆನೆದು ಕಾತರಿಸುತ್ತ ವಿದುರನೊಡನೆ, "ವಿದುರ! ಸಂಜಯನು ಬಂದಾಗಲಿಂದ ಏನು ಸಮಾಚಾರವನ್ನು ತಂದಿರುವನೊ ತಿಳಿಯದೆ ತಪಿಸುತ್ತಿರುವೆನು; ನಿದ್ದೆಯೂ ಬಾರದು; ಏನ ಮಾಡಬೇಕೊ ತಿಳಿಯದು" ಎಂದನು.

ಪ್ರಾಜ್ಞನಾದ ವಿದುರನು ಅದಕ್ಕಿಂತೆಂದು ಹೇಳಿದನು:—"ಚೋರನು, ಕಾಮಾತುರನು, ಧನವನ್ನು ಕಳೆದುಕೊಂಡವನು, ಸಾಧನಹೀನನು, ಪ್ರಬಲನಿಂದ ಪೀಡಿತನಾದ ದುರ್ಬಲನು—ಇವರಾರಿಗೂ ನಿದ್ದೆ ಹತ್ತದು. ನರಾಧಿಪನೇ! ಈ ದೋಷಗಳಲ್ಲಿ ಯಾವುದೂ ನಿನ್ನನ್ನು ಸೋಕಿಲ್ಲವಲ್ಲ? ಪರವಿತ್ತದ ಮೇಲಣ ಆಸೆಯು ನಿನ್ನನ್ನು ಬಾಧಿಸುವುದಿಲ್ಲವಲ್ಲ?" ಎಂದು ನುಡಿದು, ಧೃತರಾಷ್ಟ್ರನ ಇಂಗಿತವನ್ನರಿತು, ಅನೇಕ ದೃಷ್ಟಾಂತಗಳ ಮೂಲಕವಾಗಿ ನೀತಿಯನ್ನು ಹೇಳಿ ಕಡೆಗೆ ಇಂತೆಂದು ಹಿತೋಪದೇಶವನ್ನು ಮಾಡಿದನು:—

"ಮಹಾರಾಜನೇ! ಪಾಂಡುಪುತ್ರರನ್ನು ನೀನೇ ಬೆಳೆಯಿಸಿದೆ; ನೀನೇ ಬುದ್ಧಿವಂತರನ್ನಾಗಿ ಮಾಡಿದೆ; ಅವರು ಈಗಲೂ ನಿನ್ನ ಆಜ್ಞೆಯಲ್ಲಿಯೇ ಇರುವರು. ಅವರಿಗೆ ನ್ಯಾಯವಾಗಿ ಸಲ್ಲಬೇಕಾದಷ್ಟು ರಾಜ್ಯವನ್ನು ಕೊಟ್ಟು ನೀನೂ ನಿನ್ನ ಮಕ್ಕಳೂ ನೆಮ್ಮದಿಯಾಗಿರ

ಬಾರದೆ? ಕೇಡುಗಾಲಕ್ಕೆ ಬುದ್ಧಿಗೆಡುವುದು ; ಅನ್ಯಾಯವು ನ್ಯಾಯ ವಾಗಿ ತೋರುವುದು. ರಾಜನೆ! ಪಾಂಡವರ ಶತ್ರುಮಿತ್ರರೇ ನಿಮ್ಮ ಶತ್ರುಮಿತ್ರರೆಂದು ತಿಳಿ. ಹಾಗೆಯೇ ನಿಮ್ಮೊಳಗೆ ಒಬ್ಬರ ಕಾರ್ಯವೇ ಇನ್ನೊಬ್ಬರ ಕಾರ್ಯವಾಗಿರುವುದೆಂದು ತಿಳಿ. ಇಬ್ಬರೂ ಒಂದಾಗಿ ಸುಖದಿಂದ ಬಾಳುವಂತೆಮಾಡು. ಕುರುಕುಲದ ಭವಿಷ್ಯವೆಲ್ಲವೂ ನಿನ್ನ ಕೈಯಲ್ಲಿದೆ. ವನವಾಸದಿಂದ ಬಳಲಿ ಬಂದಿರುವ ಪಾಂಡವರನ್ನು ಸಲಹಿ ನಿನ್ನ ಕೀರ್ತಿಯನ್ನುಳಿಸಿಕೊ. ಪಾಂಡವರು ಸತ್ಯವಂತರು. ದುರ್ಯೋಧನನನ್ನು ಯುದ್ಧಕ್ಕೆ ಹೋಗಲಿಸಬೇಡ. ಒಬ್ಬ ಮಗ ನನ್ನು ತೊರೆದು ಉಳಿದವರನ್ನುಳಿಸಿಕೊ. ಅವನನ್ನು ತೊರೆಯದಿದ್ದರೆ ನೂರ್ವರೂ ಹತರಾಗುವರು. ರಾಜೇಂದ್ರ! ಯುಧಿಷ್ಠಿರನು ಧರ್ಮಜ್ಞನು, ಪ್ರಾಜ್ಞನು, ದಯಾಳು. ನೀನು ಹಿರಿಯನೆಂದು ನಿನ್ನ ಗೌರವಾರ್ಥ ವಾಗಿ ಬಹು ಕ್ಲೇಶವನ್ನು ಅನುಭವಿಸಿದನು. ಸರ್ವಲಕ್ಷಣ ಸಂಪನ್ನ ನಾದ ಆ ರಾಜಕುಮಾರನು ದಾಯಭಾಗಕ್ಕೆ ನಿನ್ನ ಮಕ್ಕಳೆಲ್ಲರಿ ಗಿಂತಲೂ ಹೆಚ್ಚಾಗಿ ಅರ್ಹನು. ಅವನ ರಾಜ್ಯವನ್ನು ಅವನು ಆಳಲಿ. ದುರ್ಯೋಧನ, ಶಕುನಿ, ಮೂಢ ದುಃಶಾಸನ, ಕರ್ಣ—ಇವರನ್ನು ನಚ್ಚಿ ರಾಜ್ಯಭಾರವನ್ನು ಅವರಿಗೊಪ್ಪಿಸಿದ ಮೇಲೆ ರಾಜ್ಯವು ನಿನ್ನ ದೆಂಬುದು ಹೇಗೆ? ಗುಣಾಢ್ಯರಾದ ಪಾಂಡವರು ನಿನ್ನನ್ನು ತಂದೆಯಂತೆ ಭಾವಿಸಿ ನಡೆಯುತ್ತಿರುವರು ; ಅವರನ್ನು ನೀನು ಮಕ್ಕಳಂತೆ ಕಾಣು."

ಈ ಪ್ರಕಾರವಾಗಿ ವಿದುರನು ಹೇಳಿದ ಹಿತವಚನಗಳೆಲ್ಲವನ್ನೂ ಕೇಳಿ, ಧೃತರಾಷ್ಟ್ರನು—"ನೀನು ನಿತ್ಯವೂ ನನಗೆ ಉಪದೇಶ ಮಾಡುವು ದೆಲ್ಲವೂ ಯಥಾರ್ಥವೇ ಅಹುದು. ನೀನು ಹೇಳಿದಂತೆಯೇ ನಡೆಯ ಬೇಕೆಂದು ನನ್ನ ಮನಸ್ಸಿನಲ್ಲಿದೆ. ನನ್ನ ಮನಸ್ಸು ಸರ್ವದಾ ಪಾಂಡವರ ಕಡೆಯೇ ಇದ್ದರೂ ದುರ್ಯೋಧನನು ಹತ್ತಿರ ಬರುತ್ತಲೆ ನನ್ನ ಬುದ್ಧಿಯು ಕೆಡುವುದು. ಏನ ಮಾಡಲಿ? ವಿಧಿಯನ್ನು ಮೀರುವುದಕ್ಕೆ ಯಾರಿಗೂ ಶಕ್ಯವಲ್ಲ. ವಿಧಿಯೇ ಸತ್ಯ, ಪುರುಷ ಪ್ರಯತ್ನವು ನಿರರ್ಥಕ" ಎಂದು ನುಡಿದು, ಕೇಡಾಳಿಯಾದ ತನ್ನ ಮಗನು ಹೋದ ದಾರಿಯಲ್ಲಿಯೇ ಹೋಗುತ್ತಿದ್ದನು.

ಈ ಸ್ಥಿತಿಯಲ್ಲೊಂದು ದಿನ ಪಾಂಡವರ ಸಂದೇಶವನ್ನು ಕೇಳುವ ಸಲುವಾಗಿ ಭೀಷ್ಮ, ದ್ರೋಣ, ಕೃಪ, ಶಲ್ಯ, ವಿದುರ ಪ್ರಮುಖರನ್ನೊಡಗೊಂಡು ಧೃತರಾಷ್ಟ್ರನು ಸಭೆಯನ್ನು ಪ್ರವೇಶ ಮಾಡಿದನು. ದುರ್ಯೋಧನ ದುಃಶಾಸನ ಕರ್ಣಾದಿಗಳೂ ಸಭೆಯನ್ನು ಹೊಕ್ಕರು. ಸರ್ವರೂ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುತ್ತಲೆ ಸಂಜಯನು ಪಾಂಡವರ ಸಂದೇಶವನ್ನು ಕಥನಮಾಡಿ ಯುಧಿಷ್ಠಿರ ಭೀಮಾರ್ಜುನ ನಕುಲ ಸಹದೇವರ ಶೌರ್ಯ ಧೈರ್ಯಾದಿ ಸದ್ಗುಣಗಳನ್ನು ವರ್ಣನೆ ಮಾಡಿ, ಅರ್ಜುನನ ಸಖನಾದ ಕೃಷ್ಣನ ಮಾಹಾತ್ಮ್ಯವನ್ನು ಹೇಳಿ, ಅರ್ಜುನನು ಹೀಗೆಂದು ಪ್ರತಿಜ್ಞೆ ಮಾಡಿರುವನೆಂದು ತಿಳಿಸಿದನು:— "ಸೂತ! ಅವರೆಲ್ಲರನ್ನೂ ಕೊಲ್ಲಬೇಕೆಂದು ನಿಶ್ಚಯಿಸಿರುವೆನು; ಯಾರನ್ನೂ ಉಳಿಸೆನು. ಈ ಮಾತನ್ನು ಅವರಿಗೆ ತಿಳಿಸು. ಧೃತರಾಷ್ಟ್ರನ ಮಗನ ಹುಚ್ಚುತನವನ್ನು ನೋಡು! ಇಂದ್ರ ಪ್ರಮುಖ ದೇವತೆಗಳಿಗೂ ನಮ್ಮನ್ನು ಗೆಲ್ಲಲಳವಲ್ಲ; ಅಂತಹವರ ಮೇಲೆ ಆ ದುರ್ಯೋಧನನು ಕೈಮಾಡುವುದಕ್ಕೆ ಬರುತ್ತಾನೆ! ಆದರೂ ವೃದ್ಧ ಭೀಷ್ಮ ಕೃಪ ದ್ರೋಣ ಅಶ್ವತ್ಥಾಮ ವಿದುರರು ಹೇಗೆ ಹೇಳಿದರೆ ಹಾಗಾಗಲಿ. ಕೌರವರೆಲ್ಲರೂ ಆಯುಷ್ಮಂತರಾಗಿರಲಿ!"

ಈ ಪ್ರತಿಜ್ಞೆಯನ್ನು ಸೂಚಿಸಿ ಸಂಜಯನು ಪಾಂಡವರ ಸಂದೇಶವನ್ನು ಹೇಳಿ ಮುಗಿಸಿದನು. ಆ ಸಂದರ್ಭದಲ್ಲಿಯೇ, ಸಂಧಿಯ ಪ್ರಸ್ತಾವ ಮಾಡುವ ಸಲುವಾಗಿ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಬರುವುದರಲ್ಲಿದ್ದಾನೆಂದು ಅರಿಕೆ ಮಾಡಿದನು.

ತರುವಾಯ ವೃದ್ಧ ಭೀಷ್ಮನು ದುರ್ಯೋಧನನಿಗೆ ಕೃಷ್ಣಾರ್ಜುನರ ಗುಣಾತಿಶಯಗಳನ್ನು ಹೇಳಿ, "ದುರ್ಯೋಧನ! ಇಂತಹ ಕೃಷ್ಣಾರ್ಜುನರಿಗೆ ನೀನಿದಿರೆ? ಶಂಖ ಚಕ್ರ ಗದಾಹಸ್ತನಾಗಿ ಕೃಷ್ಣನೂ, ಅಸ್ತ್ರಧಾರಿಯಾಗಿ ಅರ್ಜುನನೂ ಒಂದೇ ರಥದಲ್ಲಿ ಕುಳಿತು ರಣರಂಗದಲ್ಲಿ ಕಾಣಿಸಿಕೊಂಡಾಗಲ್ಲವೇ ನೀನು ನನ್ನ ಮಾತನ್ನು ನಂಬುವುದು? ಈಗ ನೀನು ನನ್ನ ಮಾತನ್ನು ಕೇಳದೆಹೋದರೆ ಬಹುಜನ ಹತವಾಗುವುದು. ಶಾಪಗ್ರಸ್ತನೂ ಹೀನ ಜಾತನೂ ಆದ ಕರ್ಣ, ಸುಬಲನ ಮಗನಾದ

ಶಕುನಿ, ನೀಚನೂ ಪಾಪಿಯೂ ಆದ ನಿನ್ನ ತಮ್ಮ ದುಃಶಾಸನ ಈ ಮೂವರ ಮಾತನ್ನು ನೀನು ವೇದ ವಾಕ್ಯವೆಂದೆಣಿಸಿ ಕೇಳುತ್ತೀಯೆ" ಎಂದು ಹೇಳಿದನು.

ಅದನ್ನು ಕೇಳಿ ಕರ್ಣನು—"ಪಿತಾಮಹನೆ! ನೀನು ಹಿರಿಯನು. ನೀನು ನನ್ನನ್ನು ಹೀಗೆಂದು ಹಳಿಯಬಹುದೆ? ಸ್ವಧರ್ಮವನ್ನು ಬಿಡದೆ ನಾನು ಕ್ಷತ್ರಿಯ ಧರ್ಮದಲ್ಲಿರುವೆನು; ನನ್ನಲ್ಲೇನು ದುರ್ವೃತ್ತಿಯನ್ನು ಕಂಡೆ? ನನ್ನನ್ನು ನೀನು ಹೀಯಾಳಿಸುವುದೇಕೆ? ಧೃತರಾಷ್ಟ್ರನ ಮಕ್ಕಳಾದರೂ ನನ್ನಲ್ಲೇನು ಪಾಪವನ್ನು ಕಂಡರು? ದುರ್ಯೋಧನನಿಗೆ ನಾನೆಂದಿಗೂ ಕೇಡನ್ನು ಮಾಡಿದವನಲ್ಲ. ಅಷ್ಟೇ ಅಲ್ಲ, ಅವರ ಹಗೆಗಳಾದ ಪಾಂಡವರೆಲ್ಲರನ್ನೂ ರಣದಲ್ಲಿ ಕೊಂದು ಅವರಿಗೆ ಜ್ಞಾತಿಗಳ ಕಾಟವಿಲ್ಲದಂತೆ ಮಾಡುವೆನು. ಹಿಂದೆ ಯಾರನ್ನು ನಾವು ವೈರದಿಂದ ನೋಯಿಸಿದೆವೋ ಅವರ ಸಂಗಡ ಸಂಧಿಗೆ ಹೋಗುವುದು ವಿವೇಕವೆ? ಧೃತರಾಷ್ಟ್ರ ದುರ್ಯೋಧನರಿಗೆ ಪ್ರಿಯವಾದ ಕಾರ್ಯವನ್ನು ಮಾಡುವುದೇ ನನ್ನ ಕರ್ತವ್ಯ. ರಾಜ್ಯವು ದುರ್ಯೋಧನನದೇ, ಮತ್ತಾರದೂ ಅಲ್ಲ" ಎಂದನು.

ಕರ್ಣನ ಮಾತು ಕೇಳಿ ಭೀಷ್ಮನು ಧೃತರಾಷ್ಟ್ರನನ್ನು ಸಂಬೋಧಿಸಿ ಮತ್ತಿಂತೆಂದನು:—"ಮಹಾರಾಜ! ಇವನು ಪಾಂಡವರನ್ನು ಕೊಲ್ಲುವೆನೆಂದು ನಿತ್ಯವೂ ಹರಟುತ್ತಾನೆಯೇ ಹೊರತು ಇವನು ಆ ವೀರರಿಗೆ ಎಷ್ಟು ಮಾತ್ರವೂ ಸಮತೂಗಲಾರನು. ಈಗ ನಿನ್ನ ಮಕ್ಕಳಿಗೆ ಕಾಯ್ದಿರುವ ವಿಪತ್ತು ದುರ್ಮತಿ ಸೂತನ ಕೆಲಸವೇ ಎಂದು ತಿಳಿ. ಇವನನ್ನು ಆಶ್ರಯಿಸಿಕೊಂಡು ಮಂದಬುದ್ಧಿ ದುರ್ಯೋಧನನು ಪಾಂಡವರನ್ನು ಗೋಳಾಡಿಸಿದನು, ಅವಮಾನ ಪಡಿಸಿದನು. ಸೂತನು ಎಷ್ಟರವನು? ಅಂತಹ ಸಾಹಸ ಕಾರ್ಯವನ್ನೇನ ಮಾಡಿದನು? ವಿರಾಟನಗರದಲ್ಲಿ ಅರ್ಜುನನು ಇವನ ತಮ್ಮನನ್ನು ಕೊಂದು ಕೆಡಹಿದಾಗ ಇವನೇನ ಮಾಡಿದನು? ಭೀಮಾರ್ಜುನರು ಶೂರರು; ರಣದಲ್ಲಿ ವೈರಿಗಳನ್ನು ಗೆಲ್ಲದೆ ಬಿಡರು. ಧನಂಜಯನು ಅಪರಿಮಿತವಾದ ಕುರುಸೇನೆಯನ್ನು ಅಪ್ಪಳಿಸಿ ಅವರ ವಸ್ತ್ರಾಭರಣಗಳೆಲ್ಲವನ್ನೂ ಕಿತ್ತುಕೊಂಡಾಗ

ಇವನೆಲ್ಲಿ ಹೋಗಿದ್ದನು? ಅವನ ಪ್ರತಾಪಕ್ಕೆ ಇವನು ತಡೆಯುವನೆ? ಇವನ ಪೊಳ್ಳು ಮಾತುಗಳಿಂದಾಗುವುದೇನು?" ಎಂದನು.

ಅದನ್ನು ಕೇಳಿ ದ್ರೋಣಾಚಾರ್ಯನು ಧೃತರಾಷ್ಟ್ರನನ್ನು ಕುರಿತು— "ಮಹಾರಾಜ! ಭರತ ಶ್ರೇಷ್ಠನಾದ ಭೀಷ್ಮನು ಹೇಳಿದ ಹಾಗೆ ಮಾಡು. ದುರಾಶಾಪೀಡಿತರ ಮಾತನ್ನು ಕೇಳಿ ನಡೆಯುವುದು ಯುಕ್ತವಲ್ಲ. ಪಾಂಡವರಿಗೆ ಸಮಾನರಾದ ಧನುರ್ಧರರು ಯಾರೂ ಇಲ್ಲ" ಎಂದು ನುಡಿದು ಭೀಷ್ಮನ ಮತವನ್ನು ಸಮರ್ಥಿಸಿದನು.

ತರುವಾಯ ಧೃತರಾಷ್ಟ್ರನು ಸಂಜಯನನ್ನು ಕೇಳಿ ಕೇಳಿ ಪಾಂಡವರು ಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ ಸ್ವಸಾಮರ್ಥ್ಯದಿಂದಲೂ ಮಿತ್ರ ರಾಜರ ಸಹಾಯದಿಂದಲೂ ರಣೋದ್ಯೋಗಪರರಾಗಿರುವರೆಂದು ತಿಳಿದು, ಮತ್ತೆ ಮತ್ತೆ ಭೀಮಾರ್ಜುನರ ಪ್ರತಾಪವನ್ನೂ ಪಾಂಡವರ ಸಾಹಾಯ್ಯ ಸಂಪತ್ತಿಯನ್ನೂ ಕೇಳಿ ಸ್ವಬಲ ಪರಬಲವನ್ನು ಅರಿತು ಕುಸಿದು, ತಾವು ಯುದ್ಧಕ್ಕೆ ಹೋದರೆ ಕುರುಕುಲ ವಿನಾಶವಾಗುವುದೇ ನಿಶ್ಚಯವೆಂಬ ಭೀತಿಯಿಂದ ಕಳವಳಿಸುತ್ತ "ಯುದ್ಧದಿಂದ ಪ್ರಯೋಜನ ವಿಲ್ಲವೆಂದು ನಿನಗೆ ತೋರಿದರೆ ಸಂಧಿಗಾಗಿ ಪ್ರಯತ್ನ ಮಾಡೋಣ" ಎಂದು ಸಂಜಯನೊಡನೆ ಹೇಳಿದನು.

ಆ ಮಾತನ್ನು ಕೇಳಿ ಸಂಜಯನು, ಪಾಂಡವರಿಗಿದ್ದ ಜಯ ಸಾಧನಗಳೆಲ್ಲವನ್ನೂ ವಿಸ್ತರಿಸಿ ಹೇಳಿ—"ಆ ಪಾಪಿಷ್ಠನಾದ ನಿನ್ನ ಮಗನನ್ನೂ ಅವನ ಸಂಗಡಿಗರನ್ನೂ ಸರ್ವೋಪಾಯದಿಂದಲೂ ಅಣಗಿಸು ಎಂದು ವಿದುರನೂ ನಾನೂ ಎಷ್ಟೋ ಬಗೆಯಲ್ಲಿ ಹೇಳಿದೆವು; ನೀನು ಕೇಳಲಿಲ್ಲ. ಈಗ ನೀನು ಕೊರಗುವುದರಿಂದೇನು ಪ್ರಯೋಜನ?" ಎಂದನು.

ಅದಕ್ಕೆ ದುರ್ಯೋಧನನು—"ಹೆದರಬೇಡ, ಮಹಾರಾಜ! ನಮ್ಮನ್ನು ಕುರಿತು ನೀನು ಕೊರಗಬೇಡ. ಗದಾ ಯುದ್ಧದಲ್ಲಿ ನನಗೆ ಸಮರಿಲ್ಲ; ನನ್ನನ್ನು ಮೀರಿಸಿದವರಂತೂ ಈಗಿಲ್ಲ ಮುಂದೆಯೂ ಇರರು. ಭೀಷ್ಮ ದ್ರೋಣ ಕೃಪಾದಿಗಳು ಇರುವಲ್ಲಿ ಭಯವೇನು?

ಕರ್ಣನೊಬ್ಬನೇ ಸಾಲದೆ?" ಎಂದು ತನ್ನ ಪ್ರತಾಪವನ್ನು ಹೊಗಳಿ ಕೊಳ್ಳುತ್ತಲೂ ಜಯಸಾಧನಗಳನ್ನು ಹೇಳಿಕೊಳ್ಳುತ್ತಲೂ ಇದ್ದನು.

ಧೃತರಾಷ್ಟ್ರನು—"ದುರ್ಯೋಧನ ಯುದ್ಧದ ಯೋಚನೆ ಯನ್ನು ಬಿಡು. ಯಾವ ಅವಸ್ಥೆಯಲ್ಲಿಯೇ ಆಗಲಿ ಯುದ್ಧವು ಹಿತ ವೆಂದು ಯಾರೂ ಹೇಳರು. ಅಮಾತ್ಯರೊಡಗೂಡಿ ಬದುಕುವುದಕ್ಕೆ ನಿನಗೆ ಅರ್ಧ ರಾಜ್ಯವು ಸಾಲದೆ? ಪಾಂಡವರಿಗೆ ಅವರ ಪಾಲನ್ನು ಕೊಟ್ಟು ಬಿಡು. ನಮಗೆ ಹಿತರಾದ ಭೀಷ್ಮ ದ್ರೋಣಾದಿಗಳಾರೂ ಯುದ್ಧ ವನ್ನೊಪ್ಪರು ; ನಾನೂ ಒಪ್ಪೆನು" ಎನುತಲೆ,

ದುರ್ಯೋಧನನು—"ನೀನೂ ಬೇಡ, ಭೀಷ್ಮದ್ರೋಣಾದಿಗಳೂ ಬೇಡ ; ನಾನೂ ದುಃಶಾಸನನೂ ಕರ್ಣನೂ ಯುಧಿಷ್ಠಿರಾದಿಗಳನ್ನು ರಣದಲ್ಲಿ ಬಲಿಹಾಕುವೆವು. ನನ್ನ ಪ್ರಾಣವು ಹೋಗಲಿ, ಧನವು ಹೋಗಲಿ, ಸರ್ವಸ್ವವೂ ಹೋಗಲಿ ; ನಾನೆಂತೂ ಅರ್ಧ ರಾಜ್ಯವನ್ನು ಕೊಟ್ಟು ಅವರ ನೆರೆಯಲ್ಲಿರೆನು. ಅರ್ಧ ರಾಜ್ಯದ ಮಾತು ಹಾಗಿರಲಿ. ಸೂಜಿಯ ಮೊನೆ ಯೂರುವಷ್ಟು ನೆಲವನ್ನು ಕೂಡ ಅವರಿಗೆ ಕೊಡೆನು" ಎಂದು ನುಡಿದನು.

ಧೃತರಾಷ್ಟ್ರನು—"ಏನಾದರೂ ಆಗಿಹೋಗಲಿ, ಇನ್ನು ದುರ್ಯೋಧನನ ಆಸೆಯ ಬಿಟ್ಟೆನು. ಈ ಮಂದಮತಿಯನ್ನು ಅನು ವರ್ತಿಸುವ ರಾಜರಿಗೋಸ್ಕರ ನಾನು ವ್ಯಥೆಪಡುತ್ತೇನೆ" ಎಂದು ಅಲ್ಲಿ ನೆರೆದಿದ್ದ ರಾಜರಕಡೆ ತಿರುಗಿ ಹೇಳಿದನು.

ಆಗ ಕರ್ಣನು ಧೃತರಾಷ್ಟ್ರನನ್ನು ಲಕ್ಷ್ಯಮಾಡದೆಯೆ ದುರ್ಯೋ ಧನನನ್ನು ಸಂಬೋಧಿಸಿ—"ಪಿತಾಮಹನೂ ದ್ರೋಣನೂ ಈ ನರೇಂದ್ರ ಮುಖ್ಯರೂ ನಿನ್ನ ಬಳಿಯಲ್ಲಿಯೇ ಇರಲಿ ; ನನ್ನ ಸೇನೆಯೊಡನೆ ಹೊರಟು ಪಾಂಡವರನ್ನೂ ಅವರ ಪುತ್ರ ಪೌತ್ರರನ್ನೂ ಮಿತ್ರ ರಾಜರನ್ನೂ ನಿಮಿಷ ಮಾತ್ರದಲ್ಲಿ ಇಲ್ಲವೆನಿಸಿಬರುವೆನು" ಎಂದನು.

ಅದನ್ನು ಕೇಳಿ ಭೀಷ್ಮನು—"ಎಲೊ! ಕರ್ಣ! ಏನೆಂದೆ? ನಿನಗೀಬುದ್ಧಿ ಹುಟ್ಟಿರುವುದು ಕೇಡುಗಾಲಕ್ಕೇ ಹೊರತು ಬೇರೆಯಿಲ್ಲ.

ನೀನು ಮುಖ್ಯನು. ಮುಖ್ಯನು ಹತನಾದರೆ ಅವನ ಅನುಗತರಾದ ಧೃತರಾಷ್ಟ್ರ ಪುತ್ರರೂ ಹತರಾಗುವರು, ಇದನ್ನು ನೀನರಿಯೆಯಾ? ಖಾಂಡವ ದಹನಕಾಲದಲ್ಲಿ ಅರ್ಜುನನು ಮಾಡಿದ ಸಾಹಸವನ್ನು ಕೇಳಿಯೂ ಇಂತಹ ಮಾತನ್ನಾಡುವೆಯಾ? ನೀನೂ ನಿನ್ನ ಬಾಂಧವರೂ ಯೋಚಿಸಿ ಮಾತನಾಡಿರಿ. ಕಿರೀಟಿಯನ್ನು ಕೃಷ್ಣನು ರಕ್ಷಿಸುತ್ತಿರುವನು. ಕೃಷ್ಣಾರ್ಜುನರಿಬ್ಬರೂ ನಿನ್ನ ಬಾಣಗಳನ್ನು ಭಸ್ಮಮಾಡಿಬಿಡುವರು'' ಎಂದನು.

ಕರ್ಣನು—''ಕೃಷ್ಣನೇನೋ ಹಾಗೆಯೇ ಸರಿ. ಆ ಮಹಾತ್ಮನು ಇನ್ನೂ ಅಧಿಕನೆಂದೇ ಒಪ್ಪಿಕೊಳ್ಳುವೆನು. ಆದರೆ ಪಿತಾಮಹನು ತಾನಾಡಿದ ಪರುಷವಾಕ್ಯದಿಂದ ಏನಾಗುವುದೋ ಕೊಂಚ ಕೇಳಲಿ! ಇದೋ! ನನ್ನ ಶಸ್ತ್ರಗಳನ್ನು ಕೆಳಗಿಟ್ಟೆನು. ಇನ್ನುಮೇಲೆ ಪಿತಾಮಹನು ನನ್ನನ್ನು ಸಭೆಯಲ್ಲಿ ನೋಡುವನೇ ಹೊರತು ರಣರಂಗದಲ್ಲಿ ನೋಡ ಲಾರನು. ಪಿತಾಮಹನೆ! ನೀನು ತೆಪ್ಪಗಾದ ಮೇಲೆ ಭೂಮಿಪಾಲ ರೆಲ್ಲರಿಗೂ ನನ್ನ ಪ್ರಭಾವವನ್ನು ತೋರಿಸುವೆನು'' ಎಂದು ನುಡಿದು ಮಹಾಧನುಷ್ಮಂತನಾದ ಕರ್ಣನು ಸಭೆಯನ್ನು ಬಿಟ್ಟು ಹೊರಟು ಹೋದನು.

ಭೀಷ್ಮನು ದುರ್ಯೋಧನನ ಕಡೆಗೆ ತಿರುಗಿ ನಕ್ಕು— ''ಸೂತ ಪುತ್ರನು ಎಂತಹ ಸತ್ಯಪ್ರತಿಜ್ಞನು! ವೈರಿಗಳೆಲ್ಲರನ್ನೂ ತಾನೊಬ್ಬನೇ ನಾಶಮಾಡುವೆನೆಂದು ಅಡಿಗಡಿಗೂ ಪೌರುಷವನ್ನು ಕೊಚ್ಚುತ್ತಾನಲ್ಲ! ಇದೇನೇ ಅವನ ಪೌರುಷ? ಹೀಗೆಯೇನೇ ಅವನು ಪ್ರತಿಜ್ಞೆಯನ್ನು ಸಲ್ಲಿಸುವುದು? ಕರ್ಣ! ಭೀಮನು ಬಂದು ನಮ್ಮ ಭಟರ ತಲೆಗಳನ್ನು ಉತ್ತರಿಸಿ ಸೇನೆಯೆಲ್ಲವನ್ನು ಅಳಿಸುವುದನ್ನು ನೀನು ನೋಡದೆ ಹೋಗುವೆಯಾ?'' ಎಂದು ಹೇಳಿದನು.

ಆ ಮಾತಿಗೆ ದುರ್ಯೋಧನನು—''ಇತರರಂತೆಯೇ ಪೃಥೆಯ ಮಕ್ಕಳೂ. ಅವರಿಗೆ ಜಯವಾಗುವುದೆಂದು ನೀನು ಎಣಿಸುವುದಕ್ಕೇನು ಕಾರಣ? ನಾವೂ ಅವರೂ ವಯಸ್ಸಿನಲ್ಲಿಯೂ, ಪರಾಕ್ರಮದಲ್ಲಿಯೂ, ಬುದ್ಧಿಯಲ್ಲಿಯೂ, ಶಾಸ್ತ್ರ ಜ್ಞಾನದಲ್ಲಿಯೂ ಸಮಾನರು. ಇಬ್ಬರೂ

ಸಮ ಜಾತೀಯರು, ಮಾನುಷಗರ್ಭದಲ್ಲಿ ಹುಟ್ಟಿದವರೇ. ಹೀಗಿರುವಲ್ಲಿ, ಪಿತಾಮಹನೆ! ಪಾಂಡವರಿಗೇ ಜಯವಾಗುವುದೆಂದು ನೀನು ಹೇಗೆ ಬಲ್ಲೆ? ನನಗೆ ದ್ರೋಣಾದಿಗಳ ಸಾಹಾಯ್ಯವೂ ಬೇಡ, ಇತರ ರಾಜರ ಸಾಹಾಯ್ಯವೂ ಬೇಡ. ನಾನೂ ಕರ್ಣನೂ ನನ್ನ ತಮ್ಮ ದುಃಶಾಸನನೂ ಸಾಕು. ನಮ್ಮ ಬಾಣಗಳಿಂದ ಪಾಂಡವರೈವರ ಸೊಕ್ಕನ್ನು ಮುರಿದು ಕೃಷ್ಣಾರ್ಜುನರ ಜಂಕವನ್ನು ಜಡಿಸುವೆವು" ಎಂದು ಗಳಹಿದನು.

ಆಗ ವಿದುರನು—"ಜ್ಞಾತಿ ವಿರೋಧವೂ ಅತ್ಯಾಶೆಯೂ ಅನರ್ಥಕ್ಕೆ ಕಾರಣಗಳಾಗುವುವು. ಯುದ್ಧದಲ್ಲಿ ಜಯ ಪರಾಜಯಗಳು ನಿಶ್ಚಿತವಲ್ಲ" ಎಂದು ಹೇಳಿ, "ಧೃತರಾಷ್ಟ್ರ! ಯುದ್ಧದಲ್ಲಿ ಇತ್ತಂಡಕ್ಕೂ ಜಯವಾಗಲಾರದು. ಯುಧಿಷ್ಠಿರನನ್ನು ಆದರಿಸಿ ಪ್ರೀತಿಯಿಂದ ವಶಮಾಡಿಕೊ" ಎಂದು ನುಡಿದನು.

ಮರಳಿ ಧೃತರಾಷ್ಟ್ರನು, ಅರ್ಜುನನಿಗೆ ಶ್ರೀಕೃಷ್ಣನ ಬಲವಿರುವುದರಿಂದ ಅವನನ್ನು ಜಯಿಸುವುದಾರಿಗೂ ಸಾಧ್ಯವಲ್ಲವೆಂದು ಹೇಳಿ— "ದುರ್ಯೋಧನ! ಸುಹೃತ್ತುಗಳ ಮಾತನ್ನು ಕೇಳು. ವೃದ್ಧನಾದ ಭೀಷ್ಮ ಪಿತಾಮಹನ ಬುದ್ಧಿವಾದವನ್ನು ಅಂಗೀಕರಿಸು. ಹಾಗೆಯೇ ದ್ರೋಣಕೃಪಾದಿಗಳ ಮಾತನ್ನೂ ಕೇಳು. ಅವರು ನಮಗೆ ಆಪ್ತರು. ನಿನಗೆ ನಾನು ಹೇಗೋ ಅವರೂ ಹಾಗೆಯೇ. ಅರ್ಜುನನೊಬ್ಬನೇ ಸಾಕು; ಐವರೂ ಕೂಡಿದಲ್ಲಿ ಅವರಿಗೆ ನಮ್ಮನ್ನು ನಿಗ್ರಹಿಸುವುದು ಘನವೆ? ಅರ್ಜುನಾದಿಗಳನ್ನು ಭ್ರಾತೃಗಳೆಂದು ತಿಳಿದು ಅರ್ಧರಾಜ್ಯವನ್ನು ಕೊಟ್ಟು ಅವರ ಪ್ರೀತಿಯನ್ನು ಸಂಪಾದಿಸು" ಎಂದನು.

ದುರ್ಯೋಧನನು ತಂದೆಯ ಮಾತನ್ನು ಕಿವಿಗೆ ಕಡೆಯಹಾಗೆಣಿಸಿ ಕದನಕ್ಕೆ ಕಾಲ ಕೆರೆಯುತ್ತಿದ್ದನು. ಸರ್ವರೂ ಮೌನವನ್ನು ಧರಿಸಿದರು. ರಾಜರೆಲ್ಲರೂ ಎದ್ದು ಹೊರಟುಹೋದರು.

ಆ ಬಳಿಕ ಧೃತರಾಷ್ಟ್ರನು ಅಪೇಕ್ಷಿಸಿದ ಮೇರೆಗೆ ಸಂಜಯನು ಕೃಷ್ಣಾರ್ಜುನರ ಗುಣಕಥನ ಮಾಡಿದನು. ಆಗ ಧೃತರಾಷ್ಟ್ರನು ಅವರಿಬ್ಬರ ಮಹಿಮೆಯನ್ನು ಕೇಳಿ ತನ್ನ ಮಗನನ್ನು ಕರೆದು—

"ದುರ್ಯೋಧನ! ಕೇಶವನಿಗೆ ಶರಣಾಗತನಾಗು; ಸಂಜಯನು ನಮಗೆ ಹಿತನು. ಅವನ ಮಾತನ್ನು ನಂಬು" ಎಂದನು.

ದುರ್ಯೋಧನನು—"ಭಗವಾನ್ ದೇವಕೀ ಪುತ್ರನು ಅರ್ಜುನನನ್ನು ಹಿಂದಿಕ್ಕಿಕೊಂಡು ನಿಂತು ಜೀವಲೋಕವನ್ನೇ ನಾಶಮಾಡಲಿ, ನಾನು ಬೇರೆ ಕೇಶವನ ಮರೆಹೊಗೆನು" ಎನಲು,

ಧೃತರಾಷ್ಟ್ರನು ಸಮೀಪದಲ್ಲಿದ್ದ ಹೆಂಡತಿಯನ್ನು ಸಂಬೋಧಿಸಿ–"ಗಾಂಧಾರಿ! ದುರ್ಮತಿಯಾದ ಈ ನಿನ್ನ ಮಗನು ಇನ್ನು ಕೆಟ್ಟು ಹೋಗುವನು. ಈರ್ಷೆಯಿಂದಲೂ ಗರ್ವದಿಂದಲೂ ಕೆಟ್ಟು ತನಗೆ ಹಿರಿಯರೂ ಹಿತಚಿಂತಕರೂ ಆದವರ ಮಾತೆಲ್ಲವನ್ನೂ ತೃಣೀಕರಿಸುತ್ತ ಇದ್ದಾನೆ" ಎಂದನು.

ಅದನ್ನು ಕೇಳಿ ಗಾಂಧಾರಿಯು—"ಎಲೊ, ದುಷ್ಟಾತ್ಮನೆ! ಹಿರಿಯರ ಆಜ್ಞೆಯನ್ನು ಕಳೆಯುತ್ತೀಯಲ್ಲ! ಮೂರ್ಖ! ತಾಯಿತಂದೆಗಳನ್ನೂ ತೊರೆದು ಧನವನ್ನೂ ಪ್ರಾಣವನ್ನೂ ನೀಗಿಕೊಂಡು ನನ್ನನ್ನು ಶೋಕಕ್ಕೆ ಈಡುಮಾಡಿ ಹಗೆಗಳು ಸಂತೋಷಪಡುವಂತೆ ಮಾಡುತ್ತೀಯಲ್ಲ! ಭೀಮಸೇನನ ಗದೆಯಪೆಟ್ಟು ಬಿದ್ದಾಗ ನಿಮ್ಮ ತಂದೆಯ ಮಾತನ್ನು ನೀನು ಸ್ಮರಿಸದೆ ಹೋಗೆ" ಎಂದಳು.

---

# ಹನ್ನೊಂದನೆಯ ಅಧ್ಯಾಯ

## ಶ್ರೀಕೃಷ್ಣನ ರಾಯಭಾರ.

ಸಂಜಯನು ತನ್ನ ದೌತ್ಯವನ್ನು ಮುಗಿಸಿಕೊಂಡು ಹಿಂದಕ್ಕೆ ಹೊರಟುಹೋದ ಕೂಡಲೆ ಅವನಾಡಿದ ಮಾತಿನಿಂದ ಧರ್ಮರಾಯನು ಧೃತರಾಷ್ಟ್ರ ದುರ್ಯೋಧನರು ತನ್ನ ಪಾಲಿನ ರಾಜ್ಯವನ್ನು ಸಮವಿಸ ಯಕ್ಕೆ ಕೊಡಲೊಪ್ಪರೆಂದು ಅರಿತು ಮುಂದೆ ಮಾಡತಕ್ಕ ಕಾರ್ಯ ವನ್ನು ಯೋಚಿಸತೊಡಗಿದನು. ಧೃತರಾಷ್ಟ್ರನು ಲೋಭಿ, ಲೋಭಿ ಯಾದ ಮಗನ ವಶನು. ಮಗನ ಮೇಲಣ ಪ್ರೀತಿಯಿಂದ ಧರ್ಮವ ನ್ನಾಚರಿಸನು. ಈ ಸ್ಥಿತಿಯಲ್ಲಿ ಧರ್ಮರಾಯನು ಆಪದ್ಬಾಂಧವನಾದ ಶ್ರೀಕೃಷ್ಣನೇ ತಮ್ಮನ್ನು ಕಡೆಹಾಯಿಸುವನೆಂದು ಸಂಪೂರ್ಣವಾಗಿ ನಂಬಿ ತಮ್ಮಂದಿರನ್ನು ಮೊದಲ್ಗೊಂಡು ತನ್ನವರೆಲ್ಲರ ಅನುಮತಿಯಿಂದ ಪೂರ್ವಕಥೆಯೆಲ್ಲವನ್ನೂ ಅನುವಾದಿಸಿ ಇಂತೆಂದು ಕೃಷ್ಣನ ಸಾಹಾಯ್ಯ ವನ್ನು ಬೇಡಿದನು :—

"ಕೃಷ್ಣ! ಸಂಜಯನು ಹೇಳಿದುದೆಲ್ಲವನ್ನು ನೀನು ಕೇಳಿದೆ. ಧೃತರಾಷ್ಟ್ರನು ಸಂಧಿಗೊಪ್ಪುವನಂತೆ; ಆದರೆ ನಮ್ಮ ರಾಜ್ಯವನ್ನು ಮಾತ್ರ ಕೊಡನಂತೆ. ಅವನು ದುರ್ಯೋಧನನ ಮಾತನ್ನು ಕೇಳಿ ಕೊಂಡು ಸ್ವಪ್ರಯೋಜನವನ್ನು ಸಾಧಿಸುತ್ತ ನಮಗೆ ದ್ರೋಹವನ್ನು ಎಣಿಸುತ್ತಿರುವನು. ನಾನು ಹೆತ್ತತಾಯನ್ನೂ ಆಪ್ತಮಿತ್ರರನ್ನೂ ಕೂಡ ಪೋಷಿಸುವ ಸ್ಥಿತಿಯಲ್ಲಿಲ್ಲ! ಕೃಷ್ಣ! ಇದಕ್ಕಿಂತ ಇನ್ನು ದುಃಖವುಂಟೆ? ನನಗೆ ಭರತವಂಶವನ್ನು ತೊಡೆಯಲ್ಲಿಷ್ಟವಿಲ್ಲ. ನೀನು ನನಗೆ ನಾಥ ನಾಗಿ ನನ್ನನ್ನು ರಕ್ಷಿಸುತ್ತಿದ್ದರೂ ಕೂಡ ನಾನು ಐದು ಗ್ರಾಮಗಳನ್ನು ಬೇಡಿದೆನು. ದುಷ್ಟ ದುರ್ಯೋಧನನು ಅವನ್ನು ಕೂಡ ನೀಡಲೊಲ್ಲನು; ಎಷ್ಟಾದರೂ ದಣಿಯದೆ ಸರ್ವಸ್ವವೂ ತನ್ನದೇ ಎಂದು ಬಗೆಯು ತ್ತಿರುವನು. ಮಧುಸೂಧನ! ರಾಜ್ಯಭ್ರಷ್ಟರಾಗಿ ಇಷ್ಟು ವರ್ಷಗಳೂ ನಾವು ಹೇಗೆ ಬಳಲಿದೆವೊ ನೀನು ಕಾಣೆಯಾ? ನಮ್ಮ ಸಿರಿಯನ್ನು

ನಾವು ಕಳೆದುಕೊಳ್ಳುವುದು ಯಾವ ಬಗೆಯಲ್ಲಿಯೂ ನ್ಯಾಯವಲ್ಲ. ಅದನ್ನು ಬರಮಾಡಿಕೊಳ್ಳುವ ನಿಮಿತ್ತವಾಗಿ ನಾವು ಹೋರಾಡಿ ಹತ ರಾದರೂ ಲೇಸೆ. ನಾವೂ ಅವರೂ ಶಾಂತರಾಗಿ ಕಷ್ಟ ಸುಖಗಳಲ್ಲಿ ಸಮ ಭಾಗಸ್ಥರಾಗಿ ನಮ್ಮ ನಮ್ಮ ಸಂಪದವನ್ನು ನಾವು ಅನುಭವಿ ಸುವುದು ಉತ್ತಮ ಕಲ್ಪ. ಹಾಗಾಗದ ಪಕ್ಷದಲ್ಲಿ ನಾವು ಕೌರವರನ್ನು ನಿಗ್ರಹಿಸಿ ರಾಷ್ಟ್ರಗಳನ್ನು ಗೆದ್ದುಕೊಳ್ಳದೆ ಬಿಡೆವು. ಇದೇನೋ ಪರಮ ಘಾತುಕ ಕೃತ್ಯವೆಂದು ಬಲ್ಲೆನು. ಕೃಷ್ಣ! ಹಗೆಯು ನಮ್ಮ ಬಳಗವಲ್ಲದೆ ಹೋಗಲಿ, ಕಡೆಗೆ ಪರಮ ನೀಚನಾಗಲಿ, ಅಂತಹವನನ್ನು ಕೂಡ ಕೊಲ್ಲುವುದು ಯುಕ್ತವಲ್ಲ. ಹೀಗಿರುವಲ್ಲಿ, ನಮ್ಮ ಜ್ಞಾತಿಗಳೂ ಹಿರಿಯರೂ ಪರಮ ಪೂಜ್ಯರೂ ಆದವರನ್ನು ಕೊಲ್ಲುವುದು ಮಹಾ ಪಾತಕ ವೆಂದು ಬೇರೆ ಹೇಳಬೇಕೆ? ಕ್ಷತ್ರಿಯ ಧರ್ಮವು ಎಂತಹ ಪಾಪಕರ್ಮ! ಅದು ಧರ್ಮವಾಗಲಿ ಅಧರ್ಮವಾಗಲಿ, ಬೇರೆ ಯಾವ ವೃತ್ತಿಯೂ ನಮಗೆ ಸಲ್ಲದಲ್ಲಾ! ಶೂದ್ರನು ಸೇವೆಮಾಡಿ ಜೀವಿಸುವನು, ವೈಶ್ಯನು ಪಣ್ಯವನ್ನು ಮಾರಿ ಜೀವಿಸುವನು, ನಾವು ಕೊಲೆಯಿಂದ ಜೀವಿಸುವೆವು, ಬ್ರಾಹ್ಮಣನು ಬವನಾಸಿಯನ್ನು ಹಿಡಿದು ಜೀವಿಸುವನು. ತಂತಮ್ಮ ಧರ್ಮವನ್ನು ಅನುಸರಿಸಿಯೇ ಕ್ಷತ್ರಿಯನು ಕ್ಷತ್ರಿಯನನ್ನು ಕೊಲ್ಲು ವನು, ದೊಡ್ಡ ಮೀನು ಸಣ್ಣ ಮೀನನ್ನು ನುಂಗುವುದು, ನಾಯಿ ನಾಯನ್ನು ಕೊಲ್ಲುವುದು. ಯುದ್ಧರಂಗದಲ್ಲಿಯಾದರೋ ಯಾವಾಗಲೂ ಕಲಿಪುರುಷನು ತಾಂಡವವಾಡುತ್ತಿರುವನು; ಅವನ ಪ್ರಭಾವದಿಂದ ಎಡೆಬಿಡದೆ ಕೊಲೆಯಾಗುತ್ತಿರುವುದು. ಯುದ್ಧವು ಎಷ್ಟು ದೀರ್ಘಕಾಲ ನಡೆದರೂ ಕೊನೆಮುಟ್ಟುವುದಲ್ಲ. ವೈರವು ವೈರದಿಂದ ಹೆಚ್ಚುವುದೇ ಹೊರತು ಅಡಗುವುದಿಲ್ಲ. ಆದುದರಿಂದ ಪರ ಪಕ್ಷವನ್ನು ನಿಃಶೇಷವಾಗಿ ನಾಶಮಾಡಿದ ಹೊರತು ಶಾಂತಿಯು ಸ್ಥಿರವಾಗಿ ನೆಲಸದು. ಆದರೆ ಪರ ಪಕ್ಷವನ್ನು ಹೀಗೆ ನಿರ್ಮೂಲ ಮಾಡುವುದಕ್ಕಿಂತ ಘೋರತರವಾದ ಕೃತ್ಯವು ಯಾವುದೂ ಅಲ್ಲ. ಅದರಿಂದ ಶಾಶ್ವತವಾದ ಅಪಕೀರ್ತಿ ಬೇರೆ ಬರುವುದು; ಅದು ಹೋಗಲಿ, ರಾಜ್ಯದಾಸೆಯನ್ನೇ ಬಿಟ್ಟು ಶಾಂತಿ ಯನ್ನು ನೆಲೆಗೊಳಿಸುವೆವು ಎಂದರೆ, ರಾಜ್ಯ ಹೋದರೂ ಬಂದೇ,

ಪ್ರಾಣ ಹೋದರೂ ಒಂದೇ. ನನಗೆ ರಾಜ್ಯವನ್ನು ತ್ಯಜಿಸುವುದಕ್ಕೂ ಮನಸ್ಸಿಲ್ಲ, ಕುಲವನ್ನು ನಾಶಮಾಡುವುದಕ್ಕೂ ಮನಸ್ಸಿಲ್ಲ. ಇಂತಹ ಸಂಕಟದಲ್ಲಿ ಹಗೆಯ ಕಾಲಿಗೆ ಬಿದ್ದಾದರೂ ಸಂಧಿಯನ್ನು ಬೇಡುವುದು ಲೇಸು. ಆದರೆ ನಾವು ಯುದ್ಧದ ಆಲೋಚನೆಯನ್ನು ಬಿಟ್ಟು ಶಾಂತಿ ಗೋಸ್ಕರ ಪಡುವ ಶ್ರಮವೆಲ್ಲವೂ ನಿಷ್ಫಲವಾದರೆ, ಯುದ್ಧವು ಆಗಿಯೇ ತೀರುವುದು. ಯಾವಾಗ ಕಾಳೆಗವು ಕೈಗಟ್ಟುವುದೋ ಆಗ ಪರಾಕ್ರಮವನ್ನು ತೋರಿಸಬೇಕಾಗುವುದು. ಆದರೆ ಧೃತರಾಷ್ಟ್ರನು ನಮಗೆ ಪೂಜ್ಯನು. ಅವನ ಮೇಲೆ ಕೈಮಾಡುವುದು ಹೇಗೆ? ಅವನಾದರೋ, ಮಗನ ಮೇಲಣ ಪ್ರೀತಿಯಿಂದ ಮಗನ ವಶವರ್ತಿಯಾಗಿರುವನೇ ಹೊರತು ತಾನಾಗಿಯೆಂದರೂ ನಮಗೊಲಿಯನು. ಕೃಷ್ಣ! ಈ ಸ್ಥಿತಿಯಲ್ಲಿ ನಮ್ಮ ಕರ್ತವ್ಯವೇನು? ಅರ್ಥ ಧರ್ಮಗಳೆರಡಕ್ಕೂ ಹಾನಿ ಬಾರದಿರುವುದಕ್ಕೆ ಹದುವೇನು? ನೀನು ನಮಗೆ ಪ್ರಿಯನು, ಹಿತನು, ಕಾರ್ಯಗತಿಯನ್ನು ಬಲ್ಲವನು. ಈ ಕಷ್ಟ ಕಾಲದಲ್ಲಿ ಸರ್ವವನ್ನೂ ಬಲ್ಲ ಆಪ್ತನೂ ಮಿತ್ರನೂ ನಮಗಿನ್ನಾರು?''

ಶ್ರೀಕೃಷ್ಣನೂ ಜ್ಞಾತಿಗಳ ಮಧ್ಯದಲ್ಲಿದ್ದು ಕೋಟಲೆಪಟ್ಟವನೇ. ಅವನು ಬಹುರಾಜ್ಯ ವಿಜೇತನಾದರೂ ಜ್ಞಾತಿಗಳಿಗೆ ಕೊಡದೆ ತನ್ನೈಶ್ವರ್ಯವನ್ನು ಭೋಗಿಸಿದವನಲ್ಲ. ಆದರೂ—''ಜ್ಞಾತಿಗಳಿಗೆ ನನ್ನ ಸಂಪತ್ತಿನಲ್ಲಿ ಅರ್ಧಾಂಶವನ್ನು ಕೊಟ್ಟೂ ಕೂಡ ಅವರಾಡುವ ಕಟು ವಾಕ್ಯವನ್ನು ಕೇಳಿಕೊಂಡು ಅವರ ದಾಸನಂತೆ ನಡೆದುಕೊಳ್ಳುತ್ತಿದ್ದೇನೆ. ಬಲದೇವನು ಬಲಿಷ್ಠನು, ಗದನು ಸುಕುಮಾರನು, ಪ್ರದ್ಯುಮ್ನನು ಸುಂದರನು. ಅಂಧಕ ವೃಷ್ಣಿ ವಂಶೀಯರು ಪರಾಕ್ರಮಶಾಲಿಗಳು. ಅವರು ಯಾರಿಗೆ ಸಾಹಾಯ್ಯವನ್ನು ಮಾಡರೋ ಅವರು ಕೆಡುವರು, ಯಾರಿಗೆ ಮಾಡುವರೋ ಅವರು ಅನಾಯಾಸವಾಗಿ ಅತುಲೈಶ್ವರ್ಯವನ್ನು ಪಡೆಯುವರು. ಇವರೆಲ್ಲರೂ ನನ್ನ ಪಕ್ಷದವರಾದರೂ ನಾನು ಅಸಹಾಯನಾಗಿ ಕಾಲವನ್ನು ತಳ್ಳುತ್ತಿದ್ದೇನೆ. ಆಹುಕನೂ ಅಕ್ರೂರನೂ ನನ್ನ ಪರಮ ಮಿತ್ರರು. ಆದರೂ ಒಬ್ಬನನ್ನು ಪ್ರೀತಿಸಿದರೆ ಇನ್ನೊಬ್ಬನಿಗೆ ಕೋಪಬರುವುದು. ಇದನ್ನರಿತು ನನ್ನ ಪ್ರೀತಿಯನ್ನು

ಹೊರಗೆ ತೋರಿಸಿಕೊಳ್ಳದಿದ್ದೇನೆ. ಅವರನ್ನು ಪರಿತ್ಯಜಿಸಿಬಿಡುವೆನೆಂದರೆ, ಅವರಮೇಲೆ ನನಗೆ ಪ್ರೀತಿಯಿರುವುದರಿಂದ, ಅವರನ್ನು ಪರಿತ್ಯಾಗಮಾಡುವುದೂ ಕಷ್ಟ. ಅವರು ಯಾರ ಪಕ್ಷವನ್ನು ವಹಿಸಿದರೆ ಅವರ ದುಃಖಕ್ಕೆ ಪಾರವಿಲ್ಲ. ಅವರು ಯಾರ ಪಕ್ಷವನ್ನು ಹಿಡಿಯರೋ ಅವರಿಗಿಂತ ದುಃಖಿಗಳು ಇಲ್ಲವೆನಿಸುವರು. ಹೀಗಿರುವಲ್ಲಿ, ಏನಾದರೂ ಆಗಲೆಂದು ನಾನು ಜೂದಾಳಿಗಳಾದ ಇಬ್ಬರ ಮಕ್ಕಳ ತಾಯಿಯಂತೆ ಇಬ್ಬರಿಗೂ ಜಯವಾಗಲೆಂದು ಹರಸುತ್ತೇನೆ. ನಾರದ! ಈ ಮಿತ್ರರಿಬ್ಬರನ್ನು ವಶಮಾಡಿಕೊಳ್ಳುವುದಕ್ಕೆ ನಾನಿಷ್ಟು ಕಷ್ಟಪಡುತ್ತಿದ್ದೇನೆ'' ಎಂದು ಒಂದು ಸಂದರ್ಭದಲ್ಲಿ ಶ್ರೀಕೃಷ್ಣನು ನಾರದನ ಸಂಗಡ ಹೇಳಿಕೊಂಡನು.

ಅದೇ ಪ್ರಕಾರವಾಗಿ ಕೌರವ ಪಾಂಡವರಿಬ್ಬರ ಯೋಗಕ್ಷೇಮವನ್ನೂ ಬಯಸಿ ಧರ್ಮರಾಯನ ಮಾತನ್ನು ಕೇಳಿ ಕೃಷ್ಣನು ಇಂತೆಂದನು:—''ನಿಮ್ಮಿಬ್ಬರ ಹಿತಾರ್ಥವಾಗಿ ಕುರುರಾಯನ ಬಳಿಗೆ ಹೋಗಿಬರುವೆನು. ನಿನ್ನ ಯೋಗಕ್ಷೇಮಕ್ಕೆ ಭಂಗ ಬಾರದಂತೆ ಸಂಧಿಮಾಡಿಸಿದ ಪಕ್ಷಕ್ಕೆ ನಾನು ಮಹಾ ಪುಣ್ಯಕಾರ್ಯವನ್ನು ಮಾಡಿದಂತಾಗುವುದು; ನಾನು ಕುರುಪಾಂಡವರನ್ನು ಮಾತ್ರವೇ ಅಲ್ಲ, ಲೋಕವನ್ನೇ ಮೃತ್ಯುಪಾಶದಿಂದ ಬಿಡಿಸಿದಂತಾಗುವುದು.''

ಕೃಷ್ಣನು ಸಂಜಯನ ಮೂಲಕವಾಗಿ ಧೃತರಾಷ್ಟ್ರನ ಅಭಿಪ್ರಾಯವನ್ನು ತಿಳಿದು ಯುಧಿಷ್ಠಿರನ ಬುದ್ಧಿಯು ಧರ್ಮವನ್ನು ಆಶ್ರಯಿಸಿರುವುದನ್ನೂ ಧೃತರಾಷ್ಟ್ರನ ಮತಿಯು ಮಗನ ದುರ್ಬುದ್ಧಿಯನ್ನು ಆಶ್ರಯಿಸಿರುವುದನ್ನೂ ಕಂಡು, ಜಯವಾಗಲಿ, ವಧೆಯಾಗಲಿ ಯುದ್ಧವು ಕ್ಷತ್ರಿಯನ ಸ್ವಧರ್ಮವಾದುದರಿಂದ ದೈನ್ಯದಿಂದ ಅದಕ್ಕೆ ಹಿಮ್ಮೆಟ್ಟಬಾರದೆಂದು ಯುದ್ಧಪಕ್ಷವನ್ನು ಸಮರ್ಥಿಸಿ—''ರಾಜನೇ! ನೀನು ಅವರನ್ನು ಮಾರ್ದವದಿಂದ ಉಪಚರಿಸುತ್ತಿರುವವರೆಗೂ ಅವರು ನಿನಗೆ ರಾಜ್ಯವನ್ನು ಬಿಟ್ಟುಕೊಡರು; ಧೃತರಾಷ್ಟ್ರನ ಮಕ್ಕಳು ದಯಾದಾಕ್ಷಿಣ್ಯಶೂನ್ಯರು; ಧರ್ಮಾರ್ಥಗಳನ್ನು ಲಕ್ಷ್ಯಮಾಡುವರಲ್ಲ; ಕೋಪದ ವೇಳೆಯಲ್ಲಿ ನಿಮಗೆ ಅಪಕಾರ ಮಾಡಿದುದು ಹೋಗಲೆಂದರೂ ಉಪಶಾಂತರಾದಮೇಲೂ ಕೂಡ ಅವರು ಅನುತಾಪವನ್ನು ಪಡುವರಲ್ಲ.

ಆದುದರಿಂದ ಅವರು ನಿನ್ನ ಕೋರಿಕೆಯಂತೆ ನಡೆಯರು. ಭೀಷ್ಮ ದ್ರೋಣ ಪ್ರಮುಖರ ಮುಂದೆಯೇ ದ್ಯೂತದಲ್ಲಿ ದಾನ ಧರ್ಮಶೀಲನಾದ ನಿನ್ನನ್ನು ವಂಚಿಸಿ ರಾಜ್ಯವನ್ನು ಅಪಹರಿಸಿದ ಆ ಪಾಪಿ ದುರ್ಯೋಧನನಿಗೆ ನೀನು ಕರುಣೆಯನ್ನು ತೋರಿಸಕೂಡದು. ಅವನು ಲೋಕಕ್ಕೇ ವಧಾರ್ಹನು, ಇನ್ನು ನಿನ್ನಿಂದ ವಧ್ಯನೆಂದು ಹೇಳ ಬೇಕೆ? ಧೃತರಾಷ್ಟ್ರ ಭೀಷ್ಮರು ನಿನಗೆ ಪೂಜ್ಯರೆಂದು ಹೇಳಿದೆಯಲ್ಲವೆ? ನಾನೊಪ್ಪಿದೆನು. ನೀನು ಅವರನ್ನು ಅವಶ್ಯವಾಗಿ ವಂದಿಸು. ರಾಜನೇ! ನಿನ್ನ ಅರ್ಥವು ಕೆಡದಂತೆ ಸಂಧಿಗೆ ಪ್ರಯತ್ನಪಡುವೆನು. ಆದರೆ ವಸ್ತುಸ್ಥಿತಿಯನ್ನು ಬಗೆದು ನೋಡಲಾಗಿ ಯುದ್ಧವು ಅವಶ್ಯಂಭಾವಿಯೆಂದು ತೋರುವುದು. ನೀನು ಯುದ್ಧಕ್ಕೆ ತಕ್ಕ ಸನ್ನಾಹಗಳನ್ನು ಮಾಡುತ್ತಿರು.''

ಎಂದು ನುಡಿದು, ತಾನು ಹಸ್ತಿನಾಪುರಕ್ಕೆ ಹೋಗುವುದರಿಂದ ಯುಧಿಷ್ಠಿರನ ಉದ್ದೇಶವು ನೆರವೇರದೆ ಹೋದರೂ, ತನ್ನ ಕರ್ತವ್ಯವನ್ನು ತಾನು ಮಾಡಿದಂತಾಗುವುದು; ಕಡೆಯ ಪಕ್ಷ, ಲೋಕಾಪವಾದ ವಾದರೂ ತಪ್ಪುವುದು ಎಂದು ಶ್ರೀಕೃಷ್ಣನು ಹೇಳಿದನು.

ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗುವ ಸಮಾಚಾರವನ್ನು ಬೇಹುಕಾರರಿಂದ ತಿಳಿದು ಅವನನ್ನು ಸಂಭ್ರಮದಿಂದ ಇದಿರುಗೊಳ್ಳು ವುದಕ್ಕಾಗಿ ತಕ್ಕ ಸಂವಿಧಾನಗಳನ್ನು ಮಾಡುವಂತೆ ಧೃತರಾಷ್ಟ್ರನು ದುರ್ಯೋಧನನಿಗೆ ಹೇಳಿದನು. ದುರ್ಯೋಧನನು ತಂದೆಯ ಆಜ್ಞೆಯಂತೆ ಶ್ರೀಕೃಷ್ಣನು ಬರುವ ದಾರಿಯಲ್ಲಿ ರಮಣೀಯವಾದ ಸ್ಥಳಗಳಲ್ಲಿ ಸರ್ವರತ್ನ ಸಮಾಕೀರ್ಣವಾದ ಮಂಟಪಗಳನ್ನು ಕಟ್ಟಿಸಿ, ವಿಚಿತ್ರವಾದ ಪೀಠಗಳನ್ನು ಹಾಕಿಸಿ, ವಿವಿಧ ಅನ್ನ ಪಾನಗಳನ್ನೂ ಭಕ್ಷ್ಯಭೋಜ್ಯಗಳನ್ನೂ ಮಾಡಿಸಿ, ಬಗೆಬಗೆಯ ವಸನ ಭೂಷಣ ಗಳನ್ನೂ ಪರಿಮಳಗಳನ್ನೂ ಸುಗಂಧ ಪುಷ್ಪ ಮಾಲಿಕೆಗಳನ್ನೂ ಮಂಟಪ ಮಂಟಪಕ್ಕೂ ಕಳುಹಿಸಿಕೊಟ್ಟನು. ಅದರೊಳಗೂ ವೃಕಸ್ಥಳದಲ್ಲಿ ಕೃಷ್ಣನು ತಂಗುವ ನಲುವಾಗಿ ಸೊಗಸಾದ ಮಂಟಪವನ್ನು ಕಟ್ಟಿಸಿ ಅಲ್ಲಿ ಅಂಗಮಣಿ ಇಡುವುದಕ್ಕೆ ಬಹು ರತ್ನಗಳನ್ನು ಕಳುಹಿಸಿಕೊಟ್ಟನು. ಧೃತರಾಷ್ಟ್ರ ದುರ್ಯೋಧನರು ಕೃಷ್ಣನನ್ನು ಒಲಿಸಿಕೊಳ್ಳುವುದಕ್ಕೆ

ಇಷ್ಟು ಬೆಡಗುಮಾಡಿದರೂ ಕೃಷ್ಣನು ಆ ವಿವಿಧ ರತ್ನರಾಜಿಗಳ ಕಡೆಗೆ ತಿರುಗಿ ಕೂಡ ನೋಡದೆ ಅಲ್ಲಿಂದ ಮುಂದಕ್ಕೆ ಹೊರಟನು.

ಧೃತರಾಷ್ಟ್ರನು ಶ್ರೀಕೃಷ್ಣನ ಆಗಮನವನ್ನು ಕೇಳಿ ಅವನಿಗೆ ವಿವಿಧ ವಸ್ತುವಾಹನಗಳನ್ನೂ ದಾಸ ದಾಸಿಯರನ್ನೂ ಕಾಣಿಕೆ ಕೊಡುವೆನೆಂದು ವಿದುರನ ಸಂಗಡ ಹೇಳಿ ತನ್ನ ಅರಮನೆಯನ್ನೂ ದುರ್ಯೋಧನ ದುಃಶಾಸನರ ಅರಮನೆಗಳನ್ನೂ ಶೃಂಗಾರಮಾಡಿ ದುಃಶಾಸನನ ಮನೆಯಲ್ಲಿ ಕೃಷ್ಣನನ್ನು ಇಳಿಸುವಂತೆ ನಿಶ್ಚಯಿಸಿದನು.

ಧೃತರಾಷ್ಟ್ರನ ನಡಗರವನ್ನು ನೋಡಿ ವಿದುರನು—"ಮಹಾರಾಜನೆ! ಎಲ್ಲ ಕಾರ್ಯಗಳಲ್ಲಿಯೂ ನಿಷ್ಕಪಟಿಯಾಗಿ ನಡೆ. ಅತಿಥಿಯಾದ ಕೃಷ್ಣನಿಗೆ ನೀನು ಏನು ಕೊಟ್ಟರೆ ತೀರುವುದು? ಭೂಲೋಕವನ್ನು ಕೊಟ್ಟರೂ ಸಾಲದು. ಕೃಷ್ಣನಿಗೆ ನೀನು ಏನೇನು ಕೊಡುವೆನೆಂದು ಹೇಳುತ್ತೀಯೋ ಅದು ನಿನ್ನ ಧರ್ಮ ಬುದ್ಧಿಯಿಂದಲೂ ಅಲ್ಲ, ಅವನ ಪ್ರೀತ್ಯರ್ಥವಾಗಿಯೂ ಅಲ್ಲ; ನೀನು ಮಾಡುವುದೆಲ್ಲವೂ ಠಕ್ಕು, ಹೇಳುವುದೆಲ್ಲವೂ ಠೌಳಿ. ಅವನು ನಿನ್ನ ಬಾಹ್ಯಕಾರ್ಯಗಳಿಗೆ ಬೆರಗಾಗಿ ನಿನ್ನ ಅಂತರಂಗವನ್ನು ಅರಿಯದೆಹೋಗುವನಲ್ಲ. ಪಾಂಡವರು ಐದೇ ಐದು ಗ್ರಾಮಗಳನ್ನು ಕೇಳುತ್ತಾರೆ; ಅಷ್ಟುಮಾತ್ರವನ್ನೂ ನೀನು ಕೊಡೆ, ಸಂಧಿಗೂ ಒಪ್ಪೆ; ಹೊನ್ನು ಕೊಟ್ಟು ಆ ಮಹಾ ಬಾಹುವನ್ನು ಒಲಿಸಿಕೊಳ್ಳಲಿಚ್ಛಯಿಸುತ್ತೀಯೆ; ಕೃಷ್ಣನಿಗೂ ಪಾಂಡವರಿಗೂ ಆಗದಂತೆ ಮಾಡಬೇಕೆಂದು ಈ ಹರುವನ್ನೆತ್ತಿದ್ದೀಯೆ. ನಾನು ಕೃಷ್ಣನ ಮಾಹಾತ್ಮ್ಯವನ್ನೂ ಬಲ್ಲೆನು, ಅರ್ಜುನನಿಗೆ ಅವನಲ್ಲಿರುವ ದೃಢ ಭಕ್ತಿಯನ್ನೂ ಬಲ್ಲೆನು, ಕೃಷ್ಣನು ಅರ್ಘ್ಯಪಾದ್ಯಗಳನ್ನು ಬಿಟ್ಟು ಒಂದು ತೃಣವನ್ನೂ ಅಪೇಕ್ಷಿಸನು. ಅವನಿಷ್ಟಪ್ರಕಾರವಾಗಿ ಆತಿಥ್ಯವನ್ನು ಮಾಡು. ಕೃಷ್ಣನು ನಿಮ್ಮಿಬ್ಬರ ಹಿತವನ್ನೂ ಕೋರಿ ಸಂಧಿಮಾಡಲೆಳಸಿ ಬಂದಿರುವನು. ಅವನ ಇಷ್ಟದಂತೆ ನಡೆ" ಎಂದನು.

ಅದಕ್ಕೆ ದುರ್ಯೋಧನನು, ಕೃಷ್ಣನನ್ನು ಕುರಿತು ವಿದುರನು ಹೇಳಿದುದೆಲ್ಲವೂ ದಿಟವೆಂದೊಪ್ಪಿಯೂ—"ಕಾಲದೇಶವನ್ನು ನೋಡದಾಗಿ ನಾವು ಮೊದಲು ಎಣಿಸಿದಂತೆ ಕೃಷ್ಣನಿಗೆ ಸತ್ಕಾರವನ್ನು ಮಾಡ

ತಕ್ಕುದಲ್ಲ. ನಾವು ಈಗ ಏನು ಮಾಡಿದರೂ ಅಂಜಿ ಮಾಡಿದಂತಾಗುವುದು. ಬುದ್ಧಿವಂತನಾದ ಕ್ಷತ್ರಿಯನು ಅವಮಾನಕರವಾದ ಕಾರ್ಯವನ್ನು ಮಾಡಬಾರದು. ಕೃಷ್ಣನು ಮೂರು ಲೋಕಗಳಲ್ಲಿಯೂ ಪೂಜ್ಯತಮನೆಂಬುದನ್ನು ನಾನು ಬಲ್ಲೆನು. ಆದರೆ ಯುದ್ಧವನ್ನು ನಿಶ್ಚಯಿಸಿರುವುದರಿಂದ ಇದು ಅತಿಥಿ ಸತ್ಕಾರಕ್ಕೆ ಸಮಯವಲ್ಲ '' ಎಂದು ಕೃಷ್ಣನಿಗೆ ಕಾಣಿಕೆಗಳಾವುದನ್ನೂ ಕೊಡಕೂಡದೆಂದು ಹೇಳಿದನು.

ಆ ಮಾತನ್ನು ಕೇಳಿ ಕುರು ಪಿತಾಮಹ ಭೀಷ್ಮನು—''ನೀವು ಸತ್ಕರಿಸಿರಿ, ಸತ್ಕರಿಸದೆ ಹೋಗಿರಿ, ಜನಾರ್ದನನು ಕೋಪಿಸಿಕೊಳ್ಳನು. ಅವನು ಯಾವ ಕಾರ್ಯವನ್ನು ಮಾಡಬೇಕೆಂದು ಮನಸ್ಸು ಮಾಡುವನೋ ಯಾರೂ ಯಾವ ಬಗೆಯಿಂದಲೂ ಆ ಕಾರ್ಯವನ್ನು ಆಗದಂತೆ ಮಾಡಲಾರರು. ವಾಸುದೇವನ ಮೂಲಕವಾಗಿ ಪಾಂಡವರ ಸಂಗಡ ಸಂಧಿಯನ್ನು ಮಾಡಿಕೊ. ಆ ಧರ್ಮಾತ್ಮನು ಧರ್ಮಾರ್ಥಗಳೆರಡಕ್ಕೂ ಅನುಕೂಲವಾದುದನ್ನೇ ಹೇಳುವನು. ನೀನೂ ನಿನ್ನ ಬಾಂಧವರೂ ಕೂಡಿ ಅವನಿಗೆ ಪ್ರಿಯವಾದುದೇ ಆಗಲಿ ಎಂದು ಹೇಳಿರಿ '' ಎಂದನು.

ದುರ್ಯೋಧನನು—''ಪಿತಾಮಹನೇ ! ರಾಜ್ಯವನ್ನು ಹಸಿಗೆ ಮಾಡಿಕೊಂಡು ಪಾಂಡವರ ಸಂಗಡ ಅನುವಾಗಿರೆಂದು ನೀನು ಹೇಳುವ ಪಕ್ಷಕ್ಕೆ ನನ್ನ ಪ್ರಾಣವಿರುವವರೆಗೂ ಆ ಕೆಲಸವು ನನ್ನಿಂದಾಗದು. ಪಾಂಡವರನ್ನು ಹಿಂದಿಟ್ಟುಕೊಂಡಿರುವ ಕೃಷ್ಣನನ್ನು ಸೆರೆಯಲ್ಲಿಟ್ಟರೆ ಪಾಂಡವರೊಬ್ಬರೇ ಅಲ್ಲ ಪೃಥ್ವಿಯೇ ನನ್ನ ಅಧೀನವಾಗುವುದು. ಇದಕ್ಕೆ ಹದನೇನು ? ಆಲೋಚಿಸಿ ಹೇಳು '' ಎಂದನು.

ಕೃಷ್ಣನನ್ನು ಸೆರೆಯಲ್ಲಿಡುವೆನೆಂದು ದುರ್ಯೋಧನನು ಆಡಿದ ಮಾತನ್ನು ಕೇಳಿ ಧೃತರಾಷ್ಟ್ರನು—''ಪ್ರಜಾಪಾಲಕನೇ! ಇನ್ನು ಇಂತಹ ಮಾತನ್ನಾಡಬೇಡ. ಕೃಷ್ಣನು ದೂತನಾಗಿ ಬರುವನು. ಅವನು ನಮಗೆ ಅಪಕಾರವನ್ನು ಮಾಡಿದವನಲ್ಲ. ಅವನನ್ನು ಸೆರೆಯಲ್ಲಿಡುವುದು ಯಾವ ನ್ಯಾಯ ? '' ಎಂದನು.

ಅದನ್ನು ಕೇಳಿ ಭೀಷ್ಮನು—''ಧೃತರಾಷ್ಟ್ರ ! ನಿನ್ನೀ ಮಗನು ಬಹು ಮೂರ್ಖನು ; ಅವನಿಗೆ ಕೇಡುಗಾಲ ಬಂದಿದೆ. ಅವನ ಹಿತರು

ಎಷ್ಟು ಬಗೆಯಲ್ಲಿ ಬೇಡಿದರೂ ಅವನು ಕೆಟ್ಟ ಬುದ್ಧಿಯನ್ನು ಬಿಡನು. ಪುತ್ರರ ಮಾತನ್ನು ಕಳಿದು ನೀನೂ ಕೂಡ ಅವನ ದಾರಿಯನ್ನೇ ಹಿಡಿಯು ತ್ತಿದ್ದೀಯಲ್ಲ! ಪಾಪಿಯೂ ಘಾತುಕನೂ ಆದ ಈ ನಿನ್ನ ಮಗನ ಕೆಟ್ಟ ಮಾತನ್ನು ಕಿವಿಯಿಂದ ಕೇಳಲಾರೆನಲ್ಲ'' ಎಂದು ಹೇಳಿ, ಹೇಸಿ ಆ ಸ್ಥಳವನ್ನು ಬಿಟ್ಟು ಹೊರಟುಹೋದನು.

ಇತ್ತ, ವೃಕಸ್ಥಲದಲ್ಲಿ ತಂಗಿದ್ದ ಶ್ರೀಕೃಷ್ಣನು ಬೆಳಗಾಗುತ್ತಲೆ ಎದ್ದು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಹಸ್ತಿನಾಪುರಕ್ಕೆ ಪಯಣ ಮಾಡಿದನು. ದುರ್ಯೋಧನನ ಹೊರತು ಭೀಷ್ಮ ದ್ರೋಣ ಕೃಪಾದಿಗಳೂ ಪುರವಾಸಿಗಳೂ ಕೃಷ್ಣನನ್ನು ಇದಿರ್ಗೊಂಡು ಕೃಷ್ಣನ ಸಂಮಾನಾರ್ಥ ವಾಗಿ ಅಲಂಕರಿಸಿದ್ದ ನಗರಕ್ಕೆ ಬಿಜಯಮಾಡಿಸಿದರು. ಅಲ್ಲಿ ಕೃಷ್ಣನು ಧೃತರಾಷ್ಟ್ರನ ಅರಮನೆಗೆ ಹೋಗಿ ರಾಜಪುರೋಹಿತರಿಂದ ಅರ್ಘ್ಯ ಪಾದ್ಯಾದಿಗಳನ್ನು ಕೈಕೊಂಡು ಕುಶಲ ಪ್ರಶ್ನಾದಿಗಳನ್ನು ಕೇಳುತ್ತ ಸ್ವಲ್ಪ ಕಾಲವಿದ್ದು, ಕುರುಸಭೆಯಲ್ಲಿದ್ದವರೆಲ್ಲರನ್ನೂ ಯಥಾ ನ್ಯಾಯ ವಾಗಿ ಆದರಿಸಿ, ವಿದುರನ ಮನೆಗೆ ಹೊರಟನು; ಅಲ್ಲಿ ವಿದುರನು ಮಾಡಿದ ಉಪಚಾರಗಳನ್ನು ಕೈಕೊಂಡು ಕುಂತಿಯ ಬಳಿಗೆ ಹೋಗಿ ಯುಧಿಷ್ಠಿರಾದಿಗಳ ಕ್ಷೇಮಸಮಾಚಾರವನ್ನು ಆಕೆಗೆ ತಿಳಿಸಿ ಕುಂತಿಯು ಹೇಳಿಕೊಂಡ ದುಃಖಗಳನ್ನು ಆಲಿಸಿ ಆಕೆಯನ್ನು ಸಮಾಧಾನಗೊಳಿಸಿ ದುರ್ಯೋಧನನ ಮನೆಗೆ ಹೋದನು. ದುರ್ಯೋಧನನು ಶ್ರೀಕೃಷ್ಣನಿಗೆ ಅರ್ಘ್ಯಪಾದ್ಯಗಳನ್ನು ಕೊಟ್ಟು ಭೋಜನಕ್ಕೆ ಹೇಳಿದನು.

ಕೃಷ್ಣ.—'' ಭಾರತನೇ! ದೂತರು ತಾವು ಬಂದ ಕಾರ್ಯವು ನೆರವೇರಿದ ಮೇಲೆಯೇ ಭೋಜನಾದಿ ಸತ್ಕಾರಗಳನ್ನು ಕೈಕೊಳ್ಳುವುದು ಶಿಷ್ಟಾಚಾರ. ನಾನು ಬಂದ ಕಾರ್ಯವಾಗಲಿ, ಆಮೇಲೆ ನೀನು ನನ್ನನ್ನೂ ಅಮಾತ್ಯರನ್ನೂ ಸತ್ಕರಿಸು.''

ದುರ್ಯೋಧನ.—'' ನಮಗೂ ನಿಮಗೂ ವಿಗ್ರಹವಿಲ್ಲ, ವೈರವಿಲ್ಲ; ನನ್ನ ಮನೆಯಲ್ಲಿ ನೀವು ಏತಕ್ಕೆ ಭೋಜನ ಮಾಡಕೂಡದು ?''

ಕೃಷ್ಣನು—'' ನಾನು ಕಾಮದಿಂದಾಗಲಿ, ಕ್ರೋಧದಿಂದಾಗಲಿ, ದ್ವೇಷದಿಂದಾಗಲಿ, ಲೋಭದಿಂದಾಗಲಿ, ಧರ್ಮವನ್ನು ಬಿಡೆನು. ಪ್ರೀತಿ

ಯಿಂದಿಟ್ಟನ್ನವನ್ನು ಉಣಬಹುದು ; ಆಪತ್ಕಾಲದಲ್ಲಿ ಪರಾನ್ನವನ್ನುಣ ಬಹುದು. ನಮ್ಮಲ್ಲಿ ನಿನಗೆ ಪ್ರೀತಿಯೂ ಇಲ್ಲ, ನಾವು ಆಪನ್ನರೂ ಅಲ್ಲ. ಹಗೆಯಿಟ್ಟನ್ನವನ್ನು ಉಣಲೂ ಬಾರದು, ಹಗೆಗೆ ಅನ್ನವನ್ನಿಡಲೂ ಬಾರದು. ಪಾಂಡವರು ನನಗೆ ಪ್ರಾಣವಾಗಿರುವರು. ಅವರನ್ನು ನೀನು ನಿಷ್ಕಾರಣವಾಗಿ ದ್ವೇಷಿಸುತ್ತಿದ್ದೀಯೆ. ಅವರು ನಿನ್ನ ಭ್ರಾತೃಗಳು, ಗುಣವಂತರು. ಅವರನ್ನು ಪ್ರೀತಿಸುವವರು ನನ್ನನ್ನು ಪ್ರೀತಿಸುವರು ; ಅವರನ್ನು ದ್ವೇಷಿಸುವವರು ನನ್ನನ್ನು ದ್ವೇಷಿಸುವರು. ಕಾಮ ಕ್ರೋಧಕ್ಕೆ ವಶರಾಗಿ ಗುಣವಂತರನ್ನು ದ್ವೇಷಿಸುವವರು ಪುರುಷಾಧಮರು. ಸಜ್ಜನರಾದ ಜ್ಞಾತಿಗಳನ್ನು ಮೋಹದಿಂದಾಗಲಿ ಲೋಭದಿಂದಾಗಲಿ ದ್ವೇಷಿಸುವವನ ಸಿರಿಯು ಬಹು ಕಾಲ ಉಳಿಯದು. ನಿನ್ನ ದೌಷ್ಟ್ಯದಿಂದ ಕಲುಷಿತವಾದ ಅನ್ನವು ತಿನ್ನತಕ್ಕುದಲ್ಲ " ಎಂದು ನಿರ್ದಾಕ್ಷಿಣ್ಯವಾಗಿ ಸ್ಪಷ್ಟೋಕ್ತಿಯನ್ನಾಡಿ ಅವನ ಸತ್ಕಾರವನ್ನು ವರ್ಜಿಸಿ ವಿದುರನ ಮನೆಗೆ ಹೋಗಿ ಹಸ್ತಿನಾಪುರದಲ್ಲಿ ತಾನು ಇದ್ದಷ್ಟು ಕಾಲ ಅವನು ಭಕ್ತಿಯಿಂದ ನಿವೇದನೆ ಮಾಡಿದ ಪವಿತ್ರವಾದ ಅನ್ನ ಪಾನಾದಿಗಳನ್ನು ಸ್ವೀಕರಿಸಿ ಸುಪ್ರೀತನಾಗುತ್ತಿದ್ದನು.

ಆ ದಿವಸ ರಾತ್ರಿಯೆಲ್ಲವೂ ವಿದುರನಿಗೂ ಕೃಷ್ಣನಿಗೂ ದೂತ ಕಾರ್ಯವನ್ನು ಕುರಿತು ಸಂಭಾಷಣೆ ನಡೆಯಿತು. ವಿದುರನು— "ಕೇಶವ! ನಿನ್ನ ಆಗಮನವು ಉಚಿತವಾದುದೆಂದು ಹೇಳಲಾರೆನು. ದುರ್ಯೋಧನನು ದುಷ್ಟನು, ಹಿರಿಯರ ಮಾತನ್ನು ಕೇಳುವನಲ್ಲ; ಭೀಷ್ಮದ್ರೋಣ ಕೃಪ ಕರ್ಣಾದಿಗಳ ಮುಂದೆ ಯಾರೂ ಇಲ್ಲವೆಂದು ನಂಬಿ ಅವರಿಂದ ತನ್ನ ಇಷ್ಟಾರ್ಥವು ಸಿದ್ಧಿಸುವುದೆಂದು ನಚ್ಚಿ ಯಾರನ್ನೂ ಲಕ್ಷ್ಯಮಾಡದಿರುವನು. ಪಾಂಡವ ಕೌರವರಿಬ್ಬರಿಗೂ ಸ್ನೇಹಭಾವ ವನ್ನೂ ಶಾಂತಿಯನ್ನೂ ಉಂಟುಮಾಡುವ ನಲುವಾಗಿ ನೀನು ಬಂದಿದ್ದೀಯೆ. ಆದರೆ ಧೃತರಾಷ್ಟ್ರನ ಮಕ್ಕಳು ಪಾಂಡವರಿಗೆ ಅವರ ಪಾಲಿನ ರಾಜ್ಯವನ್ನು ಕೊಡಲೊಪ್ಪರು. ನಿನ್ನ ಮಾತು ನಿರರ್ಥಕ ವಾಗುವುದು. ದುರ್ಯೋಧನನು ಸಮಸ್ತ ಪೃಥ್ವೀಸಾಮ್ರಾಜ್ಯವನ್ನು ಬಯಸುತ್ತಿರುವನು. ನಿನ್ನ ವೈರಿಗಳೆಲ್ಲರೂ ಅವನ ಪಕ್ಷವನ್ನು ವಹಿಸಿರು

ವರು. ಆ ದುಷ್ಟರ ನಡುವೆ ನೀನು ಮಧ್ಯಸ್ಥನಾಗಿ ಹೋಗುವುದು ನನಗಿಷ್ಟವಿಲ್ಲ. ನಿನ್ನ ಪ್ರಭಾವ ಪೌರುಷ ಬುದ್ಧಿಗಳನ್ನು ನಾನು ಬಲ್ಲೆನು. ಆದರೂ ನಿನ್ನಲ್ಲಿ ನನಗಿರುವ ಭಕ್ತಿ ವಿಶ್ವಾಸದಿಂದ ಈ ಮಾತುಗಳನ್ನು ಹೇಳಿದೆನು '' ಎಂದನು.

ವಿದುರನ ಮಾತನ್ನು ಕೇಳಿ ಕೃಷ್ಣನು ಸವಿನುಡಿಗಳಿಂದಿಂತೆಂದನು:—'' ವಿದುರ! ನೀನು ಮಹಾ ಪ್ರಾಜ್ಞನು, ವಿಚಕ್ಷಣನು; ಗುಣಾಢ್ಯನಾದ ನೀನು ನನ್ನಂತಹವನಿಗೆ ಹೇಳತಕ್ಕುದನ್ನು ಬಿಡದೆ ಹೇಳಿದೆ. ನೀನು ಹೇಳುವುದೆಲ್ಲವೂ ಒಪ್ಪತಕ್ಕುದಾದರೂ, ನಾನು ಬಂದಿರುವುದಕ್ಕೆ ಕಾರಣವನ್ನು ಹೇಳುವೆನು, ಕೇಳು. ದುರ್ಯೋಧನನ ದೌರಾತ್ಮ್ಯವನ್ನೂ ಅವನ ಪಕ್ಷವನ್ನು ವಹಿಸಿರುವ ಕ್ಷತ್ರಿಯರ ವೈರವನ್ನೂ ತಿಳಿದೇ ನಾನು ಬಂದಿರುವೆನು. ಈ ಆಪತ್ಕಾಲದಲ್ಲಿ ಪೃಥ್ವಿಯನ್ನು ಮೃತ್ಯುಪಾಶದಿಂದ ಬಿಡಿಸುವವನಿಗೆ ಪುಣ್ಯ ಬರುವುದು. ಯಾವನು ಧರ್ಮಕಾರ್ಯವನ್ನು ಯಥಾಶಕ್ತಿ ಮಾಡಲು ಯತ್ನಿಸುವನೋ ಅವನಿಗೆ ಕಾರ್ಯವು ಕೈಗೂಡದಿದ್ದರೂ ಪುಣ್ಯವು ಜಾರದಿರದು. ಕುರು ಪಾಂಡವರು ರಣದಲ್ಲಿ ಹತರಾಗುವರೆಂಬ ಭಯದಿಂದ ಸಂಧಿಮಾಡಿಸುವುದಕ್ಕಾಗಿ ಪ್ರಯತ್ನ ಮಾಡುವೆನು. ಹೆಡತಲೆಯ ಮೃತ್ಯುರೂಪವಾಗಿರುವ ಈ ಘೋರ ವಿಪತ್ತಿಗೆ ಕೌರವರೇ ಮೂಲ. ಕರ್ಣ ದುರ್ಯೋಧನರಿಂದಲೇ ಇದು ಹುಟ್ಟಿರುವುದು. ಉಳಿದವರೆಲ್ಲರೂ ಅವರಾಡಿದಂತಾಡುವರು. ಕೆಡುತ್ತಿರುವವರನ್ನು ಕಂಡು ಮಿತ್ರನಾದವನು ಯಥಾಶಕ್ತಿ ಬುದ್ಧಿ ಹೇಳಿ ಅವರನ್ನು ಸಲಹಲು ಯತ್ನಮಾಡದಿದ್ದರೆ ಅವನು ಮಿತ್ರನಲ್ಲ, ಘಾತುಕನು. ಅಂತಹವರನ್ನು ಜುಟ್ಟನ್ನು ಹಿಡಿದೆಳೆದಾದರೂ ಆ ಕಾರ್ಯದಿಂದ ಹಿಮ್ಮೆಟ್ಟಿಸಬೇಕು. ನಾನೇನೋ ಧೃತರಾಷ್ಟ್ರನ ಮಕ್ಕಳ ಹಿತವನ್ನೂ ಹಾಗೆಯೇ ಪಾಂಡವರ ಹಿತವನ್ನೂ, ಅಷ್ಟೇ ಅಲ್ಲ, ಲೋಕದಲ್ಲಿರುವ ಕ್ಷತ್ರಿಯರೆಲ್ಲರ ಹಿತವನ್ನೂ ಸಾಧಿಸಲು ನಿರ್ವಂಚನೆಯಾಗಿ ಯತ್ನಿಸುವೆನು. ಹೀಗೆ ಪರಹಿತಕ್ಕಾಗಿ ಪ್ರಯಾಸಪಡುತ್ತಿರುವ ನನ್ನಲ್ಲಿ ದುರ್ಯೋಧನನು ಸಂಶಯಪಟ್ಟರೆ ಅದಕ್ಕೆ ನಾನು ಹೊಣೆಯಲ್ಲ. ನಾನು ನನ್ನ ಕರ್ತವ್ಯವನ್ನು ಮಾಡಿ ಸಂತುಷ್ಟನಾಗುವೆನು. ಅಲ್ಲದೆ,

ಆದರಿಂದ ನಾನು ಮಿತ್ರ ಋಣವನ್ನು ತೀರಿಸಿದಂತೆಯೂ ಆಗುವುದು. ನಾನು ಬಂದಿರುವುದಕ್ಕೆ ಇನ್ನೊಂದು ನಿಮಿತ್ತವೂ ಉಂಟು. ಜ್ಞಾತಿಗಳಾದ ಪಾಂಡವ ಕೌರವರು ಕಾದಾಡುತ್ತಿರುವುದನ್ನು ನೋಡಿ ನೋಡಿ ನನ್ನ ಕೈಯಲ್ಲಾದರೂ ಕೂಡ ನಾನು ಅವರ ಹಗೆಯನ್ನು ಹರಿಸದೆ ಹೋದೆನೆಂದು ಮುಂದೆ ಮೂಢರು ನನ್ನನ್ನು ದೂರುವುದಕ್ಕೆ ಅವಕಾಶವಿರದು. ನಾನೆಂತೂ ಇಬ್ಬರ ಹಿತವನ್ನೂ ಕೋರಿ ಬಂದಿರುವೆನು. ಇಷ್ಟರ ಮೇಲೆ ದುರ್ಯೋಧನನು ಧರ್ಮಾರ್ಥಯುಕ್ತವಾದ ನನ್ನ ಮಾತನ್ನು ತಿರಸ್ಕರಿಸಿದರೆ ಅವನ ಹಣೆಯ ಬರೆಹವಿದ್ದಂತಾಗಲಿ.''

ಈ ವಿಧವಾಗಿ ಕೃಷ್ಣನೂ ವಿದುರನೂ ರಾತ್ರಿಯು ಕಳೆದುಹೋದುದನ್ನೇ ಕಾಣದೆ ಸಂಭಾಷಣೆಯಲ್ಲಿದ್ದರು. ಪ್ರಭಾತವಾಯಿತು. ಸೂತಮಾಗಧರು ಶಂಖ ದುಂದುಭಿ ವಾದ್ಯವನ್ನು ಮಾಡಿದರು. ಕೃಷ್ಣನು ಎದ್ದು ಸ್ನಾನ ಸಂಧ್ಯಾದಿ ಪ್ರಾತಃಕೃತ್ಯಗಳನ್ನು ಮಾಡುತ್ತಿರುವ ವೇಳೆಗೆ ಶಕುನಿ ದುರ್ಯೋಧನರು ಬಂದು—''ಧೃತರಾಷ್ಟ್ರನು ಭೀಷ್ಮಪ್ರಮುಖ ಕುರುರಾಜರನ್ನೂ ಸಕಲ ಪಾರ್ಥಿವರನ್ನೂ ಕೂಡಿ ಓಲಗದಲ್ಲಿರುವನು; ಎಲ್ಲರೂ ತಮ್ಮ ಆಗಮನವನ್ನು ಪ್ರಾರ್ಥಿಸುವರು'' ಎಂದರು.

ಶ್ರೀಕೃಷ್ಣನು ಅವರಿಬ್ಬರನ್ನೂ ಆದರಿಸಿ, ನಿತ್ಯಕರ್ಮಗಳನ್ನು ತೀರಿಸಿಕೊಂಡು ತರುವಾಯ ಬ್ರಾಹ್ಮಣರಿಗೆ ಹಿರಣ್ಯ, ವಸ್ತ್ರ, ಗೋವು, ಅಶ್ವ—ಇವನ್ನು ದಾನಮಾಡಿ, ಅಗ್ನಿಗೂ ಬ್ರಾಹ್ಮಣರಿಗೂ ಪ್ರದಕ್ಷಿಣವನ್ನು ಮಾಡಿ ರಥವನ್ನೇರಿ ಸಭೆಗೆ ಹೊರಟನು. ವಿದುರನೂ ತನ್ನ ರಥದಲ್ಲಿ ಕುಳಿತು ಕೃಷ್ಣನ ಹಿಂದೆಯೇ ಹೊರಟನು. ಕೃಷ್ಣನು ಬರುತ್ತಲೆ, ಧೃತರಾಷ್ಟ್ರ ಭೀಷ್ಮ ದ್ರೋಣ ಮೊದಲಾದವರು ಮರ್ಯಾದಾರ್ಥವಾಗಿ ಎದ್ದು ನಿಂತು ಕೃಷ್ಣನು ಭದ್ರಾಸನವನ್ನು ಅಲಂಕರಿಸುತ್ತಲೆ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತು ಮೌನವನ್ನವಲಂಬಿಸಿದರು.

ಆಗ ಕೃಷ್ಣನು ಧೃತರಾಷ್ಟ್ರನನ್ನು ಕುರಿತು ಸಭಿಕರೆಲ್ಲರಿಗೂ ಕೇಳಿಸುವ ಹಾಗೆ ಮೇಘ ಗಂಭೀರ ಸ್ವರದಿಂದ ಇಂತೆಂದನು:—

"ಭಾರತನೇ! ವೀರರು ನಷ್ಟವಾಗದೆಯೇ ಕೌರವ ಪಾಂಡವರಿಗೆ ಸಂಧಿ ಯಾಗಮಾಡೆಂದು ನಿನ್ನನ್ನು ಯಾಚಿಸುವುದಕ್ಕೆ ನಾನು ಬಂದಿರುವೆನು. ಇದಕ್ಕಿಂತ ಲೇಸಾದ ಬೇರೆ ಯಾವ ಮಾತನ್ನೂ ನಾನು ನಿನಗೆ ಹೇಳ ಲಾರೆನು. ನಿನಗೆ ಸಕಲವೂ ತಿಳಿದೇ ಇದೆ. ರಾಜವಂಶಗಳೊಳಗೆ ನಿಮ್ಮ ವಂಶವೇ ಶ್ರೇಷ್ಠವಾದುದು. ಈ ವಂಶಜರು ವಿದ್ಯಾವಿನಯ ಸಂಪನ್ನರು, ಸತ್ಯವಂತರು, ಕೃಪಾಳುಗಳು, ಕ್ಷಮಾಶೀಲರು, ನಿರ್ವಂಚಕರು— ಇತ್ಯಾದಿ ಗುಣಸಂಪನ್ನರೆಂದು ಹೆಸರುಗೊಂಡಿರುವರು ; ಮೇಲೂ, ಲೋಕದಲ್ಲಿ ನರ ಹಿಂಸಕರಲ್ಲವೆಂದು ಖ್ಯಾತಿಯನ್ನು ಸಂಪಾದಿಸಿರುವರು. ಇಂತಹ ಘನವಾದ ಕುಲಕ್ಕೆ ಕುಂದು ಬರುವ ಹಾಗೆ ನಿನ್ನವರು ನಡೆಯ ಬಹುದೆ? ಅದರೊಳಗೂ ನೀನು ಹಾಗೆ ನಡೆಯಬಹುದೆ? ಕೌರವ ವರ್ಯನೇ! ದುರ್ಯೋಧನಾದಿ ನಿನ್ನ ಮಕ್ಕಳು ಧರ್ಮಾರ್ಥಗಳನ್ನು ಬತ್ತರಿಸಿ ಮನಸ್ಸು ಬಂದಂತೆ ಹೆರರನ್ನು ದುಃಖಪಡಿಸುತ್ತಿರುವರು ; ಲೋಭದಿಂದ ಬುದ್ಧಿಗೆಟ್ಟು ಶಿಷ್ಟಾಚಾರವನ್ನು ಬಿಟ್ಟು, ಮರ್ಯಾದೆ ಮೀರಿ, ತಮ್ಮ ಬಂಧುಗಳಿಗೆ ಅನ್ಯಾಯವನ್ನು ಮಾಡುತ್ತಿರುವರು. ಇದರಿಂದುಂಟಾ ಗುವ ಘೋರ ವಿಪತ್ತಿಗೆ ಕೌರವರೇ ಕಾರಣ. ನೀನು ಉಪೇಕ್ಷೆ ಮಾಡಿ ದರೆ, ಲೋಕವೇ ನಾಶವಾಗುವುದು ; ನೀನು ಮನಸ್ಸು ಮಾಡಿದರೆ ಆ ವಿಪತ್ತನ್ನು ತೊಲಗಿಸಬಹುದು. ಭರತ ಶ್ರೇಷ್ಠನೇ! ಆ ಅಮಂಗಳವನ್ನು ನಿವಾರಿಸುವುದು ನಮ್ಮಿಬ್ಬರ ಕೈಯಲ್ಲಿರುವುದು. ನೀನು ನಿನ್ನ ಮಕ್ಕಳನ್ನು ಸರಿಮಾಡು, ನಾನು ಪಾಂಡವರನ್ನು ಸರಿಮಾಡುವೆನು. ನಿನ್ನಾಜ್ಞೆಯನ್ನು ಪಾಲಿಸುವುದು ನಿನ್ನ ಮಕ್ಕಳ ಮತ್ತು ಅವರ ಸಂಗಡಿಗರ ಕರ್ತವ್ಯ. ಅವರಿಗೆ ಅದರಿಂದ ಕ್ಷೇಮವುಂಟು. ಪಾಂಡವರನ್ನು ಸಹಾಯರನ್ನಾಗಿ ಮಾಡಿಕೊ. ನೀನು ಎಷ್ಟು ಪ್ರಯಾಸಪಟ್ಟರೂ ನಿನಗೆ ಅವರಿಗಿಂತ ಆಪ್ತರು ದೊರೆಯರು. ಅವರ ಬೆಂಬಲವು ನಿನಗಿದ್ದಲ್ಲಿ ನೀನು ಲೋಕೇಶ್ವರನಾಗ ಬಹುದು, ನಿನಗೆ ವೈರಿಗಳೇ ಇರರು. ಯುದ್ಧವಾದಲ್ಲಿ ಸರ್ವವೂ ಹಾಳಾ ಗುವುದು. ರಾಜನೇ! ಇತ್ತಂಡವೂ ನಾಶವಾದರೆ, ನೀನು ಯಾವ ಧರ್ಮವನ್ನು ಸಾಧಿಸಿದಂತಾಗುವುದು? ಪಾಂಡವರು ಮಡಿಯಲಿ, ನಿನ್ನ ಮಕ್ಕಳೇ ಮಡಿಯಲಿ, ಅದರಲ್ಲಿ ನಿನಗೇನು ಸುಖ? ಹೇಳು. ಉಭಯ

ಪಕ್ಷದವರೂ ಶೂರರೇ, ಉಭಯ ಪಕ್ಷದವರೂ ಕಾಳೆಗಕ್ಕೆ ಸೊಂಟಕಟ್ಟಿರುವರು. ಆದರೆ ಯುದ್ಧಾಂತದಲ್ಲಿ ಪಾಂಡವರೆಲ್ಲರನ್ನೂ ನೋಡಬೇಕೆಂದರೆ ನೀನು ನೋಡಲಾರೆ, ಕೌರವರೆಲ್ಲರನ್ನೂ ನೋಡಬೇಕೆಂದರೂ ನೋಡಲಾರೆ. ಈ ಮಹತ್ತರವಾದ ಭಯದಿಂದ ಎಲ್ಲರನ್ನೂ ರಕ್ಷಿಸು. ಪೃಥ್ವಿಯ ರಾಜರೆಲ್ಲರೂ ಕೂಡಿರುವರು. ಕೋಪಾವಿಷ್ಟರಾಗಿ ಇವರು ಪ್ರಜೆಗಳೆಲ್ಲರನ್ನೂ ನಿರ್ಮೂಲ ಮಾಡಿಬಿಡುವರು. ಪ್ರಜೆಗಳನ್ನು ನಾಶಗೊಳಿಸಬೇಡ, ಆರ್ಯರೂ ಸತ್ಕುಲ ಪ್ರಸೂತರೂ ಗುಣಾಢ್ಯರೂ ಆದ ಈ ರಾಜರ ಮಂಡಲಿಯನ್ನು ಈ ಮಹಾಭಯದಿಂದ ರಕ್ಷಿಸು. ಪಾಂಡವರಲ್ಲಿ ನಿನಗಿದ್ದ ಪ್ರೀತಿಯನ್ನು ಮತ್ತೆ ಇಡು. ತಂದೆಯಿಲ್ಲದ ಮಕ್ಕಳನ್ನು ನೀನು ಕೈಹಿಡಿದು ಬೆಳೆಯಿಸಿದೆ. ಈಗಲೂ ಅವರನ್ನು ನಿನ್ನ ಮಕ್ಕಳಂತೆಯೇ ಸಲಹು. ಅವರನ್ನು ರಕ್ಷಿಸುವುದು ನಿನ್ನ ಭಾರ; ಅದರೊಳಗೂ ಈ ಸಂಕಟ ಕಾಲದಲ್ಲಿ ಅವರನ್ನು ರಕ್ಷಿಸುವುದು ನಿನ್ನ ಕರ್ತವ್ಯ. ಪಾಂಡವರು ಅಭಿವಾದನ ಪೂರ್ವಕವಾಗಿ—'ನಿಮ್ಮ ಆಜ್ಞಾನುಸಾರವಾಗಿ ನಾವೂ ನಮ್ಮ ಪರಿವಾರವೂ ಬಹು ದುಃಖವನ್ನು ಅನುಭವಿಸಿದೆವು, ವನವಾಸ ಮಾಡಿದೆವು, ಅಜ್ಞಾತವಾಸ ಮಾಡಿದೆವು; ನೀವು ಆಡಿದ ಮಾತಿಗೆ ತಪ್ಪುವರಲ್ಲವೆಂದು ನಂಬಿದೆವು. ಈಗ ನಮ್ಮ ರಾಜ್ಯಾಂಶವನ್ನು ನಮಗೆ ಕೊಡಿರಿ. ನಿಮ್ಮಲ್ಲಿ ಗುರುತ್ವವಿಟ್ಟು ನಾವು ಬಹು ಕ್ಲೇಶವನ್ನು ಸಹಿಸಿದೆವು. ನೀವೇ ನಮಗೆ ತಾಯಿ ತಂದೆಗಳು; ನಮ್ಮನ್ನು ಧರ್ಮ ಮಾರ್ಗದಲ್ಲಿ ಇರಗೊಡಿಸಿರಿ. ನೀವು ಧರ್ಮ ಮಾರ್ಗದಲ್ಲಿರಿ' ಎಂದು ನಿನಗೆ ಬಿನ್ನೈಸಿ ಈ ನಿನ್ನ ಸಭೆಯಲ್ಲಿ ನೆರೆದಿರುವ ರಾಜರಿಗೂ ಇಂತೆಂದು ಬಿನ್ನೈಸುವಂತೆ ನನಗೆ ಹೇಳಿರುವರು:—'ಸಭಾಸದರು ಧರ್ಮಜ್ಞರಾಗಿದ್ದಲ್ಲಿ ಅನ್ಯಾಯವನ್ನು ಮಾಡಗೊಡಿಸರು. ಎಲ್ಲಿ ಧರ್ಮವು ಅಧರ್ಮದಿಂದ, ಸತ್ಯವು ಅನೃತದಿಂದ ಹತವಾಗುವುದೋ ಅಲ್ಲಿ ಸಭಾಸದರೇ ಹತರಾದರೆಂದು ಅರಿಯಬೇಕು.' ಭರತಶ್ರೇಷ್ಠನೇ! ಪಾಂಡವರು ಆಡುವ ಮಾತು ಸತ್ಯವಾಗಿಯೂ ನ್ಯಾಯವಾಗಿಯೂ ಇರುವುದು. ಜನೇಶ್ವರ! ನೀನು ಅವರಿಗೆ ರಾಜ್ಯವನ್ನು ಕೊಡೆನೆನ್ನಬಹುದೆ? ಇಲ್ಲಿ ನೇರಿರುವ ಮಹೀಪಾಲರು ಹೇಳಲಿ.''

ತರುವಾಯ, ಕೃಷ್ಣನು ಪಾಂಡವರಿಗೆ ಧೃತರಾಷ್ಟ್ರ ದುರ್ಯೋಧನ ಶಕುನಿ ದುಃಶಾಸನರು ಮಾಡಿದ ಪ್ರಾಣಾಂತ ಹಿಂಸೆಯನ್ನೂ ದ್ರೋಹ ವನ್ನೂ, ದ್ರೌಪದಿಗೆ ಮಾಡಿದ ಮಾನಭಂಗವನ್ನೂ, ಪಾಂಡವರು ಅನುಭವಿಸಿದ ಕಷ್ಟಗಳನ್ನೂ, ಇಷ್ಟಾದರೂ ಅವರು ಕ್ಷತ್ರಿಯ ಧರ್ಮ ವನ್ನು ಬಿಡದೆ ಇದ್ದುದನ್ನೂ ಅನುವಾದಮಾಡಿ ಕೊನೆಗೆ—''ನಾನಾ ದರೋ ಅವರ ಶ್ರೇಯಸ್ಸನ್ನು ಇಚ್ಛಯಿಸುವಂತೆಯೇ ನಿಮ್ಮ ಶ್ರೇಯ ಸ್ಸನ್ನೂ ಇಚ್ಛಯಿಸುವೆನು. ನೀನು ಧರ್ಮದ ಮೇಲೆಯೂ ಸುಖದ ಮೇಲೆಯೂ ದೃಷ್ಟಿಯಿಡು. ಅನರ್ಥವನ್ನು ಅರ್ಥವೆಂದೂ, ಅರ್ಥವನ್ನು ಅನರ್ಥವೆಂದೂ ಎಣಿಸಿ, ಪ್ರಜೆಗಳನ್ನು ನಾಶಮಾಡಲೀಯಬೇಡ. ಲೋಭದಿಂದ ಪ್ರೇರಿತರಾಗಿ ನಿನ್ನ ಮಕ್ಕಳು ಅತಿ ದೂರ ಹೋಗಿದ್ದಾರೆ. ಅವರನ್ನು ತಡೆದಿಡು. ಪಾಂಡವರಾದರೋ ನಿನ್ನನ್ನು ಓಲಯಿಸುವುದಕ್ಕೆ ಹೇಗೋ ಹಾಗೆಯೇ ಕಾಳಗಕ್ಕೂ ಸೊಂಟ ಕಟ್ಟಿರುವರು. ಇಷ್ಟರ ಮೇಲೆ ನಿನ್ನ ಇಷ್ಟಬಂದಂತೆ ಮಾಡು'' ಎಂದು ಹೇಳಿದನು.

ಶ್ರೀಕೃಷ್ಣನು ಹೇಳಿದುದೆಲ್ಲವನ್ನೂ ಕೇಳಿ ಧೃತರಾಷ್ಟ್ರನು— ''ಕೃಷ್ಣ! ನೀನು ಹೇಳಿದುದೆಲ್ಲವೂ ಧರ್ಮಸಮ್ಮತವಾಗಿಯೂ ಸ್ವರ್ಗಕ್ಕೆ ಸೋಪಾನವಾಗಿಯೂ ಲೋಕಕ್ಕೆ ಹಿತಕರವಾಗಿಯೂ ಇರುವುದು. ಆದರೆ ದುರಾತ್ಮನಾದ ನನ್ನ ಮಗನು ನನ್ನ ಇಷ್ಟಾನುಸಾರವಾಗಿ ನಡೆಯನು. ನಾನು ಹೇಳಿ ಆಯಿತು; ನಮ್ಮ ಹಿತರಾದ ಭೀಷ್ಮ ದ್ರೋಣ ವಿದುರಾದಿಗಳು ಹೇಳಿ ಆಯಿತು; ಗಾಂಧಾರಿಯೂ ಹೇಳಿ ಆಯಿತು. ಅವನು ಯಾರ ಮಾತನ್ನೂ ಕೇಳುವನಲ್ಲ. ಆ ಪಾಪಿಷ್ಠನಿಗೆ ನೀನೇ ಬುದ್ಧಿ ಹೇಳಿ ನೋಡು'' ಎಂದನು.

ಆಗ ಕೃಷ್ಣನು ದುರ್ಯೋಧನನ್ನು ಸಂಬೋಧಿಸಿ—''ದುರ್ಯೋ ಧನ! ನಾನು ಹೇಳುವುದನ್ನು ಕೇಳು. ನೀನು ಮಹಾ ಪ್ರಾಜ್ಞರ ಕುಲದಲ್ಲಿ ಹುಟ್ಟಿದವನು. ಧರ್ಮದಿಂದ ನಡೆಯುವುದು ನಿನ್ನ ಕೆಲಸ. ದುಷ್ಕುಲದಲ್ಲಿ ಹುಟ್ಟಿ ದುರಾತ್ಮರೂ ನರಹಿಂಸಕರೂ ಲಜ್ಜಾಹೀನರೂ ಆಗಿರುವವರು ನೀನು ಉದ್ದೇಶಿಸಿರುವ ಕಾರ್ಯಗಳನ್ನು ಮಾಡುವರೇ ಹೊರತು ಮತ್ತಾರೂ ಮಾಡರು. ಲೋಕದಲ್ಲಿ ಸಾಧುಗಳ ವರ್ತನವು

ಧರ್ಮಾರ್ಥಗಳೆರಡಕ್ಕೂ ಸಂಗತವಾಗಿರುವುದು. ಅಸಾಧುಗಳ ವರ್ತನವು ಅವುಗಳಿಗೆ ವಿರೋಧವಾಗಿರುವುದು. ನಿನ್ನ ಪ್ರವೃತ್ತಿಯು ಧರ್ಮಾರ್ಥಗಳಿಗೆ ವಿರೋಧವಾದುದು, ಘೋರವಾದುದು, ಕಡೆಗೆ ಅದು ಪ್ರಾಣ ಹಾನಿಗೂ ಕಾರಣವಾಗುವುದು. ನೀನು ಆ ಅನಿಷ್ಟವನ್ನು ನಿವಾರಿಸಿ ನಿನ್ನ ಸೋದರರ, ಮಿತ್ರರ, ಭೃತ್ಯರ ಹಿತವನ್ನು ಕೋರುವವನಾದರೆ ಪ್ರಾಜ್ಞರೂ ಶೂರರೂ ಮಹೋತ್ಸಾಹರೂ ವಿದ್ಯಾವಂತರೂ ಆದ ಪಾಂಡವರ ಸಂಗಡ ಸಂಧಿಮಾಡಿಕೊ. ಅದು ಧೃತರಾಷ್ಟ್ರ ಭೀಷ್ಮ ದ್ರೋಣ ಪ್ರಮುಖರಿಗೂ ಜ್ಞಾತಿಗಳಿಗೂ ಮಿತ್ರರಿಗೂ—ಸರ್ವರಿಗೂ ಅಭಿಮತವಾಗಿರುವುದು, ಸರ್ವರಿಗೂ ಹಿತವಾಗಿಯೂ ಇರುವುದು. ಹೆಚ್ಚು ಮಾತೇಕೆ? ಆ ಸಂಧಿಯು ಜಗತ್ತಿಗೇ ಮಂಗಳಕರವಾಗಿರುವುದು. ನಿನ್ನ ತಾಯಿತಂದೆಗಳ ಆಜ್ಞಾನುಸಾರವಾಗಿ ನಡೆ. ಸುಪುತ್ರರಾದವರು ತಂದೆಯು ಹೇಳಿದುದೇ ತನಗೆ ಹಿತವೆಂದೆಣಿಸುವರು. ಸಂಧಿಮಾಡಿಕೊಳ್ಳುವುದು ನಿಮ್ಮ ತಂದೆಗೆ ಇಷ್ಟ. ನೀನೂ ನಿನ್ನ ಮಂತ್ರಿಗಳೂ ಅದಕ್ಕೆ ಇಷ್ಟಪಡಿರಿ. ಯಾವನು ಸಜ್ಜನರ ಮತವನ್ನು ಅತಿಕ್ರಮಿಸಿ ದುರ್ಜನರ ಮತವನ್ನು ಹಿಡಿದು ನಡೆಯುವನೋ ಅವನು ತಾನೂ ಕೆಟ್ಟು, ತನ್ನ ಪಾಡನ್ನು ನೋಡಿ ತನ್ನ ಮಿತ್ರರೂ ವ್ಯಥೆಪಡುವಂತೆ ಮಾಡುವನು. ಸ್ವಕೀಯರನ್ನು ದ್ವೇಷಿಸಿ ಪರಕೀಯರ ಸಾಹಾಯ್ಯವನ್ನು ಕೋರುವರುಂಟೆ? ನೀನು ನಿನ್ನವರಾದ ಆ ವೀರರಲ್ಲಿ ವಿರೋಧವನ್ನು ಕಟ್ಟಿಕೊಂಡು ಅಪ್ರಯೋಜಕರು, ಅಸಮರ್ಥರು, ಮೂಢರು ಆದ ಅವರಿವರನ್ನು ತ್ರಾಹಿಯೆನ್ನುತ್ತೀಯಲ್ಲ! ನೀನು ಪಾಂಡವರನ್ನು ಚಿಕ್ಕಂದಿನಿಂದ ದುಃಖಪಡಿಸಿದೆ; ಆದರೂ ಆ ಮಹಾತ್ಮರು ನಿನ್ನಲ್ಲಿ ಕ್ರೋಧವಿಡದೆ ಉದಾರ ಭಾವವನ್ನೇ ತೋರಿಸುತ್ತಿರುವರು. ಅವರ ವಿಷಯದಲ್ಲಿ ನೀನೂ ಉದಾರ ಭಾವವನ್ನು ತೋರಿಸಬಾರದೆ? ಅವರು ನಿನ್ನ ಮುಖ್ಯ ಬಂಧುಗಳು. ಅವರ ವಿಷಯದಲ್ಲಿ ನೀನು ಕ್ರೋಧವಶನಾಗಿ ನಡೆಯಬೇಡ. ಧರ್ಮಾರ್ಥ ಕಾಮಗಳನ್ನು ಪಡೆಯುವುದಕ್ಕೆ ಧರ್ಮವೇ ಉಪಾಯವು. ರಾಜಮಂಡಲದಲ್ಲಿ ಹೆಸರುಗೊಂಡಿರುವ ಈ ಸಮೃದ್ಧ ಸಾಮ್ರಾಜ್ಯವನ್ನು ನೀನು ಹೀನೋಪಾಯವಾದ ಅಧರ್ಮ

ದಿಂದ ದಕ್ಕಿಸಿಕೊಳ್ಳುವ ಯತ್ನಮಾಡುತ್ತೀಯೆ. ಯಾವನು ಧರ್ಮ ದಿಂದ ನಡೆಯುವವರನ್ನು ಕಪಟೋಪಾಯದಿಂದ ಕೆಡಿಸಲು ಯತ್ನಿಸುವನೋ ಅವನು ತಾನೇ ಕೆಡುವನು. ಕ್ರೋಧವನ್ನು ಜಯಿಸಿದವನು ಎಂತಹ ನಿಕೃಷ್ಟರಾದರೂ ಅನ್ಯರನ್ನು ಉಪೇಕ್ಷೆ ಮಾಡನು; ಇನ್ನು, ಸ್ವಕೀಯರೂ ಮಹಾತ್ಮರೂ ಆದ ಪಾಂಡವರನ್ನು ನೀನು ಉಪೇಕ್ಷೆಮಾಡಬಹುದೆ? ನಿನಗೆ ದುರ್ಜನ ಸಂಗಕ್ಕಿಂತ ಸಜ್ಜನ ರಾದ ಪಾಂಡವರ ಸಂಗವು ಹಿತಕರವಲ್ಲವೆ? ನೀನು ಅವರನ್ನೊಲಿಸಿ ಕೊಂಡರೆ ನಿನ್ನ ಇಷ್ಟಾರ್ಥಗಳೆಲ್ಲವೂ ಕೈಗೂಡವೆ? ಪಾಂಡವರು ಕಟ್ಟಿದ ರಾಜ್ಯವನ್ನು ಭೋಗಿಸುತ್ತ ಪಾಂಡವರನ್ನು ಉಪೇಕ್ಷಿಸಿ ಹೆರರ ಮರೆಹೊಗುತ್ತೀಯೆ. ನೀನು ದುಃಶಾಸನಾದಿಗಳ ಮೇಲೆ ರಾಜ್ಯ ಭಾರವನ್ನು ಬಿಟ್ಟು ನಿನ್ನ ಪ್ರಭುತ್ವವು ಸುಸ್ಥಿರವಾಗಿರಬೇಕೆಂದು ಕೋರ ಬಹುದೆ? ಜ್ಞಾನದಲ್ಲಿ, ಧರ್ಮಾರ್ಥಗಳಲ್ಲಿ, ವಿಕ್ರಮದಲ್ಲಿ, ದುಃಶಾಸನ ಕರ್ಣ ಶಕುನಿಗಳು ಪಾಂಡವರಿಗೆ ಸರಿಯೆ, ಸಾಟಿಯೆ? ಕಲಿ ಭೀಮನ ಇದಿರಿಗೆ ಅವರು ನಿಲ್ಲಬಲ್ಲರೆ? ಭೀಷ್ಮ ದ್ರೋಣ ಕೃಪಾದಿಗಳಾಗಲಿ, ಈ ಕರ್ಣನಾಗಲಿ, ಅರ್ಜುನನ ಮುಂದೆ ನಿಲ್ಲಬಲ್ಲರೆ? ಅರ್ಜುನನು ಅಸಹಾಯಶೂರನು, ಅಜೇಯನು, ಅದರ ಮೇಲೆ ಅವನಿಗೆ ಬೆಂಬಲವಾಗಿ ನಾನೂ ಇರುವಲ್ಲಿ ಅವನನ್ನು ಯುದ್ಧಕ್ಕೆ ಕರೆಯಬಲ್ಲ ಧೀರನಾರು? ದುರ್ಯೋಧನ! ನಿನ್ನ ಮಕ್ಕಳನ್ನು ನೋಡು, ಸೋದರರನ್ನು ನೋಡು, ಜ್ಞಾತಿಗಳನ್ನೂ ಮಿತ್ರರನ್ನೂ ನೋಡು. ಸ್ವಾರ್ಥಕ್ಕಾಗಿ—ನಿನ್ನೊಬ್ಬನಿ ಗಾಗಿ—ಇವರೆಲ್ಲರನ್ನೂ ಬಲಿಕೊಡಬೇಡ; ಈ ಕೌರವ ಕುಲವನ್ನು ನಾಶ ಮಾಡಿ ಕುಲಘ್ನನೆನಿಸಿಕೊಳ್ಳಬೇಡ; ಕೀರ್ತಿಯನ್ನು ನೀಗಬೇಡ. ನೀನು ಸಂಧಿಗೊಪ್ಪಿದರೆ ಮಹಾರಥರಾದ ಪಾಂಡವರೇ ಸಾಮ್ರಾಜ್ಯದಲ್ಲಿ ನಿನ್ನ ತಂದೆಯನ್ನೂ, ಯೌವರಾಜ್ಯದಲ್ಲಿ ನಿನ್ನನ್ನೂ ಇಡುವರು. ನಿನಗೆ ತನ್ನಿಂದ ತಾನಾಗಿ ಬರುವ ಸಂಪದವನ್ನು ಉಪೇಕ್ಷಿಸಬೇಡ. ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಟ್ಟು ಆ ಮಹದೈಶ್ವರ್ಯವನ್ನು ಸಂಪಾದಿಸು. ಪಾಂಡವರ ಸಂಗಡ ಸ್ನೇಹವನ್ನು ಬೆಳೆಯಿಸಿ ಚಿರಕಾಲ ಸುಖವಾಗಿರು'' ಎಂದು ಬುದ್ಧಿವಾದವನ್ನು ಹೇಳಿದನು.

ಕೃಷ್ಣನ ಮಾತನ್ನು ಕೇಳಿ ಭೀಷ್ಮನು—''ಭರತರ್ಷಭ! ಕೃಷ್ಣನು ಸುಹೃದರಾದ ನೀವುಗಳು ಅನ್ಯೋನ್ಯವಾಗಿರಬೇಕೆಂದು ಹಾರೈಸಿ, ನಿನಗೆ ಹಿತಕರವಾದ ಮಾತುಗಳನ್ನು ಹೇಳಿದನು. ಅಯ್ಯಾ! ಅವನ ಮಾತನ್ನು ಕೇಳು, ಕೇಳದೆಹೋದರೆ ಶ್ರೇಯಸ್ಸಾಗಲಿ ಸುಖವಾಗಲಿ ನಿನಗೆಂದಿಗೂ ಲಭಿಸದು. ಆ ಮಹಾಬಾಹು ಧರ್ಮಾರ್ಥಗಳೆರಡಕ್ಕೂ ಸಾಧನವಾದ ಮಾತನ್ನೇ ಆಡಿರುವನು. ಅದನ್ನು ಕಳೆದು ಪ್ರಜೆಗಳನ್ನು ಅಳಿಸಬೇಡ. ಲೋಕದಲ್ಲಿ ಬೆಳಗುತ್ತಿರುವ ಭಾರತ ಲಕ್ಷ್ಮಿಯನ್ನು ಧೃತರಾಷ್ಟ್ರನು ಜೀವಿಸಿರುವಾಗಲೆ ನಿನ್ನ ದೌರಾತ್ಮ್ಯದಿಂದ ನೀಗಿ ಕೊಳ್ಳುತ್ತೀಯೆ, ಜೋಕೆ! ಭಾರತ ಶ್ರೇಷ್ಠನೇ! ಕೃಷ್ಣನ ಮಾತನ್ನು ನೀನು ದುರಹಂಕಾರದಿಂದ ಅತಿಕ್ರಮಿಸಿದರೆ, ನೀನೂ ನಿನ್ನ ಅಮಾತ್ಯರೂ, ಮಿತ್ರ ಭ್ರಾತೃ ಬಾಂಧವರೂ ಹತರಾಗುವಿರಿ. ಕುಲಗೇಡಿಯೆಂದೆನಿಸಿ ಕೊಳ್ಳಬೇಡ, ತಾಯಿತಂದೆಗಳನ್ನು ಶೋಕಸಾಗರದಲ್ಲಿ ಮುಳುಗಿಸ ಬೇಡ'' ಎಂದು ಹೇಳಿದನು.

ಭೀಷ್ಮನು ಸುಮ್ಮನಾದ ಬಳಿಕ ಆಚಾರ್ಯ ದ್ರೋಣನು ಕೋಪಾ ವಿಷ್ಟನಾಗಿ ನಿಟ್ಟುಸಿರು ಬಿಡುತ್ತ—''ಅಯ್ಯಾ! ಕೇಶವನು ಆಡಿದ ಮಾತು ಧರ್ಮಾರ್ಥಯುಕ್ತವಾದುದು. ಭೀಷ್ಮನ ಮಾತು ಕೂಡ ಹಾಗೆಯೇ ಇರುವುದು. ಅವರು ಬಹುಶ್ರುತರು, ಪ್ರಾಜ್ಞರು, ಕ್ರೋಧವಿಲ್ಲದವರು, ನಿಮ್ಮ ಹಿತಚಿಂತಕರು; ಅವರು ಹೇಳಿದಂತೆ ಮಾಡು. ನಿನ್ನನ್ನು ಈಗ ಯುದ್ಧಕ್ಕೆ ಯಾರು ಪ್ರೋತ್ಸಾಹ ಮಾಡು ತ್ತಿದ್ದಾರೋ ಅವರು ನಿನ್ನ ಹಿತೈಷಿಗಳಲ್ಲ. ಅವರಿಂದ ನಿನ್ನ ಇಷ್ಟಾರ್ಥವು ಕೈಗೂಡದು. ಯಾವ ಸೇನೆಯಲ್ಲಿ ಕೃಷ್ಣನೂ ಅರ್ಜುನನೂ ಇರುವರೊ ಆ ಸೇನೆಯನ್ನು ಜಯಿಸುವುದು ಸಾಧ್ಯವಲ್ಲ. ಭಾರತನೇ! ಅರ್ಜುನನು ಸಾಮಾನ್ಯನಲ್ಲ. ದೇವಕೀ ಪುತ್ರನನ್ನು ದೇವತೆಗಳೂ ಇದಿರಿಸಲಾರರು. ನಿನ್ನ ಹಿತಾರ್ಥವಾಗಿ ಹೇಳಬೇಕಾದುದೆಲ್ಲವನ್ನೂ ಹೇಳಿ ಆಯಿತು. ಇನ್ನು ನಿನ್ನ ಇಷ್ಟಬಂದಂತೆ ಮಾಡಿಕೊ'' ಎಂದು ಕೃಷ್ಣ ಭೀಷ್ಮರ ಮಾತನ್ನು ಸಮರ್ಥಿಸಿ, ಅವರ ಮಾತಿಗೆ ವಿರೋಧವಾಗಿ ನಡೆದರೆ ಆಗುವ ಅನರ್ಥ ವನ್ನು ಸ್ಪಷ್ಟವಾಗಿ ಸೂಚಿಸಿದನು.

ಅನಂತರ, ವಿದುರನು ದುರ್ಯೋಧನನನ್ನು ನೋಡಿ—"ದುರ್ಯೋಧನ! ನಿನ್ನ ಮೇಲೆ ನನಗೆ ಕೋಪವಿಲ್ಲ; ವೃದ್ಧರಾದ ನಿಮ್ಮ ತಾಯಿ ತಂದೆಗಳಿಗಾಗಿ ನಾನು ದುಃಖಪಡುತ್ತೇನೆ. ಅವರು ನಿನ್ನಂತಹ ದುಷ್ಟ ಪುತ್ರನನ್ನು ದಿಕ್ಕನ್ನಾಗಿ ನಂಬಿ, ಮಿತ್ರರಿಲ್ಲದೆ, ಅಮಾತ್ಯರಿಲ್ಲದೆ, ಗತಿಹೀನರಾಗಿ ಅಲೆಯಬೇಕಾಗುವುದಲ್ಲ! ಕೇಡಿಗನು, ಕುಲನಾಶಕನು, ಪಾಪಿಷ್ಠನು ಆದ ನಿನ್ನಂತಹ ಮಗನನ್ನು ಹೆತ್ತು, ಅವರು ಗೋಳಿಡುತ್ತ ತಿರುಪವೆತ್ತಿ ಹೊಟ್ಟೆ ಹೊರೆಯುತ್ತ ಭೂಮಿಯ ಮೇಲೆ ಇರಬೇಕಾಗುವುದಲ್ಲ! ಎಂದು ನಾನು ವ್ಯಥೆಪಡುತ್ತೇನೆ" ಎಂದನು.

ಆಗ ಧೃತರಾಷ್ಟ್ರನು, ಸೋದರರ ಮತ್ತು ರಾಜರ ನಡುವೆ ಕುಳಿತಿದ್ದ ದುರ್ಯೋಧನನನ್ನು ಸಂಬೋಧಿಸಿ—"ದುರ್ಯೋಧನ! ಶೌರಿಯ ಮಾತನ್ನು ಕೇಳು. ನಮ್ಮ ಯೋಗಕ್ಷೇಮಾರ್ಥವಾಗಿಯೇ ಅವನು ಬಂದಿರುವನು. ಈ ಸಮಯವನ್ನು ಬಿಟ್ಟರೆ ನೀನು ಕೆಟ್ಟೆ" ಎಂದನು.

ಧೃತರಾಷ್ಟ್ರನ ಮಾತನ್ನು ಕೇಳಿ ವ್ಯಥೆಪಟ್ಟು ಭೀಷ್ಮ ದ್ರೋಣರು ಇಂತೆಂದು ದುರ್ಯೋಧನನಿಗೆ ಮತ್ತೆ ಬುದ್ಧಿ ಹೇಳಿದರು:—"ಕೃಷ್ಣಾರ್ಜುನರು ಯುದ್ಧಸನ್ನದ್ಧರಾಗದಿರುವಾಗಲೆ, ಧೌಮ್ಯನು ಶತ್ರುಬಲಕ್ಷಯಕ್ಕಾಗಿ ಮಾರಣ ಹೋಮಮಾಡದಿರುವಾಗಲೆ, ಯುಧಿಷ್ಠಿರನ ಕೋಪವು ಕೆರಳದಿರುವಾಗಲೆ, ಅರ್ಜುನನು ಗಾಂಡೀವವನ್ನೂ ಭೀಮನು ಗದೆಯನ್ನೂ ಎತ್ತದಿರುವಾಗಲೆ, ನಕುಲ ಸಹದೇವ ಧೃಷ್ಟದ್ಯುಮ್ನಾದಿ ವೀರರು ರಣರಂಗವನ್ನು ಪ್ರವೇಶಮಾಡದಿರುವಾಗಲೆ ವೈರವನ್ನು ಬಿಟ್ಟು ಸಂಧಿಮಾಡಿಕೊ. ನೀನು ಯುಧಿಷ್ಠಿರನ ಅಡಿಗೆರಗು; ಯುಧಿಷ್ಠಿರನು ನಿನ್ನನ್ನು ಎರಡು ಕೈಗಳಿಂದಲೂ ಬಾಚಿ ಅಪ್ಪಿಕೊಳ್ಳಲಿ. ಭೀಮಸೇನನು ಶಾಂತನಾಗಿ ನಿನ್ನನ್ನು ಅಪ್ಪಿಕೊಂಡು, ಸಂಧಿಮಾಡಿಕೊಳ್ಳೋಣ ಎನ್ನಲಿ. ಅರ್ಜುನ ನಕುಲ ಸಹದೇವರು ನಿನ್ನನ್ನು ಅಭಿವಂದಿಸಲಿ. ನೀನು ಅವರ ಮಂಡೆಯನ್ನು ನಲ್ಮೆಯಿಂದಾಘ್ರಾಣಿಸು. ನೀನೂ ಪಾಂಡುಪುತ್ರರೂ ಒಂದಾದುದನ್ನು ನೋಡಿ ಈ ನರಾಧಿಪ

ರೆಲ್ಲರೂ ಆನಂದಾಶ್ರುವನ್ನು ಕರೆಯಲಿ. ನೀವೆಲ್ಲರೂ ಒಂದಾದ ಶುಭ ವಾರ್ತೆಯು ಸಮಸ್ತ ರಾಜಧಾನಿಗಳಲ್ಲಿಯೂ ಉದ್ಘೋಷಿತವಾಗಲಿ.''

ದುರ್ಯೋಧನನು ಕುರುಸಭೆಯಲ್ಲಿ ತನಗೆ ರುಚಿಸದ ಮಾತುಗಳನ್ನು ಕೇಳಿ ಇಂತೆಂದನು :—''ಕೇಶವ! ನೀನು ಎಲ್ಲವನ್ನೂ ಪರ್ಯಾಲೋಚಿಸಿ ಆ ಬಳಿಕ ಮಾತನಾಡುವುದು ಯುಕ್ತವು. ನೀನು ನನ್ನೊಬ್ಬನನ್ನೇ ನಿಂದಿಸುತ್ತೀಯೆ. ಹಾಗೆಯೇ ಭೀಷ್ಮ ದ್ರೋಣ ವಿದುರಾದಿಗಳೂ ಮತ್ತೆ ಯಾರನ್ನೂ ಮಾತನಾಡಿಸದೆ ನನ್ನೊಬ್ಬನನ್ನೇ ಜರಿಯುತ್ತಿರುವರು. ಅಂತಹ ಮಾಡಬಾರದ ಕೆಲಸವನ್ನು ನಾನೇನು ಮಾಡಿದೆ? ಯುಧಿಷ್ಠಿರಾದಿಗಳು ತಾವಾಗಿ ಒಪ್ಪಿ ಶಕುನಿಯ ಸಂಗಡ ಜೂಜಾಡಿ ರಾಜ್ಯವನ್ನು ಸೋತರೆ ನಾನು ಮಾಡಿದ ಅಪರಾಧವೇನು? ಹಾಗೂ, ಅವರಿಂದ ಗೆದ್ದಿದ್ದ ಧನವೆಲ್ಲವನ್ನೂ ನಾನು ಅವರಿಗೆ ಹಿಂದಕ್ಕೆ ಕೊಡಿಸಿದೆನು. ಅವರು ಮತ್ತೆ ಜೂಜಾಡಿ ಸೋತು ವನವಾಸಕ್ಕೆ ಹೋದರೆ ಅದಕ್ಕೆ ನಾನು ಹೊಣೆಯೆ? ಅಶಕ್ತರಾಗಿದ್ದರೂ ಅವರು ಶಕ್ತರಂತೆ ನಮ್ಮ ಸಂಗಡ ವಿರೋಧಕಟ್ಟಿಕೊಂಡರೆ ಅದು ನನ್ನ ತಪ್ಪೆ? ಅವರು ನಮ್ಮನ್ನು ಕೊಲ್ಲಲಿಚ್ಛೈಸುವಹಾಗೆ ಅವರಿಗೆ ನಾವೇನು ಅಂತಹ ಅಪಕಾರವನ್ನು ಮಾಡಿದೆವು? ಅವರಿಗೆ ಹೆದರಿ ನಾವು ಬೇರೆ ತಲೆಬಾಗಿಸುವರಲ್ಲ; ರಣದಲ್ಲಿ ಒಂದು ವೇಳೆ ಸತ್ತರೂ ಸಾಯುವೆವು. ಶರಶಯ್ಯೆಯಲ್ಲಿ ಮಲಗುವುದು ಕ್ಷತ್ರಿಯ ಧರ್ಮ, ಜೀವಗಳ್ಳನಾಗಿ ಶತ್ರುವಿಗೆ ಶರಣಾಗತನಾಗುವನು ಕ್ಷತ್ರಿಯನೆ? ಬ್ರಾಹ್ಮಣನಿಗೆ ಪ್ರಣಾಮ ಮಾಡುವುದೇನೋ ಧರ್ಮ, ಮತ್ತೆ ಯಾರಿಗೂ ನಾನು ಮಾಡೆನು. ಏನೇ ಆಗಲಿ, ನಾನು ಪಾಂಡವರಿಗೆ ರಾಜ್ಯಾಂಶವನ್ನು ಕೊಡೆನು. ಧೃತರಾಷ್ಟ್ರನು ಜೀವಂತನಾಗಿರುವ ವರೆಗೂ ನಾವೂ ಅವರೂ ಶಸ್ತ್ರಗಳನ್ನು ಎತ್ತಿಟ್ಟು ಅವನ ಕೈಯ ಕೆಳಗಿರೋಣ. ನಾನು ಬಾಲಕನೂ ಪರಾಧೀನನೂ ಆಗಿದ್ದಾಗ ನಮ್ಮ ತಂದೆ ಅಜ್ಞಾನದಿಂದಲೋ ಭಯದಿಂದಲೋ ರಾಜ್ಯವನ್ನು ಪಾಂಡವರ ಪಾಲುಮಾಡಿದ್ದನು. ನಾನು ಬದುಕಿರುವ ವರೆಗೂ ಪಾಂಡವರಿಗೆ ರಾಜ್ಯವಾಗಲಾರದು; ಅಷ್ಟೇಕೆ? ಸೂಜಿಯ ಮೊನೆಯೂರುವಷ್ಟು ನೆಲವನ್ನು ಕೂಡ ಅವರಿಗೆ ಕೊಡೆನು.''

ದುರ್ಯೋಧನನ ಮಾತನ್ನು ಕೇಳಿ ಕೃಷ್ಣನು—"ನಿನಗೆ ವೀರ ಶಯ್ಯೆಯಾಗಬೇಕೊ? ಏಕಾಗಬಾರದು? ನಿನಗೆ ಮಾತ್ರವೇ ಅಲ್ಲ, ನಿನ್ನ ಅಮಾತ್ಯರಿಗೂ ವೀರ ಶಯ್ಯೆಯು ಲಭಿಸುವುದು! ಎಲೈ ಮೂಢ! ಪಾಂಡವರಿಗೆ ನೀನು ಯಾವ ಅನ್ಯಾಯವನ್ನೂ ಮಾಡ ಲಿಲ್ಲವೆಂದು ಗಳಹುತ್ತೀಯೆ? ನರಾಧಿಪರೇ! ನೀವು ಹೇಳಿರಿ. ಎಲೋ ನರಾಧಮನೇ! ಪಾಂಡವರ ಸಿರಿಯನ್ನು ನೋಡಿ ಸೈರಿಸ ಲಾರದೆ ನೀನೂ ನಿನ್ನ ದುರ್ಮಂತ್ರಿ ಶಕುನಿಯೂ ಅವರನ್ನು ದ್ಯೂತಕ್ಕೆ ಸೆಳೆಯಲಿಲ್ಲವೆ? ಪ್ರಾಜ್ಞನೇ! ಅಕ್ಷದ್ಯೂತದಿಂದ ಸಾಧುಗಳ ಬುದ್ಧಿಯು ಕೂಡ ಕೆಡುವುದು. ಇನ್ನು, ಆಡುವವರು ದುಷ್ಟರಾದಲ್ಲಿ ವಿರೋಧವೂ ವಿಪತ್ತೂ ತಪ್ಪವು ಎಂಬುದನ್ನು ನೀನು ಕಾಣೆಯಾ? ಕುಲೀನೆ, ಶೀಲ ಸಂಪನ್ನೆ, ಪತಿವ್ರತೆ, ಮತ್ತಾರೂ ಅಲ್ಲ—ಸಾಕ್ಷಾತ್ ಭ್ರಾತೃ ಭಾರ್ಯೆ— ಇಂತಹ ರಾಜಪತ್ನಿಯನ್ನು, ಮಾನಿನ್ಯೆಯನ್ನು ಯಾವ ನೀಚನಾದರೂ ರಾಜಸಭೆಗೆಳೆದು ತಂದು ತುಚ್ಛ ಭಾಷೆಯನ್ನಾಡುವನೆ? ನೀನು ಆ ಕೆಲಸಕ್ಕೂ ಹೇಸಲಿಲ್ಲ. ಆ ಸಾಧುಗಳು ವನವಾಸಕ್ಕೆ ಹೊರಟಾಗ ಕರ್ಣನೂ ದುಃಶಾಸನನೂ ನೀನೂ ಕೂಡ ಅವರನ್ನು ಆಡಬಾರದ ಮಾತುಗಳನ್ನಾಡಿ ಅವಮಾನಪಡಿಸಲಿಲ್ಲವೆ? ನೀನು ವಾರಣಾವತದಲ್ಲಿ ತಾಯಿಯ ಸಮೇತರನ್ನಾಗಿ ಅವರನ್ನು ಸುಟ್ಟು ಭಸ್ಮಮಾಡುವ ಪ್ರಯತ್ನವನ್ನು ಮಾಡಲಿಲ್ಲವೆ? ಇನ್ನೂ ಎಷ್ಟು ಬಗೆಯಲ್ಲಿ ನೀನು ಅವರನ್ನು ನಾಶಮಾಡುವ ಪ್ರಯತ್ನ ಮಾಡಲಿಲ್ಲ? ಪಾಂಡವರಲ್ಲಿ ನಿನಗೆ ಅಷ್ಟು ದ್ವೇಷ ಬುದ್ಧಿಯಿದ್ದರೂ, ನೀನು ಅವರಿಗೆ ಅಷ್ಟು ವಂಚನೆ ಮಾಡಿದರೂ, ಅವರನ್ನು ಅಷ್ಟು ನೋಯಿಸಿದರೂ ನೀನು ಅಪರಾಧಿ ಯಲ್ಲವೆಂದು ನೊರಹುತ್ತೀಯಲ್ಲ! ನಿನ್ನದು ಎಂತಹ ಗುಂಡಿಗೆ! ಇಂತಹ ದುರಾಚಾರಿಯಾದ ನೀನು ರಾಜಪದವಿಯಲ್ಲಿರುವುದಕ್ಕೆ ಯೋಗ್ಯನೆ! ಪಾಂಡವರು ತಮ್ಮ ಹಿರಿಯರ ಪಾಲಿನ ರಾಜ್ಯವನ್ನು ಯಾಚಿಸುತ್ತಿದ್ದಾರೆ; ನೀನು ಕೊಡೆ. ನೀನಾಗಿ ಕೊಡುವ ಕಾಲವು ಬರುವುದು. ನಿನ್ನ ತಾಯಿತಂದೆಗಳೂ ಭೀಷ್ಮ ದ್ರೋಣ ವಿದುರರೂ ಸಂಧಿಮಾಡಿಕೊ ಎಂದು ಎಷ್ಟೋ ಬಗೆಯಲ್ಲಿ ನಿನ್ನನ್ನು ಬೇಡಿದರೂ,

ನೀನು ಕೇಳಲಿಲ್ಲ. ಇದು ನೀಚ ಬುದ್ಧಿಯಲ್ಲವೆ? ಸಂಧಿಯಿಂದ ನಿನಗೆ ಮಹತ್ತರವಾದ ಲಾಭವುಂಟು. ಆಪ್ತರ ಮಾತನ್ನು ಮೀರಿ ನಡೆದರೆ ನಿನ್ನ ಇಷ್ಟಾರ್ಥವು ಕೈಗೂಡದು, ಖಂಡಿತವಾಗಿ ತಿಳಿ. ನೀನು ಉದ್ದೇಶಿಸಿರುವ ಕಾರ್ಯವು ಧರ್ಮಸಮ್ಮತವಾದುದೂ ಅಲ್ಲ, ಯಶಸ್ಕರವಾದುದೂ ಅಲ್ಲ'' ಎಂದನು.

ಕೃಷ್ಣನಾಡಿದ ಮಾತುಗಳನ್ನು ಕೇಳಿ ದುಃಶಾಸನನು—''ರಾಜನೇ! ನೀನಾಗಿ ಪಾಂಡವರ ಸಂಗಡ ಸಂಧಿಗೊಪ್ಪದಿದ್ದರೆ ಅಯ್ಯನೂ ಭೀಷ್ಮ ದ್ರೋಣರೂ ಸೇರಿ ನಿನ್ನನ್ನೂ ನನ್ನನ್ನೂ ವಿಕರ್ತನ ಮಗನನ್ನೂ ಕೈಕಾಲುಗಳನ್ನು ಕಟ್ಟಿ ಪಾಂಡವರ ವಶಮಾಡಿ ಬಿಡುವರು'' ಎಂದು ಹೇಳಿದನು.

ಒಡನೆಯೇ ದುರ್ಯೋಧನನು ಧೃತರಾಷ್ಟ್ರ ಭೀಷ್ಮ ದ್ರೋಣ ವಿದುರ ಕೃಷ್ಣ ಪ್ರಮುಖರನ್ನು ಲಕ್ಷ್ಯಮಾಡದೆಯೇ ಸಭೆಯಿಂದ ಎದ್ದು ಹೋದನು. ಅವನ ಹಿಂದೆಯೇ ಅವನ ತಮ್ಮಂದಿರು, ಮಂತ್ರಿಗಳು, ರಾಜರು ಕೂಡ ಹೊರಟರು.

ಲಜ್ಜಾಹೀನನೂ ದುಷ್ಟನೂ ಆದ ಆ ದುರ್ಯೋಧನನ ನಡತೆಯನ್ನು ನೋಡಿ ಭೀಷ್ಮನು—''ಯಾವನು ಕೋಪಕ್ಕೊಳಗಾಗಿ ಧರ್ಮಾರ್ಥಗಳನ್ನು ತ್ಯಜಿಸಿ ಕಷ್ಟಕ್ಕೀಡಾಗುವನೋ ಅವನ ಪಾಡನ್ನು ನೋಡಿ ಅವನ ಶತ್ರುಗಳು ನಗರೆ? ದುರಾತ್ಮನಾದ ಈ ರಾಜಕುಮಾರನು ರಾಜ್ಯಮದದಿಂದ ಸೊಕ್ಕಿ ಕ್ರೋಧಾಂಧನಾಗಿ ತನ್ನ ಇಷ್ಟ ಸಾಧನವನ್ನರಿಯದಿರುವನು. ಜನಾರ್ದನ! ರಾಜರೆಲ್ಲರೂ ಮರುಳಾಗಿ ದುರ್ಯೋಧನನನ್ನೂ ಅವನ ಮಂತ್ರಿಗಳನ್ನೂ ಅನುಸರಿಸುತ್ತಿರುವುದನ್ನು ನೋಡಿದರೆ ಕ್ಷತ್ರಿಯರೆಲ್ಲರಿಗೂ ಇದು ವಿನಾಶಕಾಲವೆಂದು ತೋರುವುದು'' ಎಂದನು.

ಆಗ ಕಮಲನೇತ್ರನಾದ ಶ್ರೀಕೃಷ್ಣನು, ಸಭೆಯಲ್ಲಿ ಉಳಿದಿದ್ದ ಭೀಷ್ಮ ದ್ರೋಣ ಪ್ರಮುಖರನ್ನು ಕುರಿತು—''ಕುರುವೃದ್ಧರೆಲ್ಲರೂ ಸೇರಿ ರಾಜ್ಯೈಶ್ವರ್ಯದಿಂದ ಕೊಬ್ಬಿರುವ ಈ ರಾಜನ ಸೊಕ್ಕಿಳಿಸಿ

ಬಲಾತ್ಕಾರದಿಂದಲಾದರೂ ಅವನನ್ನು ಮಾರ್ಗಕ್ಕೆ ತರದಿರುವುದು ಅನ್ಯಾಯ. ನಿಮ್ಮ ಹಿತಾರ್ಥವಾಗಿ ನಾನೊಂದುಪಾಯವನ್ನು ಹೇಳು ತ್ತೇನೆ, ಕೇಳಿರಿ. ಆ ಕೆಲಸವನ್ನು ಮಾಡುವುದಕ್ಕೆ ಕಾಲವೂ ಪ್ರಾಪ್ತ ವಾಗಿದೆ. ಅದೇನೆನ್ನುವಿರೊ? ದುರ್ಯೋಧನ ಕರ್ಣ ಶಕುನಿ ದುಃಶಾಸನರನ್ನು ಕೈಕಾಲು ಕಟ್ಟಿ ಪಾಂಡವರ ಬಳಿಗೆ ಕೊಟ್ಟು ಕಳುಹಿಸಿರಿ. ಅರಿಂದಮರೇ! ಹಾಗೆ ಮಾಡುವುದು ಅನ್ಯಾಯವಲ್ಲ.

ತ್ಯಜೇತ್ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥

ಎಂಬಂತೆ, ಕುಲ ರಕ್ಷಣಾರ್ಥವಾಗಿ ಒಬ್ಬ ಪುರುಷನನ್ನೂ, ಗ್ರಾಮ ರಕ್ಷಣಾರ್ಥವಾಗಿ ಕುಲವನ್ನೂ, ಜನಪದ ರಕ್ಷಣಾರ್ಥವಾಗಿ ಗ್ರಾಮ ವನ್ನೂ, ಆತ್ಮ ರಕ್ಷಣಾರ್ಥವಾಗಿ ಪೃಥಿವಿಯನ್ನೂ ತ್ಯಜಿಸಬೇಕು ಎಂದು ಪ್ರಾಜ್ಞರು ಹೇಳುವರು. ಪ್ರಾಜ್ಞನೇ! ದುರ್ಯೋಧನನನ್ನು ಕಟ್ಟಿಹಾಕು. ಪಾಂಡವರೊಡನೆ ಸಂಧಿಮಾಡಿಕೊಂಡು ನಿನ್ನ ಕುಲ ವನ್ನುಳಿಸು. ಕ್ಷತ್ರಿಯ ಶ್ರೇಷ್ಠನೇ! ನಿನ್ನ ದೆಸೆಯಿಂದ ಸಮಸ್ತ ಕ್ಷತ್ರಿಯ ಕುಲವೂ ನಾಶವಾಗದಂತಿರಲಿ" ಎಂದು ಹೇಳಿದನು.

ಶ್ರೀಕೃಷ್ಣನ ಸುಭಾಷಿತವನ್ನು ಕೇಳಿ ಧೃತರಾಷ್ಟ್ರನು ದೂರ ದರ್ಶಿನಿಯಾದ ಗಾಂಧಾರಿಯನ್ನು ಕರೆಯಿಸಿ—"ಪ್ರಾಜ್ಞೆ! ರಾಜ್ಯೈ ಶ್ವರ್ಯ ಲೋಭದಿಂದ ನಿನ್ನ ಮಗನು ರಾಜ್ಯವೊಂದನ್ನೇ ಅಲ್ಲ, ಪ್ರಾಣ ವನ್ನೂ ನೀಗಿಕೊಳ್ಳುವುದರಲ್ಲಿದ್ದಾನೆ" ಎಂದು ನುಡಿದನು.

ಆ ಮಾತಿಗೆ ಯಶಸ್ವಿನಿಯಾದ ಆ ರಾಜಪುತ್ರಿಯು—"ನನ್ನ ಮಗನನ್ನು ಕರೆಯಿಸು. ಧರ್ಮಾರ್ಥಗಳನ್ನು ಬಿಟ್ಟವನು ರಾಜ್ಯವಾಳು ವುದಕ್ಕೆ ಅರ್ಹನಲ್ಲ. ಆದರೂ ವಿನೀತನಲ್ಲದ ಈ ಅಪ್ರಯೋಜಕನಿಗೆ ರಾಜ್ಯವು ಲಭಿಸಿದೆ. ಇದಕ್ಕೆ ನಿನಗಿರುವ ಪುತ್ರ ಸ್ನೇಹವೇ ಕಾರಣ. ನೀನೇ ಅವನನ್ನು ಹೆಚ್ಚಿಸಿದೆ. ಅವನು ಪಾಪಾತ್ಮನೆಂದು ತಿಳಿದು ತಿಳಿದೂ ಅವನ ದಾರಿಯನ್ನೇ ಹಿಡಿಯುತ್ತೀಯೆ; ಅವನ ಬುದ್ಧಿ ಹೋಗುವಂತೆಯೇ ನಿನ್ನ ಬುದ್ಧಿಯೂ ಹೋಗುತ್ತಿದೆ! ಅಶಿಕ್ಷಿತ

ನಾಗಿ ಬೆಳೆದ ಅವನನ್ನು ಈಗ ದಾರಿಗೆ ತರಲಾಗುವುದೆ? ದುಷ್ಟ ಸಹ ವಾಸದಲ್ಲಿರುವ ಮೂರ್ಖನಿಗೆ ಪಟ್ಟವನ್ನು ಕಟ್ಟಿದ ಫಲವನ್ನು ನೀನು ಅನುಭವಿಸುತ್ತಿದ್ದೀಯೆ'' ಎಂದು ಗಂಡನನ್ನು ಆಕ್ಷೇಪಿಸಿದಳು.

ಆ ವೇಳೆಗೆ ವಿದುರನು ದುರ್ಯೋಧನನನ್ನು ಮತ್ತೆ ಸಭೆಗೆ ಕರೆದುಕೊಂಡುಬರಲು, ಗಾಂಧಾರಿ ಮಗನ ಕಡೆಗೆ ತಿರುಗಿ— ''ದುರ್ಯೋಧನ! ಭರತ ಶ್ರೇಷ್ಠನಾದ ನಿನ್ನ ತಂದೆಯೂ, ಭೀಷ್ಮ ದ್ರೋಣ ಕೃಪ ವಿದುರ ಪ್ರಮುಖರಾದ ನಿನ್ನ ಹಿತಚಿಂತಕರೂ ಹೇಳಿದ ಹಾಗೆ ಸಂಧಿಮಾಡಿಕೊ. ಪ್ರಾಜ್ಞನೇ! ರಾಜ್ಯವನ್ನು ಸಂಪಾದಿಸು ವುದಾಗಲಿ ಭೋಗಿಸುವುದಾಗಲಿ ಕಾಮವೊಂದರಿಂದಲೇ ಶಕ್ಯ ವಾಗದು. ಯಾವನು ಕಾಮ ಕ್ರೋಧಗಳ ವಶವಾಗುವನೋ ಅವನು ರಾಜ್ಯವನ್ನು ಶೀಘ್ರವಾಗಿಯೇ ನೀಗಿಕೊಳ್ಳುವನು. ಮೊದಲು ತನ್ನನ್ನು ಜಯಿಸಬಲ್ಲವನು, ತನ್ನಲ್ಲಿರುವ ಕಾಮ ಕ್ರೋಧಗಳನ್ನು ಅಡಗಿಸಬಲ್ಲ ವನು ಲೋಕವನ್ನೇ ಜಯಿಸಬಲ್ಲನು ಎಂಬುದನ್ನು ನೀನರಿಯೆಯಾ? ಪ್ರಭುತ್ವವು ಮಹತ್ತರವಾದ ಕಾರ್ಯವು. ದುರಾತ್ಮರಾದವರು ರಾಜ್ಯ ವನ್ನು ಆಶಿಸುವರೇ ಹೊರತು ಲಭಿಸಿದ ರಾಜ್ಯವನ್ನುಳಿಸಿಕೊಳ್ಳ ಲಾರರು. ಯುದ್ಧಮಾಡುವುದರಲ್ಲಿ ಕಲ್ಯಾಣವಿಲ್ಲ, ಧರ್ಮವಿಲ್ಲ, ಅರ್ಥವಿಲ್ಲ; ಇನ್ನು ಸುಖವೆಲ್ಲಿಯದು? ಪಾಂಡವರ ಪಾಲನ್ನು ಪಾಂಡ ವರಿಗೆ ಕೊಟ್ಟು ಅವರ ವಿರೋಧವನ್ನು ಹರಿಸಿಕೊ. ನೀನೂ ನಿನ್ನ ಮಂತ್ರಿಗಳೂ ಬಾಳುವುದಕ್ಕೆ ಅರ್ಧ ರಾಜ್ಯವು ಸಾಲದೆ? ಹದಿಮೂರು ವರ್ಷಗಳ ಕಾಲ ಪಾಂಡವರು ನೊಂದುದು ಸಾಕು. ಕೋಪಾವೇಶ ದಿಂದ ಕುರುವಂಶವನ್ನು ನಿರ್ಮೂಲ ಮಾಡಬೇಡ. ಭೀಷ್ಮ ದ್ರೋಣಾದಿಗಳು ಪಿಂಡಕ್ಕೆ ಹಂಗಿಗರಾಗಿ ಪ್ರಾಣವಾದರೂ ಕೊಡುವರೇ ಹೊರತು ಪಾಂಡವರ ಮೇಲೆಂದಿಗೂ ಕೋಪಿಸಿಕೊಳ್ಳರು, ಅವರಿಗೆ ಅಮಂಗಳವನ್ನು ಕೋರರು. ದುರ್ಯೋಧನ! ದುರಾಶೆಯನ್ನು ಬಿಡು; ಪಾಂಡವರ ಪಾಲನ್ನು ಪಾಂಡವರಿಗೆ ಕೊಡು'' ಎಂದಳು.

ತಾಯಿಯ ಹಿತವಚನವನ್ನು ಅನಾದರಮಾಡಿ ದುರ್ಯೋಧನನು ರೇಗಿ ಮತ್ತೆ ಸಭೆಯನ್ನು ಬಿಟ್ಟು ಹೊರಟು ಕರ್ಣ ಶಕುನಿ ದುಃಶಾಸನರ

ಕೂಡೆ ಆಲೋಚನೆ ಮಾಡಿ ಕೃಷ್ಣನನ್ನು ಹಿಂಗಟ್ಟುಮುರಿ ಕಟ್ಟಿ ಸೆರೆಯು ಲ್ಲಿಟ್ಟರೆ ಪಾಂಡವರು ಸುಮ್ಮನಾಗುವರೆಂದೆಣಿಸಿ, ಆ ದುಷ್ಕರವಾದ ಕಾರ್ಯವನ್ನು ಮಾಡಲೆಣಿಸಿದನು. ಕೃಷ್ಣನು ಅವನ ಕೂಟಯುಕ್ತಿ ಯನ್ನು ಲಕ್ಷ್ಯವೇ ಮಾಡಲಿಲ್ಲ; ವಿದುರ ಧೃತರಾಷ್ಟ್ರರು ದುರ್ಯೋ ಧನನನ್ನೂ ಅವನ ದುರ್ಮಂತ್ರಿಗಳನ್ನೂ ಛೀಗುಟ್ಟಿದರು. ಮಗನು ತನ್ನ ದುರಾಶೆಯನ್ನೂ ದುರಾಗ್ರಹವನ್ನೂ ಬಿಡುವನಲ್ಲವೆಂದು ಧೃತ ರಾಷ್ಟ್ರನು ಶ್ರೀಕೃಷ್ಣನು ಹೊರಡುವ ಸಮಯದಲ್ಲಿ ಅವನಿಗೆ ಹೇಳಿ ಕೊಂಡನು.

ಶ್ರೀಕೃಷ್ಣನು ಧೃತರಾಷ್ಟ್ರ ದ್ರೋಣ ಭೀಷ್ಮ ವಿದುರ ಬಾಹ್ಲಿಕ ಕೃಪರನ್ನುದ್ದೇಶಿಸಿ ಇಂತೆಂದನು:—"ಅಶಿಷ್ಟನೂ ದುಷ್ಟನೂ ಆದ ದುರ್ಯೋಧನನು ರೋಷದಿಂದ ಸಭೆಯಿಂದೆದ್ದುಹೋದುದನ್ನು ನೀವೆಲ್ಲರೂ ಕಂಡಿರಿ; ಧೃತರಾಷ್ಟ್ರನು ತನ್ನ ಮಕ್ಕಳು ಅಂಕೆಯಲ್ಲಿಲ್ಲ ವೆಂದು ಹೇಳಿದುದನ್ನೂ ನೀವು ಕೇಳಿದಿರಿ. ಇನ್ನು ನಾನು ಯುಧಿಷ್ಠಿರನ ಬಳಿಗೆ ಹೊರಡುವೆನು."

ಹೀಗೆಂದು ನುಡಿದು ಶ್ರೀಕೃಷ್ಣನು ಸಭಾಸದರನ್ನು ಬೀಳ್ಕೊಂಡು ತನ್ನ ಶುಭ್ರ ರಥವನ್ನೇರಿ ಕುಂತಿಯ ಬಳಿಗೆ ಹೋಗಿ ಅಭಿವಾದನಮಾಡಿ, ಕುರುಸಭೆಯಲ್ಲಿ ನಡೆದ ವೃತ್ತವನ್ನು ಸಂಗ್ರಹವಾಗಿ ಆಕೆಗೆ ತಿಳಿಸಿ, ದುರ್ಯೋಧನನಿಗೂ ಅವನ ವಶವರ್ತಿಗಳಿಗೂ ಕಾಲವು ಪಕ್ವವಾಗಿದೆ ಯೆಂದು ಸೂಚಿಸಿ, ತಾನು ಪಾಂಡವರ ಬಳಿಗೆ ಹೋಗಿಬರುವೆನೆಂದು ಹೇಳಿ ಪಾಂಡವರಿಗೆ ಹೇಳತಕ್ಕುದೇನಾದರೂ ಉಂಟೇ ಎಂದು ಆಕೆಯನ್ನು ಕೇಳಿದನು.

ಆ ಪ್ರಾಜ್ಞೆ—

"ಕೇಶವ! ನಾನು ಹೀಗೆ ಹೇಳಿದೆನೆಂದು ಅವರವರಿಗೆ ತಿಳಿಸು":—

"ನಿನ್ನ ರಾಜಧರ್ಮವು ಶಿಥಿಲವಾಗುತ್ತಿದೆ. ಸ್ವಧರ್ಮದಮೇಲೆ ದೃಷ್ಟಿಯಿಡು. ಬ್ರಹ್ಮನು ದುಷ್ಟರನ್ನು ನಿಗ್ರಹಿಸುವುದಕ್ಕೂ ಶಿಷ್ಟರನ್ನು

ಪರಿಪಾಲಿಸುವುದಕ್ಕೂ ಕ್ಷತ್ರಿಯರನ್ನು ಸೃಷ್ಟಿಸಿರುವನು. ಅವರು ಬಾಹುಬಲದಿಂದ ಜೀವಿಸತಕ್ಕವರು'' ಎಂದು ಯುಧಿಷ್ಠಿರನಿಗೂ;

''ಅರ್ಜುನನು ಭೀಮನ ಜೊತೆಯಲ್ಲಿ ಸಮಸ್ತ ಪೃಥ್ವಿಯನ್ನೂ ಗೆದ್ದು ಯಶಸ್ವಿಯಾಗಿ, ನಷ್ಟವಾದ ದಾಯಭಾಗವನ್ನು ವಾಸುದೇವನ ಸಾಹಾಯ್ಯದಿಂದ ರಣದಲ್ಲಿ ಸಂಪಾದಿಸುವನು ಎಂಬರ್ಥವನ್ನು, ಅರ್ಜುನನನ್ನು ಹೆತ್ತ ಸಮಯದಲ್ಲಿ ಆಕಾಶವಾಣಿಯಿಂದ ನಾನು ಕೇಳಿದೆನು'' ಎಂದು ಅರ್ಜುನನಿಗೂ;

''ಯಾವ ಕಾರ್ಯಕ್ಕಾಗಿ ಕ್ಷತ್ರಿಯಳಾದವಳು ಮಗನನ್ನು ಹೆರುವಳೋ ಆ ಕಾರ್ಯಕ್ಕೆ ಕಾಲವೊದಗಿದೆ. ವೀರ ಪುರುಷರು ಯುದ್ಧವು ಸಂಘಟಿಸಿದಾಗ ಧೈರ್ಯಸ್ಥೈರ್ಯವನ್ನು ಬಿಡರು'' ಎಂದು ಭೀಮಸೇನನಿಗೂ;

''ಎಲೌ! ಮಹಾಭಾಗೆ! ಸತ್ಕುಲಜಾತೆ! ಕೀರ್ತಿಸಂಪನ್ನೆ! ನನ್ನ ಮಕ್ಕಳ ವಿಷಯದಲ್ಲಿ ನೀನು ನಡೆದ ನಡತೆಯು ನಿನ್ನ ಕುಲಗೌರವಕ್ಕೂ ಗುಣಕ್ಕೂ ಅನುರೂಪವಾಗಿರುವುದು'' ಎಂದು ದ್ರೌಪದಿಗೂ;

ಕ್ಷತ್ರಿಯ ಧರ್ಮದಿಂದ ಜೀವಿಸುವವನು ವಿಕ್ರಮದಿಂದ ಗಳಿಸಿದ ಅರ್ಥದಿಂದ ಸಂತೋಷಪಡುವನು. ನೀವು ಧರ್ಮಾಚರಣೆಯಲ್ಲಿರುವವರು. ನಿಮ್ಮ ಕಣ್ಣ ಮುಂದೆಯೇ ದುರ್ಯೋಧನಾದಿಗಳು ಪಾಂಚಾಲಿಯನ್ನು ಕೆಟ್ಟ ಮಾತುಗಳನ್ನಾಡಿ ಅವಮಾನಪಡಿಸಿದರು. ಅದನ್ನು ಕ್ಷಮಿಸುವರುಂಟೆ?'' ಎಂದು ನಕುಲ ಸಹದೇವರಿಗೂ;

ತಿಳಿಸೆಂದು ಕೃಷ್ಣನ ಮೂಲಕವಾಗಿ ತನ್ನ ಮಕ್ಕಳಿಗೂ ಸೊಸೆಗೂ ಸಂದೇಶವನ್ನು ಹೇಳಿಕಳುಹಿಸಿದಳು.

ಕುಂತಿಯು ಆಡುತ್ತಿದ್ದ ಮಾತುಗಳನ್ನು ಭೀಷ್ಮ ದ್ರೋಣರು ಕೇಳಿ ಅವಿಧೇಯನಾದ ದುರ್ಯೋಧನನ ಬಳಿಗೆ ಹೋಗಿ ಜೇನರಡೆ ಮತ್ತೆ ಇಂತೆಂದು ಬುದ್ಧಿ ಹೇಳಿದರು:—''ಕೃಷ್ಣನ ಸನ್ನಿಧಿಯಲ್ಲಿ ಕುಂತಿಯು ಉಗ್ರವಾಗಿ, ಪರಂತು ಅರ್ಥವತ್ತಾಗಿಯೂ ಧರ್ಮಯುಕ್ತವಾಗಿಯೂ, ಆಡಿದ ಮಾತುಗಳನ್ನು ನೀನು ಕೇಳಿದೆಯಾ? ಆಕೆಯು

ಮಕ್ಕಳು ಆಕೆಯು ಹೇಳಿದ ಹಾಗೆಯೇ ಮಾಡುವರು. ಆದರೊಳಗೂ ವಾಸುದೇವನು ಆಕೆಯ ಮಾತನ್ನು ಒಪ್ಪಿರುವುದರಿಂದ ಅವರು ಹಾಗೆ ಮಾಡದೆ ಬಿಡರು. ಯುಧಿಷ್ಠಿರನ ಸಾಹಾಯ್ಯಕ್ಕೆ ಮಲ್ಲರಾದ ಸೋದರರೂ ಮಹಿಮಾನ್ವಿತನಾದ ಕೃಷ್ಣನೂ ಇರುವಾಗ ಅವನು ನಿನ್ನನ್ನು ಕ್ಷಮಿಸನು. ನೀನು ನಿನ್ನ ಮಂತ್ರಿಗಳೊಡನೆ ಹೋಗಿ ಪಾಂಡವರ ಸ್ನೇಹವನ್ನು ಮಾಡಿ ಅವರ ಸಂಗಡ ಸುಖವಾಗಿರುವ ಪ್ರಯತ್ನಮಾಡು. ಯುದ್ಧವು ಬೇಡ. ದುರ್ನಿಮಿತ್ತಗಳು ಕಾಣುತ್ತಲಿವೆ. ಈಗ ಸಂಧಿ ವಿಗ್ರಹಗಳು ನಿನ್ನ ಕೈಯ್ಯಲ್ಲಿವೆ.''

ದುರ್ಯೋಧನನು ಅವರ ಮಾತನ್ನು ಕೇಳಿ ಹುಬ್ಬು ಗಂಟುಹಾಕಿ ಕೊಂಡು ಯಾವ ಮಾತನ್ನೂ ಆಡದೆ ತಲೆಬಾಗಿ ಸುಮ್ಮನಿರಲು, ಭೀಷ್ಮನು—''ಧರ್ಮರಾಯನು ಹಿರಿಯರ ಶುಶ್ರೂಷೆಯನ್ನು ಮಾಡುವವನು, ಅಸೂಯೆಯಿಲ್ಲದವನು, ಬ್ರಹ್ಮಜ್ಞಾನಿ, ಸತ್ಯವಾದಿ. ಅಂತಹವನ ಮೇಲೆ ನಾವು ಕದನಕ್ಕೆ ಹೋಗಬೇಕಲ್ಲಾ! ಇದಕ್ಕಿಂತ ದುಃಖಕರವಾದುದೇನಿದೆ?'' ಎಂದುಕೊಂಡನು.

ಆಗ ದ್ರೋಣಾಚಾರ್ಯನು—''ಕ್ಷತ್ರಿಯ ಧರ್ಮವನ್ನವಲಂಬಿಸಿ ಮಗನಿಗಿಂತಲೂ ಅಧಿಕನಾದ ಅರ್ಜುನನ ಮೇಲೆ ನಾನು ಯುದ್ಧಮಾಡಬೇಕಾಗಿ ಬಂದಿರುವುದಲ್ಲಾ! ಕ್ಷತ್ರಿಯ ಜೀವನವು ಕೆಟ್ಟ ಜೀವನ! ಪಾಪಾತ್ಮನಾದವನು ಬೇಡವೆಂದರೂ ಪಾಪವನ್ನೇ ಇಚ್ಛಿಸುವನು; ಪುಣ್ಯಾತ್ಮನಾದವನು ಪಾಪದಿಂದ ಪ್ರೇರಿತನಾದರೂ ಪುಣ್ಯವನ್ನೇ ಇಚ್ಛಿಸುವನು. ನೀನು ಪಾಂಡವರಿಗೆ ವಂಚನೆ ಮಾಡುತ್ತಿದ್ದರೂ ಅವರು ನಿನಗೆ ಪ್ರಿಯವನ್ನೇ ಮಾಡಲಿಚ್ಛಿಸುವರು. ಕುರುವೃದ್ಧನೂ ನಾನೂ ವಿದುರನೂ ವಾಸುದೇವನೂ—ಇಷ್ಟುಮಂದಿ ಹೇಳಿದರೂ ನಿನ್ನ ಹಿತವನ್ನು ನೀನು ಅರಿಯದೆ ಹೋದೆ. ನಿನಗೆ ದಂಡು ದಾಳಿ ಇದೆ ಎಂಬ ಹೆಮ್ಮೆಯಿಂದ ಪಾಂಡವ ಸೇನೆಯಮೇಲೆ ಬೀಳಬೇಕೆಂದಿದ್ದೀಯೆ. ಪಾಂಡವರ ಐಶ್ವರ್ಯವನ್ನು ಅಪಹರಿಸಿ ನಿನ್ನದೆಂದೆಣಿಸುತ್ತೀಯೆ. ಪಾಂಡವರು ನಿನ್ನ ರಾಷ್ಟ್ರಕ್ಕೆ ದಂಡೆತ್ತಿ ಬಂದು ರಾಜ್ಯವನ್ನು ಗೆಲ್ಲುವ

ಯತ್ನಮಾಡುತ್ತಿದ್ದಾರೆ. ನಾವಿಬ್ಬರೇನೋ ನಮ್ಮ ಕರ್ತವ್ಯವನ್ನು ಮಾಡಿದೆವು. ನಮ್ಮ ಕಾಲವಾಯಿತು, ನಾವು ಕೃತಕೃತ್ಯರಾದೆವು. ನೀನು ಪಾಂಡವರ ಸಂಗಡ ಯುದ್ಧಮಾಡಿದರೆ, ಸುಖವನ್ನೂ ರಾಜ್ಯವನ್ನೂ ಧರ್ಮವನ್ನೂ ಮಿತ್ರರನ್ನೂ ನೀಗಿಕೊಂಡು ಮಹದ್ವ್ಯಸನಕ್ಕೆ ಗುರಿಯಾಗುವೆ. ಪತಿವ್ರತಾ ಶಿರೋಮಣಿಯೂ ಸತ್ಯವಾದಿನಿಯೂ ಆದ ದ್ರೌಪದಿಯು ಪಾಂಡವರಿಗೆ ಜಯವಾಗಲೆಂದು ಹರಸುತ್ತಿರುವಲ್ಲಿ, ಅವರನ್ನು ನೀನು ಹೇಗೆ ತಾನೆ ಜಯಿಸಬಲ್ಲೆ? ಕೌರವರ ಹಿತಾರ್ಥವಾಗಿ ಆ ವೀರರ ಸಂಗಡ ಸಂಧಿಮಾಡಿಕೊ; ಮಿತ್ರನ ಕರ್ತವ್ಯದಮೇಲೆ ದೃಷ್ಟಿಯಿಟ್ಟು ಇನ್ನೂ ಒಂದು ಸಾರಿ ಹೇಳುತ್ತೇನೆ ಕೇಳು, ಯುದ್ಧಕ್ಕೆ ಹೋಗಿ ನಾಶವಾಗಬೇಡ'' ಎಂದನು.

ಇತ್ತ, ಉಪಪ್ಲಾವ್ಯಕ್ಕೆ ಹೊರಟ ಶ್ರೀಕೃಷ್ಣನು ಕರ್ಣನನ್ನು ತನ್ನ ರಥದಮೇಲೆ ಕುಳ್ಳಿರಿಸಿಕೊಂಡು ಅವನ ಸಂಗಡ ಮಾತನಾಡುತ್ತ—''ಕರ್ಣ! ನೀನು ಕುಂತಿಯ ಹೊಟ್ಟೆಯಲ್ಲಿ ಯುಧಿಷ್ಠಿರನಿಗೆ ಮುಂದೆಯೇ ಹುಟ್ಟಿದವನು. ಶಾಸ್ತ್ರರೀತಿಯಾಗಿ ನೀನು ಪಾಂಡುವಿನ ಮಗನು. ನಾನು ನಿನಗೆ ರಾಜ್ಯಾಭಿಷೇಕ ಮಾಡಿಸುವೆನು; ನೀನು ರಾಜನಾಗಿರು, ಧರ್ಮರಾಯನು ಯುವರಾಜನಾಗಿರಲಿ'' ಎಂದು ಹೇಳಿದನು.

ಅದಕ್ಕೆ ಕರ್ಣನು—''ಕೃಷ್ಣ! ನೀನು ನನ್ನ ಮೇಲಣ ಪ್ರೀತಿಯಿಂದ ನನ್ನ ಶ್ರೇಯಸ್ಸನ್ನು ಕೋರಿಯೇ ಈ ಮಾತನ್ನು ಹೇಳಿದೆ. ನಾನು ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದವನಾದರೂ ಸೂತಕುಲದಲ್ಲಿ ಹುಟ್ಟಿದ ಅಧಿರಥನೂ ಅವನ ಹೆಂಡತಿಯೂ ನನ್ನನ್ನು ಮಗನಂತೆ ಸಾಕಿ ಸಲಹಿದರು. ನನ್ನ ಹೆಂಡತಿಯೂ ಸೂತಕುಲದವಳೇ. ಅವಳ ದೆಸೆಯಿಂದ ನನಗೆ ಮಕ್ಕಳೂ ಮೊಮ್ಮಕ್ಕಳೂ ಆಗಿರುವರು. ಭೂಮಂಡಲವನ್ನು ಕೊಟ್ಟರೂ ನಾನು ಅವರೆಲ್ಲರನ್ನೂ ತೊರೆದು ಪಾಂಡವರ ಕಡೆಗೆ ಬಾರೆನು. ನಾನು ದುರ್ಯೋಧನನ ಆಶ್ರಯ ಬಲದಿಂದ ಹದಿಮೂರು ವರ್ಷಗಳು ರಾಜ್ಯವನ್ನಾಳಿದೆನು. ಅವನು ನನ್ನ ಸಾಹಾಯ್ಯವನ್ನು ನಚ್ಚಿ ಪಾಂಡವರ ಮೇಲೆ ಯುದ್ಧಸನ್ನಾಹವನ್ನು ಮಾಡುತ್ತ ನನ್ನನ್ನು

ಅರ್ಜುನನಿಗೆ ಪ್ರತಿಯೋಧನನ್ನಾಗಿ ವರಿಸಿರುವನು. ಪಾಂಡವರಿಗೆ ಅಂಜಿಯಾಗಲಿ ಅವರ ರಾಜ್ಯಕ್ಕೆ ಆಸೆಪಟ್ಟಾಗಲಿ, ನಾನು ದುರ್ಯೋಧನನಿಗೆ ದ್ರೋಹ ಮಾಡೆನು. ನಾನು ಯುದ್ಧಕ್ಕೆ ಹಿಮ್ಮೆಟ್ಟಿದರೆ ನನಗೂ ಅರ್ಜುನನಿಗೂ ಕೂಡ ಅಪಕೀರ್ತಿ ಬರುವುದು. ನನಗೆ ರಾಜ್ಯವು ಬಂದಲ್ಲಿ ನಾನು ಅದನ್ನು ದುರ್ಯೋಧನನಿಗೆ ಕೊಟ್ಟುಬಿಡುವೆನೇ ಹೊರತು ನಾನು ಇಟ್ಟುಕೊಳ್ಳೆನು. ಯುಧಿಷ್ಠಿರನು ಗೆದ್ದಲ್ಲಿ ಮಹಾರಾಯನಾಗಿ ಅವನು ರಾಜ್ಯವನ್ನಾಳಲಿ. ಪೃಥ್ವಿಯೆಲ್ಲವೂ ಧರ್ಮರಾಯನ ರಾಷ್ಟ್ರವಾಗುವುದು ಯುಕ್ತವೇ'' ಎಂದನು.

ಅದಕ್ಕೆ ಕೃಷ್ಣನು—''ಹಾಗಾದರೆ, ನಿನಗೆ ರಾಜ್ಯವು ಬೇಡವೋ? ನಾನು ಹೇಳಿದ ಉಪಾಯವು ನಿನಗೆ ಸೇರದೊ? ಇನ್ನು, ಭೂಮಂಡಲಕ್ಕೆ ವಿನಾಶ ಕಾಲ ಬಂದಹಾಗೆಯೇ. ಪಾಂಡವರು ಗೆಲ್ಲುವುದು ನಿಶ್ಚಯ. ವಿನಾಶ ಕಾಲಕ್ಕೆ ಧರ್ಮವೇ ಅಧರ್ಮವಾಗಿ ತೋರುವುದು'' ಎಂದನು.

ಕರ್ಣನು ಆ ವಿನಾಶಕ್ಕೆ ಶಕುನಿಯೂ ತಾನೂ ದುರ್ಯೋಧನ ದುಃಶಾಸನರೂ ನಿಮಿತ್ತವೆಂದೊಪ್ಪಿಕೊಂಡು—''ಕೃಷ್ಣ! ರಣದಲ್ಲಿ ಗೆದ್ದು ಬದುಕಿಬಂದರೆ ಇಲ್ಲಿಯೇ ನಿನ್ನ ದರ್ಶನಕ್ಕೆ ಬರುವೆನು; ಸತ್ತರೆ ಸ್ವರ್ಗದಲ್ಲಿ ನಿನ್ನನ್ನು ಕಾಣುವೆನು'' ಎಂದು ನುಡಿದು ಕೃಷ್ಣನನ್ನು ಪ್ರೇಮದಿಂದ ಆಲಿಂಗನೆಮಾಡಿಕೊಂಡು ವಿಷಾದಪಡುತ್ತ ಅವನನ್ನು ಬೀಳ್ಕೊಂಡು ಹಸ್ತಿನಾಪುರಕ್ಕೆ ಹಿಂದಿರುಗಿದನು.

---

## ಹನ್ನೆರಡನೆಯ ಅಧ್ಯಾಯ

### ಕುರುಕ್ಷೇತ್ರ, ಭೀಷ್ಮನ ಸೇನಾಧಿಪತ್ಯ, ಶರಶಯ್ಯೆ.

ಇಂತು ಯುದ್ಧವು ಅನಿವಾರ್ಯವಾಯಿತು. ನಯ ವಿನಯಕ್ಕೆ ಬಗೆಹರಿಯದ ಜ್ಞಾತಿಗಳ ವಿವಾದವು ಗಾಂಡೀವದಿಂದಲೂ ಗದೆಯಿಂದಲೂ ಬಗೆಹರಿಯಬೇಕಾಯಿತು.

ಯುಧಿಷ್ಠಿರನು ಕೃಷ್ಣನ ಸಮಕ್ಷದಲ್ಲಿ ತಮ್ಮಂದಿರನ್ನು ಕಲೆಯ ಹಾಕಿ—"ನರೋತ್ತಮರೇ! ನಮ್ಮ ವಿಜಯಾರ್ಥವಾಗಿ ಏಳಕ್ಷೋಹಿಣೀ ಸೇನೆಯಿದೆ; ಅಲ್ಲದೆ, ನಮ್ಮಲ್ಲಿ ದ್ರುಪದ, ವಿರಾಟ, ಧೃಷ್ಟದ್ಯುಮ್ನ, ಶಿಖಂಡಿ, ಸಾತ್ಯಕಿ, ಚೇಕಿತಾನ, ಭೀಮಸೇನ ಎಂಬೀ ಏಳ್ವರು ವಿಖ್ಯಾತ ವೀರರಿರುವರು. ಇವರೆಲ್ಲರೂ ವೇದವಿದರು, ಶೂರರು, ಸುಚರಿತ್ರರು, ನೀತಿವಂತರು, ಯುದ್ಧ ವಿಶಾರದರು, ಅಸ್ತ್ರವಿದ್ಯೆಯನ್ನು ಬಲ್ಲವರು. ಎಲ್ಲರೂ ಸೇನಾಧಿಪತ್ಯಕ್ಕೆ ತಕ್ಕವರೇ. ಇವರೊಳಗೆ ವ್ಯೂಹ ರಚನೆಯನ್ನು ಬಲ್ಲವರಾಗಿ ಭೀಷ್ಮನ ಇದಿರಿಗೆ ನಿಲ್ಲಲು ಸಮರ್ಥರಾರು?" ಎಂದು ಅವರವರ ಅಭಿಪ್ರಾಯವನ್ನು ಕೇಳಿದನು.

ಒಬ್ಬೊಬ್ಬರು ಒಬ್ಬೊಬ್ಬನ ಹೆಸರನ್ನು ಹೇಳಿದರು. ಕಡೆಗೆ ಶ್ರೀಕೃಷ್ಣನು—ಮಹಾರಾಜನೇ! ಈಗ ಹೇಳಿದವರೆಲ್ಲರೂ ವಿಕ್ರಮಿಗಳೇ ಅಹುದು; ಅಕ್ಷೋಹಿಣೀಪತಿಗಳಾಗಿ ನಿನ್ನ ಶತ್ರುಗಳ ಮುಂದೆ ನಿಂತು ಕಾದುವವರೇ ಅಹುದು. ನಮ್ಮ ಸೈನ್ಯವೂ ಸಾರವತ್ತಾಗಿದೆ; ದುರ್ಯೋಧನನ ಸೈನ್ಯವನ್ನು ಮರ್ದನಮಾಡಬಲ್ಲುದು. ಸೇನಾಧಿಪತ್ಯಕ್ಕೆ ಮಾತ್ರ ಧೃಷ್ಟದ್ಯುಮ್ನನು ತಕ್ಕವನೆಂಬು ನನಗೆ ತೋರುವುದು" ಎಂದನು.

ನೆರೆದಿದ್ದ ರಾಜರೆಲ್ಲರೂ ಕೃಷ್ಣನ ವಚನಕ್ಕೆ ಅಭಿಮತರಾಗಿ ಹರ್ಷದಿಂದುದ್ಘೋಷಿಸಿದರು. ಯುಧಿಷ್ಠಿರಾದಿ ಸರ್ವರೂ ಕುರುಕ್ಷೇತ್ರವನ್ನು ಪ್ರವೇಶಮಾಡಿದರು. ಯುಧಿಷ್ಠಿರನು ದ್ರುಪದಾದಿ

ಏಳ್ವರನ್ನು ವಿಧಿವತ್ತಾಗಿ ಅಕ್ಷೌಹಿಣಿಯ ಅಧಿಪತಿಗಳನ್ನಾಗಿಟ್ಟು ಧೃಷ್ಟದ್ಯುಮ್ನನನ್ನು ಸರ್ವ ಸೈನ್ಯಾಧಿಪತ್ಯಕ್ಕೆ ನೇಮಿಸಿ ಅಭಿಷೇಕ ಮಾಡಿದನು. ಆ ಸೇನಾಪತಿಗಳೆಲ್ಲರಿಗೂ ಅರ್ಜುನನು ಅಧಿಪತಿಯಾದನು. ಕೃಷ್ಣನು ಅರ್ಜುನನಿಗೆ ನೇತೃವೂ ಸಾರಥಿಯೂ ಆದನು.

ಇತ್ತ, ದುರ್ಯೋಧನನು ತನ್ನ ಹನ್ನೊಂದಕ್ಷೌಹಿಣೀ ಸೈನ್ಯಕ್ಕೆ ಕೃಪ, ದ್ರೋಣ, ಶಲ್ಯ, ಜಯದ್ರಥ, ಸುದಕ್ಷಿಣ, ಕೃತವರ್ಮ, ಅಶ್ವತ್ಥಾಮ, ಕರ್ಣ, ಭೂರಿಶ್ರವಸ್ಸು, ಶಕುನಿ, ಬಾಹ್ಲಿಕ ಎಂಬೀ ವೀರರನ್ನು ಬೇರೆ ಬೇರೆ ಸೇನಾ ನಾಯಕರನ್ನಾಗಿ ನೇಮಿಸಿದನು. ಆ ಬಳಿಕ ಅವನು ರಾಜರೆಲ್ಲರೊಡನೆ ಭೀಷ್ಮನ ಬಳಿಗೆ ಹೋಗಿ ಕೈ ಜೋಡಿಸಿ ನಿಂತು—"ಪ್ರಣೇತಾರನು ಇಲ್ಲದಿದ್ದರೆ ಮಹತ್ತಮವಾದ ಸೈನ್ಯವಾದರೂ ಯುದ್ಧದಲ್ಲಿ ಭಗ್ನವಾಗುವುದು. ಯಾರಿಬ್ಬರ ಬುದ್ಧಿಯೂ ಸಮವಾಗಿರದು. ದಳಪತಿಗಳಲ್ಲಿ ಪರಸ್ಪರವಾಗಿ ಅಸೂಯೆ ಇರುವ ಸಂಭವವೂ ಉಂಟು. ಅವರು ಬುದ್ಧಿವಂತನಾದ ಒಬ್ಬ ಪ್ರಣೇತೃವಿನ ಆಜ್ಞೆಗೊಳಪಡದೆ ಸ್ವಬುದ್ಧಿ ವಶವರ್ತಿಗಳಾಗಿ ನಡೆದರೆ ಅಪಜಯವು ತಪ್ಪದು. ಸೇನಾಪತಿಯು ಸುಕುಶಲನು, ಶೂರನು, ಶುದ್ಧನು, ಹಿತೈಷಿಯೂ ಆಗಿರಬೇಕು. ಯಾರು ಅಂತಹ ಗುಣಸಂಪನ್ನನಾದ ಸೇನಾಪತಿಯನ್ನು ವರಿಸುವರೋ ಅವರು ರಣದಲ್ಲಿ ಹಗೆಯನ್ನು ಗೆಲ್ಲುವರು. ನೀನು ನನ್ನ ಹಿತೈಷಿ, ಧರ್ಮ ನಿರತನು. ನಿನ್ನನ್ನು ಸಂಹಾರ ಮಾಡುವಷ್ಟು ಸಮರ್ಥರಾರೂ ಇಲ್ಲ. ನಮಗೆ ನೀನು ಸೇನಾಪತಿಯಾಗು" ಎಂದು ಬೇಡಿದನು.

ಅದಕ್ಕೆ ಭೀಷ್ಮನು—"ಮಹಾಬಾಹುವೇ! ನೀನು ಹೇಳಿದುದೆಲ್ಲವೂ ಸರಿ. ನನಗೆ ನೀವು ಹೇಗೋ ಪಾಂಡವರೂ ಹಾಗೆಯೇ. ಅವರ ಹಿತವನ್ನೂ ನಾನು ಚಿಂತಿಸಬೇಕು. ನಾನು ನಿಮ್ಮ ಪರವಾಗಿ ನಿಂತು ಯುದ್ಧಮಾಡುತ್ತೇನೆ. ಒಂದು ಕ್ಷಣದಲ್ಲಿ ನಾನು ಜಗತ್ತೆಲ್ಲವನ್ನೂ ನಿರ್ಮಾನುಷವನ್ನಾಗಿ ಮಾಡಬಲ್ಲೆನು, ಆದರೆ ಪಾಂಡುಪುತ್ರರನ್ನು ಮಾತ್ರ ನಾನೆಂದಿಗೂ ಕೆಡಿಸಲಾರೆನು. ಅವರು ನನ್ನನ್ನು

ಕೊಲ್ಲುವ ವರೆಗೂ ನಾನು ಅವರ ದಂಡಿನಲ್ಲಿ ದಿನಕ್ಕೆ ಹತ್ತು ಸಹಸ್ರ ಯೋಧರನ್ನು ಕತ್ತರಿಸಿ ಹಾಕುವೆನು. ಆದರೆ ಕರ್ಣನು ರಣದಲ್ಲಿ ತನ್ನ ಮುಂದೆ ನಾನಲ್ಲವೆಂದು ಪ್ರತಾಪವನ್ನು ಹೇಳಿಕೊಳ್ಳುತ್ತಾನೆ. ಆದುದರಿಂದ ಕರ್ಣನೇ ಮೊದಲು ಯುದ್ಧ ಮಾಡಲಿ, ಅವನು ಬಲ್ಲೆನೆಂದರೆ ನಾನು ಮಾಡುವೆನು'' ಎಂದನು.

ಅದನ್ನು ಕೇಳಿ ಕರ್ಣನು—''ಮಹಾರಾಜನೇ! ಭೀಷ್ಮನು ಬದುಕಿರುವ ವರೆಗೂ ನಾನು ಯುದ್ಧ ಮಾಡೆನು. ಭೀಷ್ಮನು ಹತನಾದ ಮೇಲೆ ನಾನು ಗಾಂಡೀವಧಾರಿಯಾದ ಅರ್ಜುನನ ಸಂಗಡ ಕಾದುವೆನು '' ಎಂದನು.

ದುರ್ಯೋಧನನು ವಿಧಿವತ್ತಾಗಿ ಭೀಷ್ಮನಿಗೆ ಸರ್ವ ಸೇನಾಧಿಪತ್ಯಕ್ಕೆ ಪಟ್ಟವನ್ನು ಕಟ್ಟಿ ಬ್ರಾಹ್ಮಣರಿಗೆ ಭೂರಿದಕ್ಷಿಣೆಯನ್ನು ಕೊಟ್ಟು ಅವರ ಹರಕೆಯನ್ನು ಕೈಕೊಂಡು, ಸೋದರರೊಡಗೂಡಿ ಸೇನಾ ಸಮೇತನಾಗಿ ಭೀಷ್ಮನನ್ನು ಮುಂದಿಟ್ಟುಕೊಂಡು ಕುರುಕ್ಷೇತ್ರಕ್ಕೆ ಹೊರಟನು. ಅಲ್ಲಿ ತೃಣ ಕಾಷ್ಠ ಸಮೃದ್ಧವಾದ ಸಮಭೂಮಿಯಲ್ಲಿ ದುರ್ಯೋಧನನು ತನ್ನ ಶಿಬಿರವನ್ನು ಸ್ಥಾಪಿಸಿದನು.

ಬೆಳಗಾಯಿತು ; ಧೃತರಾಷ್ಟ್ರನ ಕುಮಾರರು ಸೈನ್ಯದ ನಡುವೆ ಬಂದು ನಿಂತರು. ದುರ್ಯೋಧನನು ಭೀಷ್ಮಾದಿಗಳನ್ನು ಒಬ್ಬೊಬ್ಬರನ್ನಾಗಿ ಕರೆದು—''ಪಾಂಡವರ ಚತುರಂಗ ಬಲವು ಸಾಗರ ಸದೃಶವಾಗಿರುವುದು. ಧೃಷ್ಟದ್ಯುಮ್ನನನ್ನು ಮುಂದುಮಾಡಿಕೊಂಡು ಧನುರ್ಧಾರಿಗಳಾದ ಭೀಮಾರ್ಜುನ ಪ್ರಭೃತಿಗಳು ಆ ಚತುರಂಗ ಬಲವನ್ನು ರಕ್ಷಿಸುತ್ತಿರುವರು. ಜಯಿಸಲು ದುರ್ಘಟವಾದೀ ಅದ್ಭುತ ಸೈನ್ಯವನ್ನು ಎಷ್ಟು ದಿವಸದಲ್ಲಿ ನೀವು ನಾಶಮಾಡಬಲ್ಲಿರಿ '' ಎಂದು ಕೇಳಿದನು.

ಅದಕ್ಕೆ ಭೀಷ್ಮನು—''ನನ್ನ ಮಹಾಸ್ತ್ರಗಳು ಒಂದೊಂದು ಸಾರಿಗೆ ಶತಸಹಸ್ರ ಭಟರನ್ನು ಕೊಲ್ಲುವುವು. ನಾನು ಸಮರದಲ್ಲಿ ನಿಂತು ಅವುಗಳನ್ನು ಪ್ರಯೋಗ ಮಾಡಿದರೆ ಒಂದು ತಿಂಗಳಲ್ಲಿ ಆ ಮಹಾಸೈನ್ಯವನ್ನು ಇಲ್ಲವೆನಿಸಿಬಿಡುವೆನು'' ಎಂದನು.

ಆ ಬಳಿಕ ದ್ರೋಣಾಚಾರ್ಯನು—"ಮಹಾಬಾಹುವೇ! ನಾನು ಮುದುಕ, ಶಕ್ತಿಯಿಲ್ಲದವನು, ಭೀಷ್ಮನಿಗೆ ಹೇಗೋ ಹಾಗೆ ನನಗೂ ಒಂದು ತಿಂಗಳು ಬೇಕಾಗುವುದು. ಇಷ್ಟೇ ನನ್ನ ಪರಮ ಶಕ್ತಿ" ಎಂದನು.

ಕರ್ಣನು ತನ್ನ ಬಾರಿ ಬರುತ್ತಲೆ, ಐದು ರಾತ್ರಿಗಳಲ್ಲಿ ಪಾಂಡವ ಬಲವನ್ನು ಅಪ್ಪಳಿಸಿ ಕೆಡಹುವೆನೆಂದು ಪ್ರತಿಜ್ಞೆಮಾಡಿದನು.

ಅವನ ಪ್ರತಿಜ್ಞೆಯನ್ನು ಕೇಳುತ್ತಲೆ ಭೀಷ್ಮನು ಗಟ್ಟಿಯಾಗಿ ನಕ್ಕು—"ನೀನು ಅಂತಹ ಶೂರನೇ ಸರಿ! ಪಾರ್ಥನು ಧನುರ್ಬಾಣ ಗಳನ್ನೂ ಶಂಖವನ್ನೂ ಹಿಡಿದು ವಾಸುದೇವನ ಸಹಿತವಾಗಿ ರಥದಲ್ಲಿ ಕುಳಿತು ರಣರಂಗಕ್ಕೆ ಬಾರದಿರುವ ವರೆಗೂ ನೀನು ಹಾಗೆಯೇ ತಿಳಿದು ಕೊಂಡಿರು. ಅಲ್ಲಿಯ ವರೆಗೆ ನಿನ್ನ ಇಷ್ಟಬಂದಂತೆಲ್ಲ ಹೇಳಿಕೊ" ಎಂದನು.

ಅದೇ ರೀತಿ ಯುಧಿಷ್ಠಿರನು ಭೀಷ್ಮಾದಿಗಳು ತಂತಮ್ಮ ಶಕ್ತಿ ಯನ್ನು ಪ್ರಕಾಶಗೊಳಿಸಿದುದನ್ನು ಚಾರರ ಮುಖದಿಂದ ಕೇಳಿ, ಶತ್ರು ಗಳನ್ನು ನಾಶಮಾಡುವುದಕ್ಕೆ ನಿನಗೆಷ್ಟು ಕಾಲ ಬೇಕೆಂದು ಅರ್ಜುನ ನನ್ನು ಪ್ರಶ್ನೆಮಾಡಲು, ಅವನು ಕೃಷ್ಣನನ್ನು ನೋಡುತ್ತ—"ಅವ ರೆಲ್ಲರೂ ಮಹಾತ್ಮರು, ಕೃತಾಸ್ತ್ರರು, ಯುದ್ಧನಿಪುಣರು, ನಮ್ಮನ್ನು ಹನನಮಾಡಲಾಪರು, ಸಂದೇಹವಿಲ್ಲ. ಆದರೂ ಕಳವಳಪಡಬೇಡ. ನಾನು ವಾಸುದೇವನ ಬೆಂಬಲವುಳ್ಳವನು, ಮೂರು ಲೋಕಗಳನ್ನೂ ನಿಮಿಷಮಾತ್ರದಲ್ಲಿ ನಾಶಮಾಡಲಾಪೆನು. ಇದಲ್ಲದೆ, ನನ್ನ ದಿವ್ಯಾ ಸ್ತ್ರವೂ ಇದೆ. ಆದರೆ ಸಾಮಾನ್ಯರ ಮೇಲೆ ದಿವ್ಯಾಸ್ತ್ರವನ್ನು ಬಿಡು ವುದು ಯುಕ್ತವಲ್ಲ. ನೀನು ನ್ಯಾಯಮಾರ್ಗದಲ್ಲಿಯೇ ಹೋಗಿ ಹಗೆಯನ್ನು ಗೆಲ್ಲತಕ್ಕವನು. ನಿನಗೆ ಅಸ್ತ್ರವಿದ್ವಾಂಸರೂ ಯುದ್ಧಾ ಕಾಂಕ್ಷಿಗಳೂ ಆದೀ ವೀರರ ಸಾಹಾಯ್ಯವಿರುವುದು. ಇದರ ಮೇಲೆ ನೀನು ಸ್ವಯಂ ಸಮರ್ಥನು. ಹೀಗಿರುವಲ್ಲಿ ಭಯವೇನು" ಎಂದನು.

ಉಭಯ ಸೈನ್ಯಗಳೂ ಈ ಪ್ರಕಾರವಾದ ಸಂಭಾಷಣೆಯಲ್ಲಿ ಇರು ಳನ್ನು ಕಳೆದರು. ಪ್ರಭಾತವಾಯಿತು; ಆಕಾಶವು ನಿರ್ಮಲವಾ

ಗಿದ್ದಿತು. ರಾಜರೆಲ್ಲರೂ ಸ್ನಾನಾದಿ ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು ಬ್ರಾಹ್ಮಣರ ಆಶೀರ್ವಾದವನ್ನು ಕೈಕೊಂಡು ದುರ್ಯೋಧನನ ಪ್ರೇರಣೆ ಯಿಂದ ಸೇನಾಸಮೇತರಾಗಿ ರಣರಂಗಕ್ಕೆ ಹೊರಟರು. ಹಾಗೆಯೇ ಯುಧಿಷ್ಠಿರನೂ ತನ್ನ ಚತುರಂಗ ಬಲವನ್ನು ಧೃಷ್ಟದ್ಯುಮ್ನನ ಆಜ್ಞೆ ಗೊಳಪಡಿಸಿ ಯುದ್ಧರಂಗಕ್ಕೆ ಹೊರಡಿಸಿದನು.

ಇಂತು ಪಾಂಡವ ಕೌರವರು ಸೇನಾಸಮೇತರಾದ ತಂತಮ್ಮ ಮಿತ್ರರೊಡನೆ ಯುದ್ಧಕ್ಕೆ ಇದಿರಾಂತು ನಿಂತರು. ಭೀಷ್ಮಾಚಾರ್ಯನು ಸ್ವಪರಪಕ್ಷಗಳ ಸೇನಾ ನಾಯಕರನ್ನು ಕಲೆಯಹಾಕಿ ಸಮರ ಸಭೆ ಯನ್ನು ಮಾಡಿ ಉಭಯ ಪಕ್ಷದವರ ಅಭಿಪ್ರಾಯಗಳನ್ನೂ ಸಮ್ಮತಿ ಯನ್ನೂ ಕೊಂಡು ಯುದ್ಧ ನಿಯಮಗಳನ್ನು ಮಾಡಿದನು. ಉಭಯ ಪಕ್ಷದವರೂ ತಂತಮ್ಮ ಕಡೆಯ ಭಟರನ್ನು ಗುರುತುಹಿಡಿಯುವುದಕ್ಕಾಗಿ ಹಲವು ಸಂಜ್ಞೆಗಳನ್ನು ಕಲ್ಪಿಸಿಕೊಂಡರು.

ಆ ಬಳಿಕ ಸರ್ವ ಧರ್ಮವನ್ನೂ ಬಲ್ಲ ಭೀಷ್ಮನು ಯುದ್ಧಕ್ಕೆ ಅಣಿ ಯಾಗಿದ್ದ ರಾಜರೆಲ್ಲರನ್ನೂ ಕರೆದು—"ಕ್ಷತ್ರಿಯ ವೀರರೇ! ನಿಮಗೆ ಸ್ವರ್ಗಕ್ಕೆ ಹೋಗುವುದಕ್ಕೆ ಈಗ ದ್ವಾರವು ತೆರದಿದೆ. ಪುರಾತನ ಋಷಿಗಳು ನಿಮಗೀ ಶಾಶ್ವತ ಪಥವನ್ನು ತೋರಿಸಿರುವರು. ಶ್ರದ್ಧೆಯಿಂದ ಯುದ್ಧಮಾಡಿ ಸಂಭಾವಿತರೆನಿಸಿಕೊಳ್ಳಿರಿ. ಕ್ಷತ್ರಿಯರು ವ್ಯಾಧಿಯಿಂದ ಮನೆಯಲ್ಲಿ ಸಾಯುವುದು ಅಧರ್ಮವು, ಸಮರದಲ್ಲಿ ಮಡಿಯುವುದೇ ಕ್ಷತ್ರಿಯರ ಸನಾತನ ಧರ್ಮವು" ಎಂದನು. ಆ ಮಾತನ್ನು ಕೇಳಿ ಉತ್ಸಾಹಗೊಂಡು ರಾಜರು ತಂತಮ್ಮ ಸೈನ್ಯದೆಡೆಗೆ ಮರಳಿದರು.

ದುರ್ಯೋಧನನು ಪಾಂಡವರ ಸೇನಾವ್ಯೂಹವನ್ನೂ ಸೇನಾ ನಾಯಕರನ್ನೂ ನೋಡಿ ಎದೆಗುಂದಿದನು. ಅದನ್ನು ಕಂಡು ಕುರುಪಿತಾ ಮಹನು ಸಿಂಹನಾದವನ್ನು ಮಾಡಿ ಶಂಖವನ್ನೂದಿ ಅವನನ್ನು ಹರ್ಷ ಗೊಳಿಸಿದನು. ಒಡನೆಯೇ ಶಂಖ ಭೇರಿ ಮುಂತಾದ ವಾದ್ಯ ಧ್ವನಿಗಳು ಮೇಳೈಸಿ ಮೊಳಗಿದುವು. ಪಾಂಡವ ವೀರರೂ ತಂತಮ್ಮ ದಿವ್ಯ ಶಂಖ ಗಳನ್ನೂದಿದರು. ಆ ಘೋಷವು ದುರ್ಯೋಧನಾದಿಗಳ ಹೃದಯವನ್ನು ಭೇದಿಸಿ, ಭೂಮ್ಯಾಕಾಶವನ್ನು ಆವರಿಸಿತು.

ಬಾಣಗಳನ್ನು ಬಿಡುವ ಸಮಯಕ್ಕೆ ಅರ್ಜುನನು ಕೌರವರ ಸೈನ್ಯವನ್ನು ನೋಡಿ ಕರುಣೆಯಿಂದ ಕರಗಿ—"ಕೃಷ್ಣ! ಯುದ್ಧಕ್ಕೆ ಬಂದಿರುವ ನನ್ನ ಈ ಸ್ವಜನರನ್ನು ನೋಡಿದೊಡನೆಯೇ ನನ್ನ ಕೈಕಾಲುಗಳು ಉಡುಗಿಹೋದುವು; ಬಾಯೊಣಗುತ್ತಿದೆ, ಮೈ ಬೆವರುತ್ತಿದೆ; ಗಾಂಡೀವವು ತನಗೆ ತಾನೇ ಕೈಯಿಂದ ಕಳಚಿಕೊಳ್ಳುತ್ತಿದೆ, ಬುದ್ಧಿ ಭ್ರಮಿಸುತ್ತಿದೆ, ನಿಂತಿರಲಾರೆನು; ಅಪಶಕುನಗಳು ಕಾಣುತ್ತಿವೆ, ಯುದ್ಧದಲ್ಲಿ ಸ್ವಜನವನ್ನು ಕೊಲ್ಲುವುದರಿಂದ ನನಗೆ ಬರುವುದೇನು? ಕೃಷ್ಣ! ನನಗೆ ವಿಜಯವೂ ಬೇಡ, ರಾಜ್ಯವೂ ಬೇಡ, ಸುಖವೂ ಬೇಡ. ಯಾರಿಗೋಸ್ಕರ ರಾಜ್ಯವನ್ನೂ ಸುಖವನ್ನೂ ಬಯಸಬೇಕೋ ಅವರು ಧನವನ್ನೂ ಪ್ರಾಣವನ್ನೂ ತೊರೆಯಲು ಸಿದ್ಧರಾಗಿ ಯುದ್ಧಕ್ಕೆ ಬಂದಿರುವಲ್ಲಿ ನಮಗೆ ರಾಜ್ಯದಿಂದಾಗುವುದೇನು? ಭೋಗದಿಂದೇನು? ಪ್ರಾಣದಿಂದ ತಾನೆ ಏನು? ಅವರಾರು? ಬೇರೆ ಯಾರೂ ಅಲ್ಲ; ಆಚಾರ್ಯರು, ತಾತಂದಿರು, ಸೋದರಮಾವಂದಿರು, ಮಾವಂದಿರು, ಭಾವಮೈದುನರು, ಮಕ್ಕಳು, ಸಂಬಂಧಿಗಳು! ಅವರು ನನ್ನನ್ನು ಕೊಂದರೂ ಕೊಲ್ಲಲಿ. ತ್ರಿಲೋಕಾಧಿಪತ್ಯವು ಬಂದರೂ ನಾನು ಅವರನ್ನು ಕೊಲ್ಲೆನು. ಅವರಂತೂ ಲೋಭದಿಂದ ಬುದ್ಧಿಗೆಟ್ಟು ಕುಲಕ್ಷಯದಿಂದಾಗುವ ಕೇಡನ್ನೂ ಮಿತ್ರದ್ರೋಹದಿಂದ ಬರುವ ಪಾಪವನ್ನೂ ತಿಳಿಯಲರಿಯರು; ತಿಳಿದವರಾಗಿ ನಾವೇಕೆ ಆ ಪಾಪವನ್ನು ಮಾಡದಿರಬಾರದು? ಅದರಿಂದ ಜಾತಿಧರ್ಮ ಕುಲಧರ್ಮಗಳು ನಿರ್ಮೂಲವಾಗುವುವು. ರಾಜ್ಯಸುಖದಾಶೆಯಿಂದ ನಾನು ಅವರನ್ನೆಂದಿಗೂ ಕೊಲ್ಲೆನು. ಶಸ್ತ್ರಪಾಣಿಗಳಾದ ಧಾರ್ತರಾಷ್ಟ್ರರು ಅಶಸ್ತ್ರನಾದ ನನ್ನನ್ನು ಕೊಂದರೂ ನಾನು ಅವರಿಗೆ ಪ್ರತೀಕಾರಮಾಡೆನು" ಎಂದು ನುಡಿದು ತನ್ನ ಬಿಲ್ಲು ಬಾಣಗಳನ್ನೊಂದು ಕಡೆ ಹಾಕಿ ಶೋಕಾಕುಲನಾಗಿ ರಥದಲ್ಲಿ ಕುಳಿತನು.

ಕೃಷ್ಣನು ಅರ್ಜುನನ ವಿಷಾದವನ್ನು ನೋಡಿ—"ಅರ್ಜುನಾ! ಈ ವಿಷಮ ಕಾಲದಲ್ಲಿ ನೀನು ಹೀಗೆ ವಿಷಾದಪಡಬಹುದೆ? ನೀನಾಡುವ ಮಾತು ಕ್ಷತ್ರಿಯರಿಗೊಪ್ಪದು. ನೀನು ಕ್ಷತ್ರಿಯನಾಗಿ ಹುಟ್ಟಿ ಕ್ಷತ್ರಿಯ ಧರ್ಮವನ್ನು ಸಲಹುವುದೇ ನಿನ್ನ ಕರ್ತವ್ಯ. ಸ್ವಜನವಾಗಲಿ, ಮಿತ್ರ

ರಾಗಲಿ, ಹಿರಿಯರಾಗಲಿ, ಕಿರಿಯರಾಗಲಿ, ಯಾರು ಯುದ್ಧಕ್ಕೆ ಬರುವರೋ ಅವರ ಸಂಗಡ ನ್ಯಾಯವನ್ನು ಬಿಡದೆ ಯುದ್ಧಮಾಡುವುದು ಕ್ಷತ್ರಿಯ ಧರ್ಮ. ನೀನು ಕ್ಷತ್ರಿಯಕುಲ ಸಂಭೂತನು, ನಿನ್ನ ಧರ್ಮವನ್ನು ಉಪೇಕ್ಷಿಸಬೇಡ, ಗಾಂಡೀವವನ್ನು ಕೈಗೆ ತೆಗೆದುಕೊ, ಯುದ್ಧಕ್ಕೆ ನಡೆ, ಕೀರ್ತಿಯನ್ನು ಪಡೆ'' ಎಂದು ಉಪದೇಶಮಾಡಿ ಅರ್ಜುನನನ್ನು ಯುದ್ಧಕ್ಕೊಡಂಬಡಿಸಿದನು.

ಅರ್ಜುನನು ಮತ್ತೆ ಗಾಂಡೀವವನ್ನು ಹಿಡಿದನು. ಪಾಂಡವರೂ ಅವರ ಅನುಯಾಯಿಗಳೂ ಸಂತೋಷದಿಂದ ಶಂಖಧ್ವನಿಯನ್ನು ಮಾಡಿದರು. ಒಡನೆಯೇ ಯುಧಿಷ್ಠಿರನು ಕವಚವನ್ನೂ ಆಯುಧಗಳನ್ನೂ ಕಳೆದಿಟ್ಟು ರಥದಿಂದಿಳಿದು, ಕೈ ಜೋಡಿಸಿಕೊಂಡು ಪಾದಚಾರಿಯಾಗಿ ರಿಪುಸೇನಾಭಿಮುಖವಾಗಿ ಹೊರಟನು. ಅದನ್ನು ಕಂಡು ಅರ್ಜುನಾದಿಗಳು ಹೆದರಿ ಅವನ ಬೆನ್ನಹತ್ತಿ, ಶತ್ರುಸೈನ್ಯದ ಕಡೆಗೆ ನಿರಾಯುಧನಾಗಿ ಹೋಗಲೇಕೆಂದು ಕೇಳಿದರೂ ಮಾತನಾಡದೆ ಮುಂದು ಮುಂದಕ್ಕೆ ನಡೆಯುತ್ತ ತಮ್ಮಂದಿರೊಡನೆ ಭೀಷ್ಮನ ಬಳಿಗೆ ಹೋಗಿ ಅವನೆರಡು ಪಾದಗಳನ್ನೂ ತನ್ನೆರಡು ಕೈಗಳಿಂದ ಹಿಡಿದುಕೊಂಡು —''ದುರ್ಧರ್ಷನೇ ! ನಮಸ್ಕಾರ ಮಾಡುತ್ತೇನೆ. ನಿನ್ನ ಸಂಗಡ ನಾವು ಯುದ್ಧಮಾಡುವೆವು, ಅನುಜ್ಞೆಕೊಡು, ಆಶೀರ್ವಾದಮಾಡು '' ಎಂದು ಬೇಡಿದನು.

ಭೀಷ್ಮನಿಂತೆಂದನು:—''ನೀನು ಬಾರದೆಹೋಗಿದ್ದರೆ ನಿನಗೆ ಅಪಜಯವಾಗಲೆಂದು ಶಪಿಸುತ್ತಿದ್ದೆನು. ಮಗನೇ ! ನಾನು ಪ್ರೀತನಾದೆನು. ಯುದ್ಧಮಾಡು, ನಿನಗೆ ಜಯವಾಗಲಿ. ಯುಧಿಷ್ಠಿರ! ಪುರುಷನು ಅರ್ಥಕ್ಕೆ ದಾಸನು, ಅರ್ಥವು ಯಾರಿಗೂ ದಾಸನಲ್ಲ. ನಾನು ಕೌರವರಿಗೆ ಅರ್ಥಪಾಶದಿಂದ ಕಟ್ಟುಬಿದ್ದಿದ್ದೇನೆ. ನಿನ್ನ ಪರವಾಗಿ ಯುದ್ಧಮಾಡುವುದೊಂದು ಹೊರತು ನನ್ನಿಂದೇನಾಗಬೇಕು ಕೇಳು'' ಎಂದನು.

ಅದಕ್ಕೆ ಯುಧಿಷ್ಠಿರನು—''ಮಹಾಬಾಹುವೇ! ಕೌರವರ ಪರವಾಗಿಯೇ ಯುದ್ಧಮಾಡು, ಆದರೆ ನಿತ್ಯವೂ ನನ್ನ ಹಿತವನ್ನು ಕೋರು'' ಎಂದನು.

ಭೀಷ್ಮನು—"ನಾನೇನೊ ನಿನ್ನ ಶತ್ರುಗಳ ಪರವಾಗಿ ಯುದ್ಧ ಮಾಡಬೇಕಾಗಿದೆ; ಹೀಗಿರುವಲ್ಲಿ ನಾನು ನಿನಗೇನು ಸಾಹಾಯ್ಯವನ್ನು ಮಾಡಬಹುದು ಹೇಳು" ಎಂದು ಮತ್ತೆ ಕೇಳಿದನು.

ಯುಧಿಷ್ಠಿರನು—"ನೀನು ಅಪರಾಜಿತನು, ರಣದಲ್ಲಿ ನಿನ್ನನ್ನು ಗೆಲ್ಲುವ ಬಗೆ ಹೇಗೆ ಹೇಳು" ಎಂದನು.

ಭೀಷ್ಮನು—"ಕೌಂತೇಯ! ಸಾಕ್ಷಾತ್ ದೇವೇಂದ್ರನಾದರೂ ನನ್ನನ್ನು ಜಯಿಸಲಾರನು" ಎಂದನು.

ಯುಧಿಷ್ಠಿರನು—"ಹಾಗಾದರೆ, ನಿನಗೆ ಅಡ್ಡಬೀಳುತ್ತೇನೆ; ಯುದ್ಧದಲ್ಲಿ ಶತ್ರುಗಳು ನಿನ್ನನ್ನು ಕೊಲ್ಲುವ ಬಗೆ ಹೇಗೆ ಹೇಳು" ಎಂದನು.

ಭೀಷ್ಮನು—"ನನ್ನನ್ನು ಜಯಿಸತಕ್ಕವರನ್ನು ನಾನು ಕಾಣೆನು; ನನ್ನ ಮರಣ ಕಾಲವು ಇನ್ನೂ ಬಂದಿಲ್ಲ. ಇನ್ನೊಂದು ಸಾರಿ ಬಾ" ಎಂದನು.

ಯುಧಿಷ್ಠಿರನು ಭೀಷ್ಮನ ಮಾತನ್ನು ಶಿರಸಾವಹಿಸಿ ಮತ್ತೆ ಅಭಿವಂದಿಸಿ ಬಳಿಕ ದ್ರೋಣ ಕೃಪ ಶಲ್ಯರ ಅಡಿಗೆರಗಿ ಅವರ ಅನುಜ್ಞೆಯನ್ನೂ ಆಶೀರ್ವಾದವನ್ನೂ ಪಡೆದನು. ತರುವಾಯ ಅವನು ಕೌರವ ಸೈನ್ಯ ಮಧ್ಯದಲ್ಲಿ ನಿಂತು—"ಯಾರಾರು ನಮ್ಮನ್ನು ವರಿಸುವರೋ ಅವರನ್ನು ನಾವು ಸಖ್ಯನಿಮಿತ್ತವಾಗಿ ವರಿಸುವೆವು" ಎಂದು ಗಟ್ಟಿಯಾಗಿ ಕೂಗಿ ಹೇಳಿದನು.

ಆಗ ಯುಯುತ್ಸುವೆಂಬವನು—"ಅನಘನೇ! ನನ್ನನ್ನು ವರಿಸುವುದಾದರೆ ನಿಮ್ಮ ಪರವಾಗಿ ನಾನು ಯುದ್ಧ ಮಾಡುವೆನು" ಎಂದನು.

ಧರ್ಮರಾಯನು—"ಬರುವವರೆಲ್ಲರೂ ಬನ್ನಿರಿ. ಯುಯುತ್ಸೂ! ಬಾ; ಅವಿವೇಕಿಗಳಾದ ನಿಮ್ಮಣ್ಣಂದಿರ ಮೇಲೆ ಯುದ್ಧಮಾಡೋಣ. ಮಹಾ ಬಾಹುವೇ! ಸರ್ವರ ಸಮ್ಮತಿಯಿಂದ ನಿನ್ನನ್ನು ವರಿಸುತ್ತೇನೆ. ನನಗಾಗಿ ಯುದ್ಧಮಾಡು. ಧೃತರಾಷ್ಟ್ರನ ಕುಲತಂತುವೂ ನೀನೇ,

ಅವನಿಗೆ ಪಿಂಡವನ್ನು ಕಾಣಿಸುವವನೂ ನೀನೇ ಆಗುವೆ, ಬಾ" ಎಂದನು.

ಯುಯುತ್ಸುವು ಕೌರವರನ್ನು ಪರಿತ್ಯಜಿಸಿ ಪಾಂಡುಪುತ್ರರನ್ನು ಸೇರಿದನು.

ಆ ಬಳಿಕ ಯುಧಿಷ್ಠಿರಾದಿ ಸರ್ವರೂ ಯುಯುತ್ಸುವನ್ನು ಕೂಡಿ ತಮ್ಮ ಸೈನ್ಯವನ್ನು ಹೊಕ್ಕರು. ಯುಧಿಷ್ಠಿರನು ಮತ್ತೆ ಹೊಂಬಣ್ಣದಿಂದ ಹೊಳೆಯುತ್ತಿರುವ ಕವಚವನ್ನು ತೊಟ್ಟು ಆಯುಧಪಾಣಿಯಾಗಿ ರಥವನ್ನೇರಿದನು. ಅಲ್ಲಿ ನೆರೆದಿದ್ದ ನೃಪರೆಲ್ಲರೂ ಪಾಂಡವರು ಮಾನ್ಯರಾದವರನ್ನು ಸನ್ಮಾನಿಸಿದುದನ್ನೂ ಅವರ ಜ್ಞಾತಿಗಳಿಗೆ ಸಕಾಲದಲ್ಲಿ ತೋರಿದ ಕೃಪಾ ಸೌಹೃದಾದಿಗಳನ್ನೂ ನೋಡಿ ಅವರ ಸುಗುಣಗಳನ್ನು ಕೊಂಡಾಡಿದರು.

ಯುದ್ಧವಾರಂಭವಾಯಿತು. ದುಃಶಾಸನನು ಭೀಷ್ಮನನ್ನು ಪ್ರಮುಖನನ್ನಾಗಿಟ್ಟುಕೊಂಡು ಸೇನೆಯೊಡನೆ ಹೊರಟನು. ಹಾಗೆಯೇ ಪಾಂಡವರು ಭೀಮಸೇನನನ್ನು ಪ್ರಮುಖನನ್ನಾಗಿಟ್ಟುಕೊಂಡು ಭೀಷ್ಮನ ಸಂಗಡ ಯುದ್ಧಮಾಡಲಿಚ್ಛೈಸಿ ಹರ್ಷದಿಂದ ಹೊರಟರು.

ಭೇರಿ ಮೃದಂಗ ಶಂಖಾದಿ ವಾದ್ಯಧ್ವನಿ, ಮತ್ತಭಟರ ಭೈರವ ರವ, ಕೋದಂಡಪಾಣಿಗಳ ಧನುಷ್ಟಂಕಾರ, ರಥಗಳ ಘರ್ಘರ ಶಬ್ದ, ಅಶ್ವಗಳ ಹೇಷಾ ರವ, ಹಸ್ತಿಗಳ ಬೃಂಹಿತ ಧ್ವನಿ—ಇವುಗಳಿಂದ ರಣರಂಗವು ಭೀಕರವಾಯಿತು. ರಥಚಕ್ರಗಳ ಹರಿದಾಟದಿಂದಲೂ, ಕುದುರೆಗಳ ಕಾಲ್ತುಳಿತದಿಂದಲೂ ದೂಳಿದ್ದು ದಿಕ್ಕುಗಳನ್ನು ಕವಿಯಿತು. ಆ ಹಗಲಗತ್ತಲೆಯಲ್ಲಿ ಉಭಯ ಪಕ್ಷಗಳ ಸೇನಾನಾಯಕರೂ, ರಥಕ್ಕೆ ರಥ, ಅಶ್ವಕ್ಕೆ ಅಶ್ವ, ಹಸ್ತಿಗೆ ಹಸ್ತಿ, ಪದಾತಿಗೆ ಪದಾತಿ—ಈ ಮೇರೆ ತಂತಮ್ಮ ಚತುರಂಗ ಬಲವನ್ನು ಇದಿರೊಡ್ಡಿ ಕದನ ಕೇಳಿಯನ್ನಾಡಿದರು. ಭೀಷ್ಮನ ಸೇನಾಪತ್ಯದಲ್ಲಿ ಹತ್ತು ದಿನ ಕಾಳೆಗವು ನಡೆಯಿತು. ಪ್ರತಿದಿನವೂ ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆಗೂ ವೀರಪ್ರಮುಖರು ಸಿಂಹ ಶಾರ್ದೂಲಗಳಂತೆ ದ್ವಂದ್ವಯುದ್ಧದಲ್ಲಿಯೂ,

ಸಾಗರದ ಮೇಲೆ ಸಾಗರವು ಉಕ್ಕಿಬಿದ್ದಂತೆ ಪಡೆಗಳು ಸಂಕುಲ ಯುದ್ಧ ದಲ್ಲಿಯೂ ಒಬ್ಬರ ಮೇಲೊಬ್ಬರು ಬಿದ್ದು ಕೈದಣಿಯ ಹೊಡೆದಾಡಿ, ಹೊತ್ತು ಬೀಳುತ್ತಲೆ ಬಳಲಿ ಬೆಂಡಾಗಿ ಶಿಬಿರವನ್ನು ಸೇರುತ್ತಿದ್ದರು.

ಮೊದಲನೆಯ ದಿವಸದ ಯುದ್ಧದಲ್ಲಿ ಪಾಂಡವರ ಸೇನೆ ಭಗ್ನವಾಯಿತು. ಆ ರಾತ್ರಿ ಯುಧಿಷ್ಠಿರನು ಸೋದರರನ್ನೊಡಗೊಂಡು ಕೃಷ್ಣನ ಬಳಿಗೆ ಹೋಗಿ—"ಕೃಷ್ಣ! ಭೀಷ್ಮನ ಶರಘಾತವನ್ನು ತಾಳಲಾರದೆ ನಮ್ಮ ಭಟರು ಓಡಿಹೋಗುತ್ತಿರುವರು. ಅವನ ಮುಂದೆ ನಾವಲ್ಲ. ನನಗೆ ದಿಕ್ಕು ತೋರದು. ಇಷ್ಟು ಮಂದಿ ನೃಪಾಲರನ್ನು ಕೊಲ್ಲಿಸಲು ನನಗಿಷ್ಟವಿಲ್ಲ. ನನ್ನ ತಮ್ಮಂದಿರು ಅಣ್ಣನ ಮೇಲಣ ಪ್ರೀತಿಯಿಂದ ರಾಜ್ಯಭ್ರಷ್ಟರಾಗಿ ಸುಖವನ್ನು ತೊರೆದು ಶರಪೀಡಿತರಾಗಿ ನವೆಯುತ್ತಿರುವರು. ಅರ್ಜುನನನ್ನು ಬಿಟ್ಟರೆ ಭೀಷ್ಮನ ಸಂಗಡ ಯುದ್ಧ ಮಾಡಬಲ್ಲವರಾರೂ ಇಲ್ಲ. ಆದರೆ ನಿನ್ನ ಸಖನಾದ ಅವನು ಭೀಷ್ಮ ದ್ರೋಣರು ನಮ್ಮ ಸೈನ್ಯವನ್ನು ಧ್ವಂಸಮಾಡುತ್ತಿದ್ದರೂ ನೋಡಿ ಕೊಂಡು ಉದಾಸೀನನಾಗಿರುವನು. ಭೀಮನೊಬ್ಬನು ಕೈಯಾರ ಯುದ್ಧಮಾಡುತ್ತಾನೆ. ಆದರೆ ನೂರು ವರ್ಷವಾದರೂ ಅವನಿಂದ ಹಗೆಗಳು ನಾಶವಾಗರು. ಮುಂದೇನು ಗತಿ? ಕೃಷ್ಣ!" ಎಂದನು.

ಅದನ್ನು ಕೇಳಿ ಕೃಷ್ಣನು—"ಭರತ ಶ್ರೇಷ್ಠನೇ! ಹೆದರಬೇಡ. ಧನುಷ್ಮಂತರೂ ಶೂರರೂ ಆದ ತಮ್ಮಂದಿರೂ ಮಹಾ ಬಲನಾದ ಧೃಷ್ಟದ್ಯುಮ್ನನೂ ನಾನೂ ನಿನ್ನ ಹಿತಚಿಂತಕರಾಗಿರುವಲ್ಲಿ ನೀನು ಚಿಂತಿಸುವುದೇಕೆ?" ಎಂದು ನುಡಿದು ಯುಧಿಷ್ಠಿರನನ್ನು ಧೈರ್ಯ ಗೊಳಿಸಿದನು.

ಬೆಳಗಾಯಿತು. ಉಭಯ ಪಕ್ಷದವರೂ ವ್ಯೂಹಪ್ರತಿವ್ಯೂಹ ಗಳನ್ನು ಕಟ್ಟಿ ಯುದ್ಧಕ್ಕೆ ನಿಂತರು. ದುರ್ಯೋಧನನು ತನ್ನ ಕಡೆಯ ಯೋಧರನ್ನು ಸಂಬೋಧಿಸಿ—"ನೀವೆಲ್ಲರೂ ರಣವೀರರು, ನೀವುಗ ಳೊಬ್ಬೊಬ್ಬರೇ ಪಾಂಡವರನ್ನೂ ಅವರ ಸೈನ್ಯವನ್ನೂ ಹುಟ್ಟುಗೆಡಿಸ ಲಾಪಿರಿ; ನೀವೆಲ್ಲರೂ ಕೂಡಿದರೆ ಏನುಮಾಡಲಾರಿರಿ? ಭೀಷ್ಮನಿಂದ ರಕ್ಷಿತ

ವಾಗಿರುವ ನಮ್ಮ ಸೈನ್ಯವು ಅಪರಿಮಿತವಾದುದು; ಭೀಮನಿಂದ ರಕ್ಷಿತವಾಗಿರುವ ಅವರ ಬಲವು ಪರಿಮಿತವಾದುದು. ನಮಗೇನು ಭಯ?'' ಎಂದು ತನ್ನ ಸೈನ್ಯವನ್ನು ಹುರಿಗೊಳಿಸಿದನು.

ಆ ದಿನ ಭೀಷ್ಮಾರ್ಜುನರೂ ದ್ರೋಣ ಧೃಷ್ಟದ್ಯುಮ್ನರೂ ಆದಿಯಾದ ಸಮ ಮಲ್ಲರು ಕಾದಿ ತಮ್ಮ ವಿಕ್ರಮವನ್ನು ತೋರಿದರು. ಅರ್ಜುನನು ಕೌರವ ಸೇನೆಯನ್ನು ಭಂಜಿಸಿದನು. ಭೀಷ್ಮನು ತನ್ನ ಸೇನೆಯು ಭಂಗಪಟ್ಟುದನ್ನು ನೋಡಿ, ''ನಮ್ಮ ಸೈನ್ಯವನ್ನು ಹೀಗೆ ಮುರಿಯಬಲ್ಲವರು ಧನಂಜಯನಲ್ಲದೆ ಬೇರೆ ಯಾರು? ಆ ಕಾಲಾಂತಕನನ್ನು ರಣದಲ್ಲಿ ಗೆಲ್ಲುವುದು ಯಾರಿಗೆ ತಾನೆ ಸಾಧ್ಯ'' ಎಂದನು.

ಮೂರನೆಯ ದಿನವೂ ಅರ್ಜುನನು ಕೌರವ ಸೈನ್ಯವನ್ನು ಬಾಣಗಳಿಂದ ಹೊಡೆದು ಕೆಡವಿದನು. ಬಹು ಜನರು ಮಡಿದರು. ಹತಶೇಷರು ಹೆದರಿ ಓಡಿದರು. ದುರ್ಯೋಧನನು ಧೈರ್ಯಗೆಟ್ಟು ಭೀಷ್ಮನ ಬಳಿಗೆ ಹೋಗಿ—''ತಾತ! ದ್ರೋಣ ಕೃಪಾಚಾರ್ಯರು ಮೊದಲಾದ ಅಸ್ತ್ರವಿದ್ಯಾ ವಿಶಾರದರೂ ನೀನೂ ಬದುಕಿರುವಾಗಲೇ ನಮ್ಮ ಭಟರು ದೆಸೆಗೆಟ್ಟು ಓಡಿಹೋಗುತ್ತಿದ್ದಾರೆ. ಇದು ನಮಗೆ ಮಾನವಲ್ಲ. ದಿಟವಾಗಿಯೂ ನೀನು ಪಾಂಡವರಿಗೆ ಅನುಗ್ರಹಮಾಡುತ್ತಿದ್ದೀಯೆ. ಹಾಗಲ್ಲದಿದ್ದರೆ ಈ ಕೊಲೆಯನ್ನು ನೋಡಿ ನೀನೆಂದಿಗೂ ಅವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ನೀನು ಪಾಂಡವರ ಮೇಲೆ ಯುದ್ಧಮಾಡೆನೆಂದು ಮೊದಲೇ ಹೇಳಿದ್ದರೆ, ಕರ್ಣನ ಸಂಗಡ ಆಲೋಚಿಸಿ ತಕ್ಕ ಹರುವನ್ನು ಮಾಡುತ್ತಿದ್ದೆನು. ನೀನು ನನ್ನನ್ನು ಕೈಬಿಡುವುದು ನ್ಯಾಯವಲ್ಲವೆನ್ನುವ ಪಕ್ಷಕ್ಕೆ ನಿನ್ನ ಪ್ರತಾಪಕ್ಕೆ ತಕ್ಕಂತೆ ಯುದ್ಧಮಾಡು'' ಎಂದು ಭೀಷ್ಮನನ್ನು ಹಂಗಿಸಿದನು.

ಅದನ್ನು ಕೇಳಿ ಭೀಷ್ಮನು—''ದುರ್ಯೋಧನ! ದೇವೇಂದ್ರನು ಕೂಡ ಪಾಂಡವರನ್ನು ಗೆಲ್ಲಲಾರನೆಂದು ನಿನಗೆ ಎಷ್ಟೋ ಬಾರಿ ಹೇಳಿದೆನು. ನನ್ನ ಮಾತನ್ನು ನೀನು ಸಡ್ಡೆಮಾಡಲಿಲ್ಲ. ನಾನು ಮುದುಕ; ಕೈಯಲ್ಲಾಗುವ ಮಟ್ಟಿಗೂ ಕಾದುವೆನು. ಈ ಹೊತ್ತು ಪಾಂಡವರನ್ನೂ ಅವರ ಸೈನ್ಯವನ್ನೂ ಮರ್ದನ ಮಾಡುವೆನು'' ಎಂದನು.

ಯುದ್ಧವು ಅತಿ ಭೀಷಣವಾಯಿತು. ಪಾಂಡವ ಸೈನ್ಯದಲ್ಲಿ ಹಾಹಾಕಾರವು ಹುಟ್ಟಿತು. ಭೀಷ್ಮಾರ್ಜುನರು ಒಬ್ಬರಮೇಲೊಬ್ಬರು ಶರವರ್ಷವನ್ನು ಕರೆದರು. ಭೀಷ್ಮನು ಮೊಮ್ಮಗನ ಕೈಚಳಕವನ್ನು ನೋಡಿ—"ಸಾಧು! ಪಾರ್ಥ! ಸಾಧು! ಈ ಮಹತ್ಕಾರ್ಯವು ನಿನಗೊಪ್ಪುವುದು. ನಾನು ಪ್ರೀತನಾದೆನು. ಸಂಕೋಚಪಡಬೇಡ, ಯುದ್ಧ ಮಾಡು" ಎಂದು ಅರ್ಜುನನನ್ನು ಕೊಂಡಾಡಿದನು.

ಆದರೂ, ಆ ವೃದ್ಧಮಲ್ಲನು ಪಾಂಡವ ಸೈನ್ಯವನ್ನು ಬಿಡದೆ ಬಾಣಗಳಿಂದ ಕತ್ತರಿಸಿದನು. ಹಲವರು ಸತ್ತರು, ಹಲವರು ರಥಯೋಧರು ಕೂಡ ಬೆದರಿ ಕವಚಗಳನ್ನು ಕಿತ್ತು ಈಡಾಡಿ ಪಲಾಯನ ಮಾಡಿದರು. ತಾತನು ಮೊಮ್ಮಗನೆಂದು ಅರ್ಜುನನನ್ನು ಬಿಡಲಿಲ್ಲ. ಅರ್ಜುನನು ಭೀಷ್ಮನ ಶರಘಾತದಿಂದ ನೊಂದರೂ, ತಾತನ ಮೇಲಣ ಗೌರವದಿಂದ ಮೃದುವಾಗಿ ಕಾದಿದನು. ಕುರುಸೇನೆಯು ಪಾಂಡವರ ಸೈನ್ಯವನ್ನು ಮುಸುಕಿ ಅಪ್ಪಳಿಸಿತು. ಆಗ ಕೃಷ್ಣನು ಚಕ್ರವನ್ನು ಹಿಡಿದು ಭೀಷ್ಮ ದ್ರೋಣಾದಿಗಳನ್ನು ಸಂಹರಿಸಿಬಿಡುವೆನೆಂದು ಭೀಷ್ಮನೆಡೆಗೆ ಪಾದಚಾರಿಯಾಗಿ ಹೊರಟನು.

ಕೃಷ್ಣನು ಚಕ್ರಪಾಣಿಯಾಗಿ ಬರುತ್ತಿರುವುದನ್ನು ನೋಡಿ ಭೀಷ್ಮನು ಉತ್ಸಾಹಗೊಂಡು—"ಬಾ, ದೇವೇಶ! ಸರ್ವ ಶರಣ್ಯನೇ! ನಮೋನಮಃ! ಚಕ್ರಪಾಣಿಯೇ! ನನ್ನನ್ನು ರಥದಿಂದ ಕೆಡವು. ಇಂದು ನಾನು ನಿನ್ನ ಚಕ್ರದಿಂದ ಹತನಾದರೆ ನನಗೆ ಇಹಪರಗಳೆರಡರಲ್ಲಿಯೂ ಶ್ರೇಯಸ್ಸಾಗುವುದು. ನೀನು ನನ್ನ ಬಳಿಗೆ ದಯೆಮಾಡಿ ನನ್ನನ್ನು ಮೂರುಲೋಕಗಳಲ್ಲಿಯೂ ಸಂಭಾವಿತನೆನಿಸಿದೆ, ಮಹಾನುಭಾವ!" ಎಂದನು.

ಭೀಷ್ಮನ ಮಾತ ಕೇಳುತ್ತಲೆ ಕೃಷ್ಣನು ಕೋಪಗೊಂಡು—"ಈಗಾಗುತಿರುವ ಕೊಲೆಗೆ ನೀನೇ ಮೂಲ. ನಿನ್ನ ಕಣ್ಣಮುಂದೆಯೇ ದುರ್ಯೋಧನನು ಹತನಾಗುವನು. ಧರ್ಮ ಮಾರ್ಗದಲ್ಲಿರುವ ಮಂತ್ರಿಯು ದ್ಯೂತಾಸಕ್ತನಾದ ರಾಜನನ್ನು ತಡೆಯ ಬೇಕು. ಅಷ್ಟೇ

ಅಲ್ಲ, ಧರ್ಮವನ್ನುಲ್ಲಂಘಿಸುವ ಕುಲಕಳಂಕನನ್ನು ಪರಿತ್ಯಜಿಸಬೇಕು'' ಎಂದು ಜರಿದನು.

ಆ ಮಾತಿಗೆ ಭೀಷ್ಮನು—''ಕೃಷ್ಣ! ವಿಧಿಯನ್ನು ಮೀರುವುದು ಯಾರಿಗೂ ಸಾಧ್ಯವಲ್ಲ. ನಾನು ದುರ್ಯೋಧನನನ್ನು ತ್ಯಜಿಸಿಬಿಡೆಂದು ಧೃತರಾಷ್ಟ್ರನಿಗೆ ಎಷ್ಟೋ ಬಗೆಯಲ್ಲಿ ಹೇಳಿದೆನು; ಅವನು ಕೇಳಲಿಲ್ಲ. ಯಾದವರು ಕುಲರಕ್ಷಣಾರ್ಥವಾಗಿ ಕಂಸನನ್ನು ತ್ಯಜಿಸಿದರೆಂದು ದೃಷ್ಟಾಂತವನ್ನು ಕೂಡ ಕೊಟ್ಟೆನು'' ಎಂದನು.

ಆ ವೇಳೆಗೆ ಪಾರ್ಥನು ರಥದಿಂದ ದುಮ್ಮಿಕ್ಕಿ ಓಡಿಹೋಗಿ ಕೃಷ್ಣನ ಎರಡು ಕಾಲುಗಳನ್ನೂ ಬಿಗಿಯಾಗಿ ಹಿಡಿದು—''ಕೃಷ್ಣ! ಕೋಪಮಾಡಬೇಡ. ನಮಗೆ ನೀನೇ ಗತಿ. ನಾನೇ ಹೋಗಿ ಕೌರವರನ್ನು ನಾಶಮಾಡಿಬಿಡುವೆನು. ನೀನು ಆ ಕೆಲಸಕ್ಕೆ ಹೋಗಬೇಡ'' ಎಂದು ಹೇಳಿ ಕೃಷ್ಣನನ್ನು ಅಡ್ಡಹಾಕಿ ಮತ್ತೆ ರಥವನ್ನೇರಿ ಭೀಷ್ಮ ದ್ರೋಣ ದುರ್ಯೋಧನಾದಿಗಳನ್ನು ಕ್ಷತವಿಕ್ಷತರನ್ನಾಗಿ ಮಾಡಿದನು. ಆ ವೇಳೆಗೆ ಸಂಜೆಯಾಗಲು ಎಲ್ಲರೂ ಶಿಬಿರಕ್ಕೆ ಹೊರಟರು.

ನಾಲ್ಕನೆಯ ದಿವಸ ಕುರುಪಾಂಡವರು ಸಮವಿಕ್ರಮದಿಂದ ಕಾದಿದರು. ಕೌರವರ ಕಡೆಯ ಪಟುಭಟರನೇಕರು ಹತರಾದರು. ಭೀಮನು ದುರ್ಯೋಧನನ ಎಂಟು ಮಂದಿ ತಮ್ಮಂದಿರನ್ನು ಕೊಚ್ಚಿ ಕೆಡವಿದನು.

ಸೋದರರು ಮಡಿದರೆಂದು ಶೋಕಸಂತಪ್ತನಾಗಿ ದುರ್ಯೋಧನನು ಪ್ರಾಜ್ಞನಾದ ಭೀಷ್ಮನ ಬಳಿಗೆ ಹೋಗಿ—''ತಾತ! ದ್ರೋಣ ಕೃಪ ಮೊದಲಾದ ನೀವುಗಳು ಮಹಾರಥರು, ಮಲ್ಲರು, ಸತ್ಕುಲ ಪ್ರಸೂತರು. ಪರಾಕ್ರಮದಲ್ಲಿ ನಿಮ್ಮ ಮುಂದೆ ಪಾಂಡವರಲ್ಲ. ಆದರೂ ಪಾಂಡವರು ಯಾರ ಬಲದಿಂದ ನಮ್ಮನ್ನು ಕ್ಷಣಕ್ಷಣಕ್ಕೂ ಜಯಿಸುತ್ತಿದ್ದಾರೋ ಕಾಣೆನು'' ಎಂದನು.

ಭೀಷ್ಮನು—''ರಾಯ! ಅವರು ಕೃಷ್ಣನ ಮರೆಹೊಕ್ಕಿರುವರು, ಕೃಷ್ಣನು ಅವರನ್ನು ಒಲಿದಿರುವನು. ಆದುದರಿಂದಲೇ ಲೋಕದಲ್ಲಿ

ಅವರನ್ನು ಜಯಿಸತಕ್ಕವರು ಹಿಂದಿರಲಿಲ್ಲ, ಇಂದಿಲ್ಲ, ಮುಂದಿರರು. ನೀನು ಪಾಂಡವರ ಸಂಗಡ ಸಂಧಿಮಾಡಿಕೊ; ಅದರಿಂದ ನಿನಗೊಬ್ಬ ನಿಗೇ ಅಲ್ಲ, ಲೋಕಕ್ಕೇ ಕ್ಷೇಮವಾಗುವುದು" ಎಂದುತ್ತರವನ್ನು ಕೊಟ್ಟನು.

ದುರ್ಯೋಧನನು ತಾತನಿಗೆ ನಮಸ್ಕಾರಮಾಡಿ ಶಯನಕ್ಕೆ ತೆರಳಿದನು.

ಬೆಳಗಾಯಿತು. ರಣಭೇರಿ ಮೊಳಗಿತು. ಎರಡು ಪಡೆಯವರೂ ಸಂಜೆಯ ವರೆಗೂ ಹೋರಾಡಿ ಘಾಸಿಪಟ್ಟು, ಭಗ್ನಮನೋರಥರಾಗಿ ಇರುಳ ಕಳೆಯಲಿಕ್ಕೆ ಬಿಡಾರವನ್ನು ಹೊಕ್ಕರು.

ಕೌರವ ಭಟರು ಅಗಣಿತರಾದರೂ, ಭೈರವಮೂರ್ತಿಯನ್ನು ತಾಳಿ ಕಾದಿದರೂ, ವ್ಯೂಹರಚನೆಯಲ್ಲಿ ಯಾವ ಕೊರತೆಯಿಲ್ಲದಿದ್ದರೂ, ದುರ್ಯೋಧನನು ತನ್ನ ಸೈನ್ಯವು ಪೆಟ್ಟುತಿಂದು ಸೋತುದಲ್ಲದೆ, ತಾನೂ ಪೆಟ್ಟುತಿಂದು ಯಥಾಪ್ರಕಾರವಾಗಿ ಅಜ್ಜಯ್ಯನ ಹತ್ತಿರ ಹೋಗಿ—"ಪಾಂಡವರು ನಮ್ಮ ಸೈನ್ಯವನ್ನು ಬಡಿದು ಭಂಗಪಡಿಸಿದರು. ಭೀಮನು ಬಿಟ್ಟ ಬಾಣಗಳಿಂದ ನಾನೂ ಪೆಟ್ಟುತಿಂದೆನು. ಅವನ ಕೋಪಾಟೋಪವನ್ನು ನೋಡಿದ ಮಾತ್ರಕ್ಕೇ ನನಗೆ ಪ್ರಜ್ಞೆ ತಪ್ಪಿತು. ಈಗೀಗ ನಾನು ಚೇತರಿಸಿಕೊಳ್ಳುತ್ತಿದ್ದೇನೆ. ಸತ್ಯಸಂಧನೇ! ನಿನ್ನ ಅನುಗ್ರಹದಿಂದ ನನಗೆ ಜಯವಾಗಬೇಕೇ ಹೊರತು ಬೇರೆಯೇನು ಗತಿಯನ್ನೂ ಕಾಣೆನು" ಎಂದು ಮೊರೆಯಿಟ್ಟನು.

ಭೀಷ್ಮನು—"ನಿನಗೆ ಜಯವಾಗಲೆಂದೇ ನಾನು ನನ್ನ ಸಾಹಸ ವೆಲ್ಲವನ್ನೂ ವೆಚ್ಚಮಾಡುತ್ತಿದ್ದೇನೆ. ಆದರೆ ಪಾಂಡವರು ಅಸಹಾಯ ಶೂರರು, ಪ್ರಚಂಡರು, ಯಶಸ್ವಿಗಳು, ಅಸಂಖ್ಯೇಯರು. ಅವರು ನಿನ್ನ ಮೇಲೆ ವಿಷವನ್ನು ಕಾರುತ್ತಿದ್ದಾರೆ. ಉದ್ದಂಡರಾದಾ ನಿನ್ನ ವೈರಿಗಳನ್ನು ಹೇಗೆ ತಾನೆ ಗೆಲ್ಲಬಹುದು? ನಾನೆಂತೂ ಪ್ರಾಣದಾಸೆ ಯನ್ನು ಬಿಟ್ಟು ನಿನಗಾಗಿ ಯುದ್ಧ ಮಾಡುತ್ತೇನೆ. ನನ್ನಂತೆಯೇ ದ್ರೋಣಾದಿಗಳೂ ನಿನಗಾಗಿ ತಲೆ ತೆರುವುದಕ್ಕೆ ಸಿದ್ಧರಾಗಿರುವರು" ಎಂದನು.

ಏಳನೆಯ ದಿವಸದ ಯುದ್ಧವೂ ಪ್ರಹಾರದಲ್ಲಿಯೇ ಪರ್ಯವಸಾನ ವಾಯಿತು. ಎಂಟನೆಯ ದಿವಸ ಸೈನ್ಯಗಳೆರಡೂ ಮತ್ತೆ ಎದೆಯೊಡ್ಡಿ ರಣದಲ್ಲಿ ನಿಂತು ಅಸ್ತ್ರ ಶಸ್ತ್ರಗಳನ್ನು ಹಿಡಿದು ಬಡಿದಾಡಿದುವು. ಒಂದು ಕಡೆ ಭೀಷ್ಮ ದ್ರೋಣಾದಿ ಅಸಹಾಯ ಶೂರರೂ ಇನ್ನೊಂದು ಕಡೆ ಭೀಮಾರ್ಜುನಾದಿ ಕಡುಗಲಿಗಳೂ ಪರಬಲವನ್ನು ಧೂಳೀಪಟಲಮಾಡಿ ದರು. ಭೀಮನಿಂದ ದುರ್ಯೋಧನನ ಎಂಟು ಮಂದಿ ಸೋದರರು ಹತರಾದರು.

ದುರ್ಯೋಧನನು ಭ್ರಾತೃ ವಿಯೋಗದಿಂದ ಕಣ್ಣೆಟ್ಟು—"ಮಹಾ ಪ್ರಭುವೇ ! ಎಂಟು ಮಂದಿ ತಮ್ಮಂದಿರು ಪ್ರಾಣಬಿಟ್ಟರು. ಪಡೆಯು ಕ್ಷಣ ಕ್ಷಣಕ್ಕೂ ಸವೆಯುತ್ತಿದೆ. ನಮ್ಮ ಪಾಡನ್ನು ನೋಡಿ ನೋಡಿ ನೀನು ನಮ್ಮನ್ನು ಉಪೇಕ್ಷೆಮಾಡುತ್ತಿದ್ದೀಯೆ. ನಿನ್ನನ್ನು ನಂಬಿ ನಾನು ಕೆಟ್ಟೆನು. ಅಯ್ಯೋ ನನ್ನ ದುರ್ದೈವವೇ ! " ಎಂದು ಅಜ್ಜಯ್ಯನ ಮುಂದೆ ಗೋಳಿಟ್ಟನು.

ಆ ನಿಷ್ಠುರೋಕ್ತಿಗಳನ್ನು ಕೇಳಿ, ಕಣ್ಣೀರು ಸುರಿಸುತ್ತ ಭೀಷ್ಮನು—" ದುರ್ಯೋಧನ ! ಇದೆಲ್ಲವೂ ಮುಂಗಂಡುದೇ ಅಲ್ಲವೆ ? ಹೀಗೇ ಆಗುವುದೆಂದು ನಿನ್ನ ಆಪ್ತರೆಲ್ಲರೂ ಮೊರೆಯಿಡಲಿಲ್ಲವೆ ? ನಾನಾಗಲಿ ಆಚಾರ್ಯನಾಗಲಿ ಪಾಂಡವರ ಸಂಗಡ ಯುದ್ಧಮಾಡಿ ಬದುಕಿ ಬರುವೆವೆಂಬ ಆಸೆ ನನಗಿಲ್ಲ. ಭೀಮಸೇನನು ನಿಮ್ಮನ್ನು ಎಲ್ಲಿ ಕಂಡರಲ್ಲಿ ತೀರಿಸಿ ಬಿಡುವನು. ಇದು ಸತ್ಯ. ಸ್ವರ್ಗವೇ ಗತಿಯೆಂದು ದೃಢಮನಸ್ಸುಮಾಡಿ ಯುದ್ಧಮಾಡು. ಸುರಾಸುರರು ಕೂಡ ಪಾಂಡ ವರನ್ನು ಜಯಿಸಲಾರರು. ಇನ್ನು ಅವರಿಗೆ ನಾವೆಷ್ಟರವರು ? " ಎಂದೆಚ್ಚರಿಸಿದನು.

ಆ ವೇಳೆಗೆ ಮಧ್ಯಾಹ್ನವಾಯಿತು. ಜರ ಜರುತ್ತ ಸಂಗ್ರಾಮವು ಘನ ಘೋರತರವಾಯಿತು. ಸಂಜೆಯ ವೇಳೆಗೆ ಸೈನ್ಯಗಳೆರಡೂ ಪರ ಸ್ಪರ ಮರ್ದಿತವಾಗಿ ; ಭಗ್ನವಾಗಿ, ಭ್ರಾಂತವಾಗಿ ತಂತಮ್ಮ ಪಾಳೆಯಕ್ಕೆ ಹಿಂದಿರುಗಿದುವು.

ಆಯಿರುಳು ದುರ್ಯೋಧನನು ತನ್ನ ದಂಡು ನುಗ್ಗಾದುದನ್ನು ನೋಡಿ ಉತ್ಸಾಹ ಹೀನನಾಗಿ, ಶಕುನಿ ದುಃಶಾಸನಾದಿ ದುರ್ಮಂತ್ರಿಗಳನ್ನು ಕೂಡಿ—"ಕರ್ಣ! ಭೀಷ್ಮ ದ್ರೋಣ ಕೃಪಾದಿಗಳು ಪಾರ್ಥನ ಮೇಲೆ ಕೈಮಾಡರು. ನಮ್ಮ ಸೈನ್ಯವು ಕ್ಷೀಣವಾಗುತ್ತಿದೆ. ತಮ್ಮಂದಿರು ಮಡಿದರು. ಪಾಂಡವರ ಪೌರುಷವು ಅಖಂಡಿತವಾದುದು; ಅವರು ಸೋಲುವರಲ್ಲ. ಮುಂದೇನು ಗತಿ?" ಎಂದನು.

ಅದನ್ನು ಕೇಳುತ್ತಲೆ ಕರ್ಣನು—"ಭರತ ಶ್ರೇಷ್ಠನೇ! ಚಿಂತಿಸಬೇಡ; ನಾನಿದ್ದೇನೆ. ಭೀಷ್ಮನಿಗೆ ಪಾಂಡವರಲ್ಲಿ ಪಕ್ಷಪಾತ. ಅವನು ದಿನವೂ ಅವರಿಗೆ ಸಾಹಾಯ್ಯವನ್ನು ಮಾಡುತ್ತಿದ್ದಾನೆ. ಅಲ್ಲದೆ, ಅವನು ಅಹಂಕಾರಿ, ರಣಪ್ರಿಯನು. ಅವನು ಹೇಗೆ ತಾನೆ ಪಾಂಡವರನ್ನು ಸಂಹಾರ ಮಾಡುವನು? ಹೇಗೆ ತಾನೆ ಯುದ್ಧವನ್ನು ಕೊನೆಮುಟ್ಟಿಸುವನು? ಹೋಗು, ಸಂಭಾವಿತನಾದಾ ಮುದುಕನನ್ನು ರಣರಂಗವನ್ನು ಬಿಟ್ಟು ಬರಹೇಳು, ಬಿಲ್ಲುಬಾಣಗಳನ್ನು ಕೆಳಗೆ ಇಡಹೇಳು. ಭೀಷ್ಮನು ಅಸ್ತ್ರ ಶಸ್ತ್ರಗಳನ್ನು ಕೆಳಗಿಡಲಿ; ಪಾಂಡವರೂ ಅವರ ಬಳಗವೂ ಸತ್ತರೆಂದು ತಿಳಿ" ಎಂದನು.

ದುರ್ಯೋಧನನು ಪರಿವಾರ ಸಮೇತನಾಗಿ ಭೀಷ್ಮನ ನಿವಾಸಕ್ಕೆ ಹೋಗಿ ಅಭಿವಂದಿಸಿ ಕೈ ಜೋಡಿಸಿಕೊಂಡು ನಿಂತು ಕಣ್ಣೀರು ಸುರಿಸುತ್ತ ಗದ್ಗದ ಸ್ವರದಿಂದ—"ಶತ್ರುಸೂದನನೇ! ನಿನ್ನನ್ನು ನಚ್ಚಿ ನಾನು ಪಾಂಡವರ ಮೇಲೆ ಯುದ್ಧಕ್ಕೆ ತೊಡರಿದೆನು. ಪ್ರಭುವೇ! ನನ್ನಲ್ಲಿ ಕೃಪೆಯಿಟ್ಟು ಪಾಂಡವರನ್ನು ನಿಗ್ರಹಿಸು. ನೀನು ಅವರನ್ನು ನಿಗ್ರಹಿಸುವೆನೆಂದು ಹೇಳಿದೆ; ನಿನ್ನ ಮಾತನ್ನು ಸತ್ಯವೆನಿಸು. ಪಾಂಡವರ ಮೇಲಣ ಪ್ರೀತಿಯಿಂದಲೋ ಮಂದಭಾಗ್ಯನಾದ ನನ್ನ ಮೇಲಣ ಕೋಪದಿಂದಲೋ ನೀನು ಪಾಂಡವರನ್ನು ಉಳಿಸಬೇಕೆಂದಿರುವ ಪಕ್ಷಕ್ಕೆ ರಣಧೀರನಾದ ಕರ್ಣನು ಯುದ್ಧಮಾಡಲಿ; ಅನುಜ್ಞೆಯನ್ನು ಕೊಡು" ಎಂದು ಬೇಡಿದನು.

ವೃದ್ಧ ಭೀಷ್ಮನು ದುರ್ಯೋಧನನ ಕಟುಭಾಷೆಯನ್ನು ಕೇಳಿ ನೊಂದರೂ ಅಪ್ರಿಯವಾದ ಮಾತನ್ನೊಂದನ್ನೂ ಆಡದೆ ಬಹಳ ಹೊತ್ತು

ಯೋಚಿಸಿ ನಿಟ್ಟುಸಿರುಬಿಡುತ್ತ—"ದುರ್ಯೋಧನ! ನನ್ನನ್ನೇಕೆ ಇಂತಹ ವಾಕ್ಶಲ್ಯದಿಂದ ನೋಯಿಸುತ್ತೀಯೆ? ನನ್ನ ಕೈಯಲ್ಲಾದ ಮಟ್ಟಿಗೂ ನಿನಗೆ ಪ್ರಿಯವಾದುದನ್ನೇ ಮಾಡುತ್ತಿದ್ದೇನೆ; ನಿನ್ನ ನಿಮಿತ್ತವಾಗಿ ಪ್ರಾಣವನ್ನು ಬಿಡುವುದಕ್ಕೂ ಸಿದ್ಧನಾಗಿದ್ದೇನೆ. ಆದರೆ ಅರ್ಜುನನು ಶೂರನು, ಅಜೇಯನು ಎಂಬುದನ್ನು ನೀನು ಕಾಣೆಯಾ? ಅವನ ಮಿಕ್ಕ ಸಾಹಸ ಕಾರ್ಯಗಳೆಲ್ಲವೂ ಹೋಗಲಿ: ವಿರಾಟ ನಗರದಲ್ಲಿ ಅವನೊಬ್ಬನೇ ನಮ್ಮೆಲ್ಲರನ್ನೂ ಅಪ್ಪಳಿಸಲಿಲ್ಲವೇ? ಅವನು ಅಜೇಯನೆಂಬುದಕ್ಕೆ ಆ ನಿದರ್ಶನವೊಂದು ಸಾಲದೆ? ದ್ರೋಣಾಚಾರ್ಯನನ್ನೂ ನನ್ನನ್ನೂ ರಣದಲ್ಲಿ ಗೆದ್ದು ನಮ್ಮ ಕವಚಗಳನ್ನು ಕಿತ್ತುಕೊಳ್ಳಲಿಲ್ಲವೆ? ಆ ನಿದರ್ಶನವು ಸಾಲದೆ? ಗೋಗ್ರಹಣದಲ್ಲಿ ಧನುಷ್ಮಂತನಾದ ಅಶ್ವತ್ಥಾಮನನ್ನು ಸೋಲಿಸಲಿಲ್ಲವೆ? ಅದೂ ಹೋಗಲಿ; ಈಗ ಪೌರುಷವನ್ನು ಕೊಚ್ಚುತ್ತಿರುವ ಕರ್ಣನ ವಸ್ತ್ರವನ್ನು ಕಿತ್ತು ಉತ್ತರನಿಗೆ ಕೊಡಲಿಲ್ಲವೆ? ಇನ್ನೆಷ್ಟು ನಿದರ್ಶನಗಳು ಬೇಕು? ನೀನು ಅವಿವೇಕಿ; ಈ ಮಾತನ್ನಾಡಬಹುದು ಈ ಮಾತನ್ನಾಡಬಾರದು ಎಂಬುದನ್ನು ಯೋಚಿಸದೆಯೇ ಮಾತನ್ನಾಡುತ್ತೀಯೆ. ನೀನಾಗಿ ಬೇಕೆಂದು ಪಾಂಡವರನ್ನು ಕೆಣಕಿದೆ, ಅವರ ಕೂಡೆ ವೈರವನ್ನು ಕಟ್ಟಿಕೊಂಡೆ. ಈಗ ಅವರ ಸಂಗಡ ಯುದ್ಧ ಮಾಡು, ನಿನ್ನ ಪ್ರತಾಪವನ್ನು ತೋರಿಸು. ನಾನೆಂತೂ ಯಾರ ಮೇಲೆ ಬೇಕಾದರೂ ಯುದ್ಧಮಾಡುತ್ತೇನೆ. ಶಿಖಂಡಿಯ ಮೇಲೆ ಮಾತ್ರ ನನ್ನ ಬಾಣವನ್ನು ಬಿಟ್ಟು ಅದಕ್ಕೆ ಕಳಂಕವನ್ನು ತಾರೆನು. ಪಾಂಡವರು ನನ್ನನ್ನು ಕೊಂದರೆ ನನಗೆ ಯಮಪುರಿಯಾಗುವುದು, ನಾನು ಅವರನ್ನು ಕೊಂದರೆ ನಿನಗೆ ರಾಜ್ಯವಾಗುವುದು. ನಾನು ಶಿಖಂಡಿಯನ್ನು ಮಾತ್ರ ಕಣ್ಣೆತ್ತಿ ನೋಡೆನು" ಎಂದನು.

ಉದಯವಾಗುತ್ತಲೆ ಪಡೆಗಳೆರಡೂ ರಣಾಂಗಣದಲ್ಲಿ ಮೇಳೈಸಿ ಹೆಣಗಾಡತೊಡಗಿದುವು. ಭೀಷ್ಮನು ತಾನು ಹೇಳಿದಂತೆಯೇ ಪಾಂಡವರ ದಂಡನ್ನು ನುಚ್ಚುನುರಿ ಮಾಡಿದನು. ಅರ್ಜುನನು ಅರೆಮನಸ್ಸಿನಿಂದ ಕಾದುತ್ತಿರುವುದನ್ನೂ ಭೀಷ್ಮನು ಪಾಂಡವರ ಸೈನ್ಯವನ್ನು ಕೊಚ್ಚುತ್ತಿರುವುದನ್ನೂ ನೋಡಿ ಕೃಷ್ಣನು ರಥದಿಂದಿಳಿದು ತಾನೇ ಭೀಷ್ಮನನ್ನು

ಕೊಲ್ಲುವೆನೆಂದು ಮತ್ತೆ ಹೊರಟನು. ಆಗ ಅರ್ಜುನನು ತಾನು ಭೀಷ್ಮನನ್ನು ಕೊಂದು ಹಗೆಗಳೆಲ್ಲರನ್ನೂ ನಿಪಾತಮಾಡುವೆನೆಂದು ಆಣೆಯಿಟ್ಟುಕೊಂಡು ಕೃಷ್ಣನನ್ನು ತಡೆದನು.

ಒಡನೆಯೇ ಅರ್ಜುನನು ಕೌರವ ಸೈನ್ಯವನ್ನೂ, ಭೀಷ್ಮನು ಪಾಂಡವ ಸೈನ್ಯವನ್ನೂ ನಾಶಮಾಡುತ್ತ ಹೋದರು. ಸೂರ್ಯಾಸ್ತಮಯಕ್ಕೆ ಪಾಂಡವರ ಪಡೆಯು ಮುರಿದು ತಟ್ಟುಬಿದ್ದಿತು. ಅವರ ವೀರ ಪ್ರಮುಖರು ಕೈಗೆಟ್ಟರು. ದುರ್ಯೋಧನಾದಿಗಳು ತಮ್ಮ ಕೈ ಮೇಲಾಯಿತೆಂದು ಸಡಗರದಿಂದ ಭೀಷ್ಮನ ಅಡಿಗೆರಗಿ ಅವನನ್ನು ಪೂಜಿಸಿ ಸುಮ್ಮಾನದಿಂದ ಇರುಳನ್ನು ಕಳೆದರು.

ಯುಧಿಷ್ಠಿರನು ಭೀಷ್ಮನ ಅಖಂಡಿತ ಪ್ರತಾಪವನ್ನೂ ತನಗಾದ ಭಂಗವನ್ನೂ ನೆನೆನೆನೆದು ಮರುಗುತ್ತ ತನ್ನ ಮಿತ್ರ ಪ್ರಮುಖರೊಡಗೂಡಿ—"ಕೃಷ್ಣ! ಭೀಷ್ಮನು ಪ್ರಚಂಡನು. ಅವನನ್ನು ಗೆಲ್ಲುವುದು ಸಾಧ್ಯವಲ್ಲ. ಅವನಿಂದ ನಮ್ಮ ಸೈನ್ಯವು ಕ್ಷೀಣವಾಯಿತು. ಇನ್ನು ಯುದ್ಧವು ನನಗಿಷ್ಟವಿಲ್ಲ. ರಾಜ್ಯದಾಸೆಯಿಂದ ಪರಾಕ್ರಮವನ್ನು ತೋರಿಸುವುದಕ್ಕೆ ಹೋಗಿ ಕೆಟ್ಟೆನು. ನನ್ನ ದೆಸೆಯಿಂದ ನನ್ನ ತಮ್ಮಂದಿರು ರಾಜ್ಯಭ್ರಷ್ಟರಾದರು, ದ್ರೌಪದಿಯು ಪಾಡಂತೂ ಕೇಳಬೇಡ. ಹೀಗಿರುವಲ್ಲಿ, ನನಗೆ ವನವಾಸವೇ ಲೇಸೆನಿಸುವುದು. ನನಗೆ ಜೀವದ ಮೇಲೆ ಆಸೆಯಿಲ್ಲದೆ ಇಲ್ಲ. ಆದರೆ ಜೀವವನ್ನುಳಿಸಿಕೊಳ್ಳುವುದೇ ದುರ್ಲಭವಾಗಿದೆ. ಏನ ಮಾಡಲಿ? ನಾನೂ ನನ್ನ ತಮ್ಮಂದಿರೂ ನಿನ್ನ ಅನುಗ್ರಹಕ್ಕೆ ತಕ್ಕವರಾದ ಪಕ್ಷದಲ್ಲಿ ಧರ್ಮಕ್ಕೆ ವಿರೋಧವಿಲ್ಲದಂತೆ ನಾವೇನು ಮಾಡಬಹುದು ಹೇಳು" ಎಂದನು.

ಕೃಷ್ಣನು—"ಧರ್ಮಪುತ್ರ! ನೀನು ಮರುಗಬೇಡ. ಯಾರು ಪಾಂಡುಪುತ್ರರಿಗೆ ಆಗದವರೋ ಅವರು ನನಗೂ ಆಗದವರು. ನಿನ್ನವರೇ ನನ್ನವರು, ನನ್ನವರೇ ನಿನ್ನವರು. ನಿನ್ನ ತಮ್ಮ ಅರ್ಜುನನು ನನ್ನ ಸಖನು, ನನ್ನ ಸಂಬಂಧಿ, ನನ್ನ ಶಿಷ್ಯನು. ಅರ್ಜುನನಿಗೆಂದರೆ ನನ್ನ ಮೈಯ ಖಂಡವನ್ನು ಕತ್ತರಿಸಿ ಕೊಡುವೆನು; ನನಗೆಂದರೆ ಅವನು

ಪ್ರಾಣವನ್ನಾದರೂ ಕೊಡುವನು. ಅವನು ಹೇಳಲಿ, ನಾನು ಭೀಷ್ಮನನ್ನು ಇಲ್ಲವೆನಿಸುವೆನು ಅಥವಾ, ಅವನೇ ಆ ಕೆಲಸವನ್ನುಮಾಡಲಿ; ಅವನು ಮಾಡಲಾಪನು. ಭೀಷ್ಮನಿಗೆ ವಯಸ್ಸಾಯಿತು, ಕರ್ತವ್ಯಜ್ಞಾನವಿಲ್ಲ" ಎಂದನು.

ಯುಧಿಷ್ಠಿರನು—"ಕೃಷ್ಣ! ನೀನೊಬ್ಬನು ನನಗೆ ನಾಥನಾಗಿ ನನ್ನ ಪರವಾಗಿದ್ದರೆ ನನ್ನಿಷ್ಟಾರ್ಥವೆಲ್ಲವೂ ಕೂಡಿಬರುವುದು. ನೀನು ಯುದ್ಧ ಮಾಡೆನೆಂದು ಶಪಥಮಾಡಿದೆ. ನನ್ನ ಗೌರವಕ್ಕೋಸ್ಕರ ನಿನ್ನ ನುಡಿಯನ್ನು ಹುಸಿಯೆನಿಸೆನು. ಯುದ್ಧ ಮಾಡದೆಯೇ ನಮಗೆ ಸಾಹಾಯ್ಯ ಮಾಡು. ಭೀಷ್ಮನು ಕೂಡ ನಮ್ಮ ಪರವಾಗಿ ಯುದ್ಧಮಾಡನು; ಆದರೆ ಸಮಯದಲ್ಲಿ ಮಂತ್ರಿಯಂತೆ ಆಲೋಚನೆಯನ್ನು ಹೇಳುವೆನೆಂದು ಮಾತು ಕೊಟ್ಟಿರುವನು. ಅವನಲ್ಲಿ ಹೋಗೋಣ" ಎಂದನು.

ಯುಧಿಷ್ಠಿರಾದಿಗಳು ಕೃಷ್ಣನ ಸಮೇತರಾಗಿ ಹೋಗಿ ಶಸ್ತ್ರ ಕವಚಗಳನ್ನುಳಿದು ತಲೆಬಾಗಿ ಭೀಷ್ಮನನ್ನು ವಂದಿಸಲು, ಕುಶಲ ಪ್ರಶ್ನೆಗಳಾದ ಬಳಿಕ ಭೀಷ್ಮನು—"ನೀವು ಬಂದ ಕಾರ್ಯವೇನು? ಯುದ್ಧವೊಂದನ್ನು ಬಿಟ್ಟು ನಿಮ್ಮ ಹಿತಾರ್ಥವಾಗಿ ಎಂತಹ ದುಷ್ಕರ ಕಾರ್ಯವನ್ನಾದರೂ ಮಾಡುವೆನು. ನನ್ನಿಂದೇನಾಗಬೇಕು ಹೇಳಿ" ಎಂದು ಕೇಳಿದನು.

ಅದಕ್ಕೆ ಯುಧಿಷ್ಠಿರನು ಇಂತೆಂದನು:—"ಪ್ರಾಜ್ಞನೇ! ಅಪರ ಸೂರ್ಯನಂತಿರುವ ನಿನ್ನಿದಿರಿಗೆ ನಿಂತು ನಿನ್ನ ಪ್ರತಾಪವನ್ನು ಯಾರೂ ಸೈರಿಸಲಾರರು; ದೇವಾಸುರರೂ ನಿನ್ನನ್ನು ಗೆಲ್ಲಲರಿಯರು, ಕೊಲ್ಲಲರಿಯರು. ಇನ್ನು ನಾವೆಷ್ಟರವರು? ನಮ್ಮ ಸೈನ್ಯವು ಭಗ್ನವಾಯಿತು, ಭಟರು ಹತವೀರ್ಯರಾದರು. ಈ ಸ್ಥಿತಿಯಲ್ಲಿ ನಾವು ನಿನ್ನನ್ನು ಗೆಲ್ಲುವ ಬಗೆ ಹೇಗೆ ಹೇಳು, ಮಹಾಪ್ರಭುವೇ!"

ಭೀಷ್ಮನು—"ಕೌಂತೇಯಾ! ನೀನು ಹೇಳುವುದು ದಿಟ. ನನ್ನ ಪ್ರಾಣವಿರುವ ವರೆಗೂ ನಿಮಗೆ ಜಯವಾಗದು. ನನ್ನನ್ನು ಕೊಲ್ಲಿರಿ. ನಾನು ಅಜೇಯನೆಂಬುದನ್ನು ನೀವು ತಿಳಿದಿರುವುದು ನಿಮ್ಮ ಪುಣ್ಯವೇ

ಸರಿ. ನಾನೊಬ್ಬನು ಹತನಾದರೆ ಎಲ್ಲರೂ ಹತರಾಗುವರು. ನೀವು ನನ್ನನ್ನು ಕೊಲ್ಲದಿದ್ದರೆ ಸತ್ಯವಾಗಿಯೂ ಈ ಯುದ್ಧವು ಕೊನೆ ಮುಟ್ಟದು" ಎಂದು ನುಡಿದನು.

ಯುಧಿಷ್ಠಿರನು—"ಹಾಗಾದರೆ, ಕಾಲಾಂತಕನಾದ ನಿನ್ನನ್ನು ಕೊಲ್ಲುವುದು ತಾನೆ ಹೇಗೆ?" ಎಂದು ಕೇಳಿದನು.

ಭೀಷ್ಮನು—"ಮಹಾ ಬಾಹುವೇ! ನಾನು ದ್ರುಪದರಾಯನ ಮಗನಾದ ಶಿಖಂಡಿಯ ಸಂಗಡ ಯುದ್ಧ ಮಾಡೆನೆಂಬುದನ್ನು ನೀನು ಬಲ್ಲೆ. ಅರ್ಜುನನು ಅವನನ್ನು ಮುಂದಿಟ್ಟುಕೊಂಡು ನನ್ನ ಮೇಲೆ ಯುದ್ಧಮಾಡಲಿ, ನಿನಗೆ ಜಯವಾಗುವುದು. ಶಿಖಂಡಿಯು ನನ್ನ ಮೇಲೆ ಶರವರ್ಷವನ್ನು ಕರೆದರೂ ನಾನು ಅವನ ಮೇಲೆ ನನ್ನ ಬಾಣ ವನ್ನು ಬಿಡೆನು" ಎಂದನು.

ಆ ಬಳಿಕ ಎಲ್ಲರೂ ಕುರುಪಿತಾಮಹನ ಅಡಿಗೆರಗಿ ಅವರವರ ಬಿಡಾರಕ್ಕೆ ಹೊರಟರು. ಆದರೆ ಪರಲೋಕ ದೀಕ್ಷಿತನಾದ ತಾತನ ಮಾತನ್ನು ಕೇಳಿ ಅರ್ಜುನನು ದುಃಖ ಸಂತಪ್ತನಾಗಿ—"ಮಾಧವ! ನಾನು ಅಜ್ಜಯ್ಯನ ಸಂಗಡ ಹೇಗೆ ಯುದ್ಧಮಾಡಲಿ; ನನ್ನನ್ನು ಎತ್ತಿ, ಮುದ್ದಿಸಿ, ಸಾಕಿ, ಸಲಹಿ, ಬೆಳೆಯಿಸಿದವನನ್ನು ಹೇಗೆ ಕೊಲ್ಲಲಿ? ನಮ್ಮ ಸೈನ್ಯವೇ ನಾಶವಾಗಲಿ, ನನಗೆ ವಧೆಯೇ ಆಗಲಿ; ಆ ಪ್ರಾಜ್ಞನನ್ನು, ಆ ವೃದ್ಧನನ್ನು, ಆ ಧೀರೋದಾರನನ್ನು, ಆ ಕುರುಕುಲ ಶ್ರೇಷ್ಠನನ್ನು ನಾನು ಕೊಲ್ಲೆನು" ಎಂದನು.

ಆಗ ಕೃಷ್ಣನು–"ಭೀಷ್ಮನನ್ನು ಕೊಲ್ಲುವೆನೆಂದು ನೀನು ಪ್ರತಿಜ್ಞೆ ಮಾಡಿ ಈಗ ಒಲ್ಲೆನೆಂದರೆ ತೀರುವುದೆ? ಕ್ಷತ್ರಿಯನಾಗಿ ಹುಟ್ಟಿ ನೀನು ಹೀಗೆನ್ನಬಹುದೆ? ತನ್ನನ್ನು ಕೊಲ್ಲಬಂದ ಹಗೆಯನ್ನು ವೃದ್ಧ ನಾಗಲಿ, ಪೂಜ್ಯನಾಗಲಿ, ಗುಣಸಂಪನ್ನನಾಗಲಿ ತಾನು ಕೊಲ್ಲುವುದು ಧರ್ಮವೆಂದು ಶಾಸ್ತ್ರಜ್ಞರು ಹೇಳುವರು. ಅಸೂಯೆಪಡದೆ ಯುದ್ಧ ಮಾಡುವುದೂ, ಪ್ರಜೆಗಳನ್ನು ರಕ್ಷಿಸುವುದೂ, ಯಜ್ಞಮಾಡುವುದೂ ಕ್ಷತ್ರಿಯರಿಗೆ ಶಾಶ್ವತವಾದ ಧರ್ಮ. ಯುದ್ಧ ದುರ್ಮದನಾದ ಭೀಷ್ಮ

ನನ್ನು ರಥದಿಂದ ಕೆಡವು. ಅವನು ಸತ್ತಲ್ಲದೆ ಈ ಲೋಕಕ್ಷಯ ಕರವಾದ ಯುದ್ಧವು ನಿಲ್ಲದು; ನಿಮಗೆ ಜಯವಾಗದು'' ಎಂದುಪದೇಶ ಮಾಡಿ ಅರ್ಜುನನನ್ನು ಕಾಳಗಕ್ಕೆ ಹುರಿಮಾಡಿದನು.

ಕುರುವೃದ್ಧನ ಸೇನಾಧಿಪತ್ಯದ ಕಡೆಯ ದಿನವು ಉದಯ ವಾಯಿತು. ಭೇರಿ ಮೃದಂಗ ಶಂಖ ಧ್ವನಿ ಮೊಳಗಿತು. ರಣರಂಗವು ಕೋಲಾಹಲ ಪೂರ್ಣವಾಯಿತು. ಪಾಂಡವರು ಸೈನ್ಯವನ್ನು ಮೋಹ ರಿಸಿ ಶಿಖಂಡಿಯನ್ನು ಮುಂಕೊಂಡು ಯುದ್ಧಾಂಗಣವನ್ನು ಹೊಕ್ಕರು. ಹಾಗೆಯೇ, ಕೌರವರು ವ್ಯೂಹವನ್ನು ರಚಿಸಿ ತಮ್ಮ ಸೈನ್ಯದ ಅಗ್ರದಲ್ಲಿ ಮಹಾರಥ ಭೀಷ್ಮನನ್ನಿಟ್ಟುಕೊಂಡು ಪಾಂಡವರಿಗೆ ಮಾರಾಂತರು. ಒಡನೆಯೇ ಆ ಚಂಡವಿಕ್ರಮನು ಮಾರ್ಬಲವನ್ನು ನಾಶಮಾಡತೊಡ ಗಿದನು. ಇತ್ತ, ಅಪರಾಜಿತನಾದ ಸವ್ಯಸಾಚಿಯು ರಿಪುಬಲವು ತಲ್ಲಣಿಸು ವಂತೆ ಸಿಂಹನಾದವನ್ನು ಮಾಡಿ ಅಂಬಿನ ಮಳೆಗರೆದನು.

ದುರ್ಯೋಧನನು ಅರ್ಜುನನ ಬಲ್ಮೆಯನ್ನು ನೋಡಿ— ''ಗಾಂಗೇಯಾ! ನೋಡು, ಅರ್ಜುನನು ಕೃಷ್ಣನನ್ನು ಸಾರಥಿ ಯನ್ನಾಗಿಟ್ಟುಕೊಂಡು ಮೇಲೆ ಮೇಲೆ ಬಾಣಗಳನ್ನೆಸೆದು ನಮ್ಮ ಸೈನ್ಯವನ್ನು ಭಂಜಿಸುತ್ತಿದ್ದಾನೆ. ಭೀಮಸೇನ ಮುಖ್ಯರು ಕೂಡ ನಮ್ಮ ಸೈನ್ಯವನ್ನು ಸಂಹಾರ ಮಾಡುತ್ತಿದ್ದಾರೆ. ಭಟರು ಚದರುತ್ತಿರುವರು. ಈ ಮಹಾ ರಣದಲ್ಲಿ ನಮ್ಮ ಪಡೆಗೆ ನಿನ್ನಾಶ್ರಯವಲ್ಲದೆ ಬೇರೆಯೇನಿದೆ? ಪ್ರಭುವೇ!'' ಎಂದು ತನ್ನ ವಿಪದ್ಭೀತಿಯನ್ನು ತೋರಿಸಿದನು.

ಅದಕ್ಕೆ ಭೀಷ್ಮನು ಒಂದು ಮುಹೂರ್ತ ಆಲೋಚಿಸಿ—''ಮಹಾ ಬಲನೇ! ಕೇಳು. ನಾನು ದಿನಕ್ಕೆ ಹತ್ತುಸಾವಿರ ಕ್ಷತ್ರಿಯರನ್ನು ಕೊಲ್ಲದೆ ರಣದಿಂದ ಹಿಮ್ಮೆಟ್ಟೆನೆಂದು ಪ್ರತಿಜ್ಞೆ ಮಾಡಿದೆನು. ನಾನು ನುಡಿದಂತೆ ನಡೆದೆನು. ಈ ಹೊತ್ತಾದರೋ ನಾನು ಪಾಂಡವರನ್ನು ಸಂಪೂರ್ಣ ವಾಗಿ ತೀರಿಸಿಬಿಡುವೆನು; ಇಲ್ಲವೇ, ಅವರೇ ನನ್ನನ್ನು ತೀರಿಸಿಬಿಡುವರು. ಹೇಗೇ ಆಗಲಿ ಈ ಹೊತ್ತು ನಿನ್ನ ಋಣವನ್ನು—ನೀನು ಹಾಕಿದ ಕೂಳಿನ ಋಣವನ್ನು—ನನ್ನ ಒಡಲನ್ನಾದರೂ ತೆತ್ತು ಹರಿಸಿಬಿಡುವೆನು'' ಎಂದನು.

ಅಂದು ಭೀಷ್ಮನು ತನ್ನ ಪೌರುಷವೆಲ್ಲವನ್ನೂ ತೋರಿಸಿ ಪಾಂಡವರ ಸೈನ್ಯವನ್ನು ಮಥನಮಾಡಿ ಅವರ ಅಂತಃಸಾರವೆಲ್ಲವನ್ನೂ ಸೆಳೆದು ಹಾಕಿದನು. ಆ ವೀರನು ಬಿಟ್ಟ ಬಾಣಗಳಿಂದ, ರಣದಲ್ಲಿ ಹಿಮ್ಮೆಟ್ಟದೆ ಕಾದುತ್ತಿದ್ದ ಅಜ್ಞಾತ ನಾಮ ಗೋತ್ರರಾದ ಶೂರರನೇಕರು ಮಡಿದರು. ಭೀಷ್ಮನ ಉರವಣೆಯನ್ನು ನೋಡಿ ಅರ್ಜುನ ಶಿಖಂಡಿ ಧೃಷ್ಟದ್ಯುಮ್ನಾದಿ ಪಾಂಡವ ಪ್ರಮುಖರು ಅವನನ್ನು ಮುತ್ತಿದರು. ದುರ್ಯೋಧನಾದಿಗಳು ಭೀಷ್ಮನ ರಕ್ಷಣಾರ್ಥವಾಗಿ ಅವರನ್ನಿದಿರಿಸಿ ಹುರಿದುಂಬಿ ಹೆಣಗಿದರು. ಕೊಲೆಯು ಅಪರಿಮಿತವಾಯಿತು.

ಆ ಹತ್ತನೆಯ ದಿನ ಭೀಷ್ಮನು ಪಾಂಡವರ ಪಡೆಯನ್ನು ಸುಟ್ಟು ಬೇಸತ್ತು ಕೊಲೆಗೆ ಹೇಸಿ ತನ್ನ ಜೀವದ ಮೇಲಣ ಅಭಿಮಾನವನ್ನು ತೊರೆದು ಇನ್ನು ರಣದಲ್ಲಿ ಮಾನವ ಶ್ರೇಷ್ಠರನ್ನು ಕೊಲ್ಲೆನೆಂದು ನಿಶ್ಚಯಿಸಿ ಕ್ಷಿಪ್ರದಲ್ಲಿ ತಾನೇ ತನ್ನ ವಧೆಯನ್ನು ಬಯಸಿ ಸಮೀಪದಲ್ಲಿ ಕಾಣುತ್ತಿದ್ದ ಯುಧಿಷ್ಠಿರನನ್ನು ಕರೆದು ಇಂತೆಂದನು :—' ಮಹಾ ಪ್ರಾಜ್ಞನೇ ! ನೀನು ಧರ್ಮಸಾರವನ್ನು ಬಲ್ಲವನು. ಧರ್ಮ ಸಮ್ಮತವಾಗಿಯೂ ಸ್ವರ್ಗಕ್ಕೆ ಸೋಪಾನವಾಗಿಯೂ ಇರುವ ಒಂದುಪಾಯವನ್ನು ಹೇಳುತ್ತೇನೆ, ಕೇಳು. ಈ ನನ್ನ ದೇಹದಲ್ಲಿ ನನಗೆ ಬೇಸರವಾಗುತ್ತಿದೆ. ಅದನ್ನು ಕಾಪಾಡುವುದು ನನಗಿಷ್ಟವಿಲ್ಲ. ಸಹಸ್ರ ಸಹಸ್ರ ಪ್ರಾಣಿಗಳನ್ನು ಕೊಂದು ಬಹು ಕಾಲವನ್ನು ಕಳೆದೆನು ; ಇನ್ನು ಸಾಕು. ನೀನು ದಿಟವಾಗಿಯೂ ನನ್ನ ಹಿತವನ್ನು ಕೋರುವನಾದರೆ ಪಾರ್ಥನನ್ನು ಮುಂದುಮಾಡಿಕೊಂಡು ಸರ್ವ ಪ್ರಯತ್ನದಿಂದಲೂ ನನ್ನನ್ನು ಕೊಲ್ಲಿಸು. ''

ಯುಧಿಷ್ಠಿರನು ಪಿತಾಮಹನ ಮನೋಗತವನ್ನರಿತು—'' ಹೊರಡಿರಿ, ಹೊಯಿರಿ, ಕೆಡವಿರಿ, ಭೀಷ್ಮನನ್ನು ಗೆಲ್ಲಿರಿ '' ಎಂದು ತನ್ನ ಪಡೆಯನ್ನು ಹುರಿಗೊಳಿಸಿ, ಭೀಷ್ಮನ ಮೇಲೆ ಹಾಯಲು ಕೈಬೀಸಿದನು. ಅರ್ಜುನನೂ ಭೀಷ್ಮನೂ ಒಬ್ಬರಮೇಲೊಬ್ಬರು ಬಾಣಗಳನ್ನು ಎಸೆಯುತ್ತ, ಒಬ್ಬರ ಬಾಣಗಳನ್ನೊಬ್ಬರು ಖಂಡಿಸುತ್ತ ಬಿಡದೆ ಹೋರಾ

ಡಿದರು. ಶಿಖಂಡಿಯೂ ಭೀಷ್ಮನನ್ನು ಸಂತತವಾಗಿ ಬಾಣಗಳಿಂದ ಘಾತಿಸಿದನು. ಆದರೂ ಭೀಷ್ಮನು ಅವನನ್ನು ಕಣ್ಣೆತ್ತಿನೋಡಲಿಲ್ಲ, ಅವನ ಬಾಣಗಳನ್ನೂ ಲಕ್ಷ್ಯಮಾಡಲಿಲ್ಲ, ಅವನ ಮೇಲೆ ತನ್ನ ಬಾಣವನ್ನು ಪ್ರಯೋಗಮಾಡಲೂ ಇಲ್ಲ. ಅರ್ಜುನನ ಬಾಣಗಳು ಮಾತ್ರ ಬರಸಿಡಿಲು ಬಡಿದಂತೆ ಅವನ ವಕ್ಷಸ್ಸ್ಥಲವನ್ನು ಭೇದಿಸುತ್ತಿದ್ದುವು. ಪ್ರಾಣಾಂತಕವಾದ ಆ ವೀರನ ಬಾಣಗಳನ್ನು ಸ್ಪರ್ಶಮಾತ್ರದಿಂದ, "ಇದು ಶಿಖಂಡಿಯ ಬಾಣವಲ್ಲ, ಇದು ಶಿಖಂಡಿಯ ಬಾಣವಲ್ಲ" ಎಂದು ಹೇಳುತ್ತ ಆ ಮಲ್ಲನು ಶಿಖಂಡಿಯ ಬಾಣಗಳನ್ನು ತೃಣವಾಗೆಣಿಸಿ ಅರ್ಜುನನ ಮೇಲೆಯೇ ತನ್ನ ಪ್ರತಿ ಬಾಣಗಳನ್ನು ಬಿಡುತ್ತ ಹೋದನು. ಈ ಪ್ರಕಾರವಾಗಿ ಬಹಳ ಹೊತ್ತು ಕದನವು ನಡೆದ ಬಳಿಕ ಅರ್ಜುನನು ತನ್ನ ಪಡೆಯ ಕೂಡೆ ಕುರುಸೇನೆಯೊಳಗೆ ನುಗ್ಗಿದನು. ಅವನ ಬಾಣಹತಿಯನ್ನು ತಾಳಲಾರದೆ ಸೈನಿಕರು ಎಲ್ಲಿನವರಲ್ಲಿ ರಣರಂಗದಿಂದೋಡಿದರು. ಪಾಂಡವರ ಕಡೆಯ ಜೋದರು ಭೀಷ್ಮನ ಮೈಗಾವಲ ದಳವನ್ನು ಮುತ್ತಿ ಭಂಜಿಸಿದರು. ಅರ್ಜುನನು ತೀಕ್ಷ್ಣ ಶರಗಳಿಂದ ಭೀಷ್ಮನನ್ನು ಹೊಡೆದು ಮೈಯೆಲ್ಲ ಗಾಯಮಾಡಿದನು. ಒಡನೆಯೇ ಆ ವೃದ್ಧ ವೀರನು ನೊಂದು, ಕೈಕಾಲುಗಳು ಸೋತು ಬಳಲುತ್ತ, ಪೂರ್ವಕ್ಕೆ ತಲೆಯಿಟ್ಟು ಸೂರ್ಯಾಸ್ತಮಯವಾಗುವ ವೇಳೆಗೆ ದುರ್ಯೋಧನಾದಿ ಧೃತರಾಷ್ಟ್ರನ ಮಕ್ಕಳ ಕಣ್ಣೆದಿರಿಗೆ ರಥದಿಂದ ಬಿದ್ದನು. ಭೀಷ್ಮನು ವಿರಥನಾದರೂ ಅವನ ಮೈ ನೆಲವನ್ನು ಸೋಕಲಿಲ್ಲ. ಅವನನ್ನು ಮುಸುಕಿದ ಶರಜಾಲವೇ ಅವನಿಗೆ ಹಾಸಿಗೆಯಾಯಿತು. ಕುರುಪಿತಾಮಹನು ಉತ್ತರಾಯಣವನ್ನು ಇದಿರು ನೋಡುತ್ತ ಶರಶಯ್ಯೆಯಲ್ಲಿ ಪವಡಿಸಿದನು.

ತಮಗೆ ವಜ್ರಪಂಜರದಂತಿದ್ದ ತಾತನು ಕೆಳಗೆ ಬಿದ್ದುದನ್ನು ಕಂಡು ದುರ್ಯೋಧನಾದಿಗಳು ಭಯಭ್ರಾಂತರಾಗಿ ವಿಷಾದಮಗ್ನರಾದರು. ಇತ್ತಂಡದವರೂ ಕಾಳೆಗವನ್ನು ನಿಲ್ಲಿಸಿ ಅಸ್ತ್ರಶಸ್ತ್ರಗಳನ್ನಿಳಿದು ಭೀಷ್ಮನ ಹತ್ತಿರ ಬಂದು ಕಣ್ಣೀರ ಸುರಿಸುತ್ತ, ಅವನಡಿಗೆರಗಿ ಕೈಮುಗಿದು ನಿಂತರು.

ಭೀಷ್ಮನು ಕಣ್ದೆರದು ಪ್ರಸನ್ನ ವದನನಾಗಿ ಕುಶಲ ಪ್ರಶ್ನೆಮಾಡಿ, ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಕರೆದು—"ಮಕ್ಕಳಿರಾ! ನನ್ನ ತಲೆ ಜೋಲಾಡುತ್ತಿದೆ, ತಲೆಗಿಂಬು ಕೊಡುವಿರಾ?" ಎಂದನು.

ದುರ್ಯೋಧನನು ಮೆತ್ತನೆಯ ದಿಂಬುಗಳನ್ನು ತರಿಸಿದನು. ಅವುಗಳನ್ನು ನೋಡಿ ಭೀಷ್ಮನು ಮಂದಸ್ಮಿತನಾಗಿ—"ಮಗನೇ! ಈ ದಿಂಬುಗಳು ಈ ಹಾಸಿಗೆಗೆ ತಕ್ಕುವಲ್ಲ" ಎಂದು ಅರ್ಜುನನ ಕಡೆಗೆ ತಿರುಗಿದನು.

ಅರ್ಜುನನು ಆ ಸುವ್ರತನ ಇಂಗಿತವನ್ನರಿತು ಅಶ್ರುಪೂರ್ಣಲೋಚನನಾಗಿ, ಅಭಿವಾದನೆ ಮಾಡಿ—"ಆರ್ಯನೇ! ನಾನು ಅರ್ಜುನ, ದಾಸ, ನನ್ನಿಂದೇನಾಗಬೇಕು? ಅಪ್ಪಣೆಯಾಗಲಿ" ಎಂದನು.

ಭೀಷ್ಮನು—"ನನ್ನ ತಲೆಯು ದೆಸೆಗೇನೂ ಇಲ್ಲ. ನೀನು ಧನುರ್ಧರ ಶ್ರೇಷ್ಠನು, ಕ್ಷತ್ರಿಯ ಧರ್ಮವನ್ನು ಬಲ್ಲವನು; ನನ್ನ ತಲೆಯ ಕೆಳಕ್ಕೆ ಏನಾದರೂ ಕೊಡು" ಎಂದನು.

ಆ ಮಾತನ್ನು ಕೇಳಿದೊಡನೆಯೇ, ಅರ್ಜುನನು ಅಜ್ಜಯ್ಯನ ಪಾದಕ್ಕೆರಗಿ ಗಾಂಡೀವಕ್ಕೆ ಮೂರು ಬಾಣಗಳನ್ನು ತೊಡಿಸಿ ಆತನ ಹೆಡತಲೆಗೆ ಗುರಿಯಿಟ್ಟನು. ಅರ್ಜುನನ ಶರತ್ರಯವು ಭೀಷ್ಮನ ತಲೆಗಿಂಬಾಯಿತು. ಅರ್ಜುನನು ಹೆತ್ತಯ್ಯನ ಮನೋರಥವನ್ನು ಪೂರ್ಣಮಾಡಿದನು.

ಭೀಷ್ಮನು ಮೊಮ್ಮಗನ ವೀರೋಪಚಾರಗಳಿಂದ ಸುಪ್ರೀತನಾಗಿ—"ಮಗನೇ! ನನ್ನ ಹಾಸಿಗೆಗೆ ತಕ್ಕ ತಲೆದಿಂಬನ್ನು ಕೊಟ್ಟೆ. ರಣಾಂಗಣದಲ್ಲಿ ಇಂತಹ ಹಾಸಿಗೆಯಲ್ಲಿ ಇಂತಹ ದಿಂಬಿನ ಮೇಲೆ ತಲೆಯಿಟ್ಟು ಮಲಗಿಸುವುದೇ ಧರ್ಮನಿಷ್ಠರಾದ ಕ್ಷತ್ರಿಯರ ವ್ರತ" ಎಂದು ನುಡಿದನು.

ಆ ಬಳಿಕ ಆತನು ಕೆಲದಲ್ಲಿದ್ದ ನರಪತಿಗಳನ್ನು ಸಂಬೋಧಿಸಿ—"ರಾಜವರ್ಯರೇ! ವೀರ ಶ್ರೇಷ್ಠನಾದ ಧನಂಜಯನು ನನಗೆ ಎಂತಹ ದಿಂಬನ್ನು ಕೊಟ್ಟಿದ್ದಾನೆ, ನೋಡಿರಿ. ಸೂರ್ಯನು ಉತ್ತರಾಯಣಕ್ಕೆ

ಬರುವವರೆಗೂ ನಾನು ಈ ಹಾಸಿಗೆಯಲ್ಲಿ ಮಲಗಿದ್ದು ಆ ಬಳಿಕ ಈ ದೇಹವನ್ನು ಬಿಡುವೆನು. ಈಗಲಾದರೂ ವೈರವನ್ನು ತೊರೆದು ಯುದ್ಧವನ್ನು ಸಾಕುಮಾಡಿರಿ" ಎಂದು ಹೇಳಿ ಸುಮ್ಮನಾದನು.

ಆಗ ದುರ್ಯೋಧನನ ಆಜ್ಞಾನುಸಾರವಾಗಿ ಕುಶಲರಾದ ಚಿಕಿತ್ಸಕರು ಉಪಕರಣ ಸಹಿತರಾಗಿ ಭೀಷ್ಮನು ಮಲಗಿದ್ದಲ್ಲಿಗೆ ಬಂದರು.

ಭೀಷ್ಮನು ದುರ್ಯೋಧನನನ್ನು ಕುರಿತು—"ವತ್ಸ! ಚಿಕಿತ್ಸಕರಿಗೆ ತಕ್ಕ ಬಹುಮಾನವನ್ನು ಕೊಟ್ಟು ಕಳುಹಿಸು. ಈಗ ನಾನಿರುವ ಅವಸ್ಥೆಯಲ್ಲಿ ಅವರಿಂದಾಗಬೇಕಾದುದೇನೂ ಇಲ್ಲ. ನನಗಾಗಬೇಕಾದುದು ಕ್ಷತ್ರಿಯನಿಗೆ ತಕ್ಕ ಸದ್ಗತಿ. ಸಕಾಲದಲ್ಲಿ ಶರಸಹಿತವಾಗಿ ನನ್ನನ್ನು ದಹನಮಾಡಿರಿ" ಎಂದನು.

ದುರ್ಯೋಧನನು ತಕ್ಕ ಸಂಭಾವನೆಯನ್ನು ಕೊಟ್ಟು ವೈದ್ಯರನ್ನು ಬೀಳ್ಕೊಟ್ಟನು. ಭೀಷ್ಮನನ್ನು ಬಳಸಿ ನೆರೆದಿದ್ದ ಕ್ಷತ್ರಿಯ ವೀರರೆಲ್ಲರೂ ಅವನ ಅಮಾನುಷ ಕರ್ತವ್ಯ ನಿಷ್ಠೆಯನ್ನೂ ಮಹತ್ತರವಾದ ತೇಜಸ್ವಿತೆಯನ್ನೂ ನೋಡಿ ವಿಸ್ಮಯದಿಂದ ಸ್ತಬ್ಧರಾದರು. ಕೌರವ ಪಾಂಡವರು ಶರಶಯ್ಯಾಶಾಯಿಯಾದ ಭೀಷ್ಮನಿಗೆ ಮೂರು ಪ್ರದಕ್ಷಿಣೆ ಮಾಡಿ ಅವನ ಚರಣಯುಗಳಕ್ಕೆರಗಿ ಸುತ್ತಲೂ ಕಾವಲಿಟ್ಟು ಪಾಳೆಯಕ್ಕೆ ತೆರಳಿದರು.

ಕೃಷ್ಣನು ಸಕಾಲಕ್ಕೆ ಪಾಂಡವರ ಬಳಿಗೆ ಹೋಗಿ—"ಧರ್ಮಪುತ್ರ! ಭಾಗ್ಯವಶದಿಂದ ನಿನಗೆ ಜಯವಾಯಿತು. ಮನುಷ್ಯರಿಂದ ಅವಧ್ಯನಾದ ಆ ಮಹಾರಥನು ನಿನ್ನ ಭಾಗ್ಯವಶದಿಂದ ನಿನ್ನ ಕಣ್ಣು ಬಿದ್ದ ಮಾತ್ರಕ್ಕೇ ದಗ್ಧನಾದನು" ಎಂದನು.

ಯುಧಿಷ್ಠಿರನು—"ಕೃಷ್ಣ! ನಿನ್ನ ಪ್ರಸಾದದಿಂದ ವಿಜಯವಾಗುವುದು, ನಿನ್ನ ಕ್ರೋಧದಿಂದ ಪರಾಜಯವಾಗುವುದು; ನನ್ನದೇನಿದೆ? ಭಕ್ತರಿಗೆ ಅಭಯದಾತನಾದ ನೀನು ನಮಗೆ ಶರಣ್ಯ; ಯುದ್ಧದಲ್ಲಿ ನೀನು ಯಾರಿಗೆ ರಕ್ಷಕನೋ ಯಾರ ಹಿತಚಿಂತಕನೋ ಅವರಿಗೆ ಜಯವಾಗುವುದು ಆಶ್ಚರ್ಯವಲ್ಲ" ಎಂದನು.

ಪ್ರಭಾತವಾಗುತ್ತಲೆ ಎಲ್ಲರೂ ಭೀಷ್ಮನನ್ನು ನೋಡುವುದಕ್ಕೆ ಹೋದರು. ಭೀಷ್ಮನು ಮೊದಲಿನಂತೆಯೇ ಶರಶಯ್ಯೆಯಲ್ಲಿ ಮಲ

ಗಿದ್ದನು. ಅವನ ಮುಖಮಂಡಲದಲ್ಲಿ ವಿವರ್ಣದ ಸುಳಿವೇ ಇರಲಿಲ್ಲ, ಕಣ್ಣುಗಳಲ್ಲಿ ವಿಕಾರವಿರಲಿಲ್ಲ, ಹಣೆಯಲ್ಲಿ ಮನಃಕ್ಲೇಶದ ಚಿಹ್ನೆ ಇರಲಿಲ್ಲ. ಅವನು ಶರಶಯ್ಯೆಯಲ್ಲಿ ಶಾಂತ ಭಾವದಿಂದ ಕೃಷ್ಣ ಪರಮಾತ್ಮನ ಧ್ಯಾನದಲ್ಲಿದ್ದನು. ಅವನ ಪ್ರಶಾಂತ ಭಾವವನ್ನೂ ಧ್ಯಾನ ತತ್ಪರತೆಯನ್ನೂ ನೋಡಿ ಅಲ್ಲಿ ಬಂದಿದ್ದವರೆಲ್ಲರೂ ಆಶ್ಚರ್ಯಪಡುತ್ತ ಪಾದಕ್ಕೆ ಬಿದ್ದು ಅಂಜಲಿಬದ್ಧರಾಗಿ ನಿಂತರು.

ಆಗ ಭೀಷ್ಮನು ದಾಹವಾಗುವುದೆಂದನು. ಒಡನೆಯೇ ದುರ್ಯೋಧನಾದಿಗಳು ಭೀಷ್ಮನಿಗೆ ನಾನಾ ವಿಧ ಭಕ್ಷ್ಯ ಭೋಜ್ಯ ಪಾನೀಯಗಳನ್ನು ತರಿಸಿಟ್ಟರು.

ಭೀಷ್ಮನು ಆ ಪದಾರ್ಥಗಳನ್ನು ನೋಡಿ—"ಮಕ್ಕಳಿರಾ! ನಾನು ಶರತಲ್ಪಶಾಯಿಯಾಗಿರುವುದು ನಿಮಗೆ ಕಾಣುತ್ತಿಲ್ಲವೆ? ಇದು ಭೋಗಕ್ಕೆ ಸಮಯವಲ್ಲ, ಪ್ರಯಾಣದ ಸಮಯ" ಎಂದು ಅರ್ಜುನನನ್ನು ನೋಡಿ—"ವತ್ಸ! ನಿನ್ನ ಶರ ಜಾಲವು ನನ್ನನ್ನು ಆವರಿಸಿದೆ, ಮೈಯೆಲ್ಲವೂ ಉರಿಯುತ್ತಿದೆ, ಬಾಯೊಣಗುತ್ತಿದೆ; ಈ ಸಂಕಟದಲ್ಲಿ ನನಗೆ ಹಿತವಾದ ಪಾನೀಯವನ್ನು ತಂದು ಕೊಡುವುದಕ್ಕೆ ನೀನೊಬ್ಬನೇ ಸಮರ್ಥನು. ನನಗೆ ಒಳ್ಳೆಯ ತಣ್ಣೀರನ್ನು ತಂದುಕೊಟ್ಟು ದಾಹವನ್ನು ತೀರಿಸುವೆಯಾ?" ಎಂದನು.

ಆ ಕ್ಷಣವೇ ಅರ್ಜುನನು ಭೀಷ್ಮನಿಗೆ ನಮಸ್ಕಾರ ಮಾಡಿ ಗಾಂಡೀವಕ್ಕೆ ಬಾಣವನ್ನು ತೊಡಿಸಿ, ಭೀಷ್ಮನ ಬಲಮಗ್ಗುಲಲ್ಲಿ ನೆಲವನ್ನು ಭೇದಿಸಿದನು. ಬಾಣದಿಂದೊಡೆದ ಭೂಗರ್ಭದಿಂದ ತಣ್ಣನೆಯ ಸಿಹಿನೀರ ಧಾರೆ ಹೊರಟು ಸರಿಯಾಗಿ ಭೀಷ್ಮನ ಬಾಯಿಗೆ ಬೀಳಲಾರಂಭಿಸಿತು. ಎಲ್ಲರೂ ಅರ್ಜುನನ ಈ ವಿಚಿತ್ರ ಕೌಶಲವನ್ನು ನೋಡಿ ಬೆರಗಾದರು; ಅವರ ಶರೀರವು ರೋಮಾಂಚಿತವಾಯಿತು; ಗುಂಡಿಗೆ ಹಾರಿತು.

ಭೀಷ್ಮನು ಅಮೃತದಂತಿದ್ದ ಆ ಸುಶೀತಲ ಸ್ವಾದೋದಕವನ್ನು ಕುಡಿದು ಆಪ್ಯಾಯಿತನಾಗಿ—"ಮಗನೇ! ಲೋಕಾತೀತವಾದ ನಿನ್ನ ಸಾಮರ್ಥ್ಯದಿಂದ ನನ್ನ ಪ್ರಾಣ ಹೋಗುವ ಸಮಯದಲ್ಲಿ ತಣ್ಣನೆಯ ನೀರನ್ನು ಬರಿಸಿ ನನ್ನ ಬಾಯಾರಿಕೆಯನ್ನು ತೀರಿಸಿದೆ. ನಿನ್ನಂತಹ

ಧೀರೋದಾರನಿಗೆ ಇದೊಂದು ಮಹತ್ಕಾರ್ಯವಲ್ಲ. ನಾನು ನಿನ್ನ ಸಾಹಸವನ್ನು ಮೆಚ್ಚಿದೆನು. ವಾಸುದೇವನ ಸಾಹಾಯ್ಯದಿಂದ ನೀನಿನ್ನೂ ಮಹತ್ಕಾರ್ಯಗಳನ್ನು ಮಾಡುವೆ. ನೀನು ನರರಲ್ಲಿ ಶ್ರೇಷ್ಠನು, ಧನುರ್ಧಾರಿಗಳಲ್ಲಿ ನಿನಗೆ ಸಮಾನರಿಲ್ಲ. ನಿನಗೆ ಮಂಗಳವಾಗಲಿ! ದಾಯಾದ ಮತ್ಸರವನ್ನು ಬಿಟ್ಟು ಸಂಧಿಯನ್ನು ಮಾಡಿಕೊ ಎಂದು ನಾನು ದುರ್ಯೋಧನನಿಗೆ ಇನ್ನಿಲ್ಲದಷ್ಟು ಹೇಳಿದೆನು; ಧರ್ಮ ವತ್ಸಲನಾದ ವಿದುರನೂ ಆಚಾರ್ಯ ದ್ರೋಣನೂ ಶಾಸ್ತ್ರನಿಷ್ಠ ವಾಸುದೇವನೂ ಸುಶೀಲ ಸಂಜಯನೂ ಇವರೆಲ್ಲರೂ ಅದೇ ಸದುಪ ದೇಶವನ್ನು ಮಾಡಿದರು. ಆದರೂ ಆ ದುರಾತ್ಮನಿಗೆ ಬುದ್ಧಿ ಬರಲಿಲ್ಲ. ಅವನು ವಯೋವೃದ್ಧರೂ ಜ್ಞಾನವೃದ್ಧರೂ ಆದವರ ಸುಭಾಷಿತವನ್ನು ಉಪೇಕ್ಷೆಮಾಡಿ ಕಲಹಕ್ಕೆ ನಿಂತನು. ಕಡೆಗೆ ಭೀಮನಿಂದ ಅವನು ಹತನಾಗದೆ ಹೋಗನು'' ಎಂದನು.

ದುರ್ಯೋಧನನು ಭೀಷ್ಮನ ಮಾತನ್ನು ಕೇಳಿ ಖಿನ್ನನಾದನು. ಅವನನ್ನು ನೋಡಿ ಭೀಷ್ಮನು ಇಂತೆಂದು ನುಡಿದನು:—''ರಾಜನೇ! ಅವಧರಿಸು, ಕೋಪವನ್ನು ಬಿಡು. ಪಾರ್ಥನು ಅಮೃತದಂತಿರುವ ಸುಶೀತಲ ಜಲಧಾರೆಯನ್ನು ನಿರ್ಮಾಣ ಮಾಡಿದುದನ್ನು ನೋಡಿದೆಯಾ? ಲೋಕದಲ್ಲಿ ಇಂತಹ ಕಾರ್ಯವನ್ನು ಬೇರೆ ಯಾರೂ ಮಾಡಲಾರರು. ಆಗ್ನೇಯಾದಿ ಸಮಸ್ತವಾದ ಅಸ್ತ್ರಗಳನ್ನು ಈ ನರಲೋಕದಲ್ಲಿ ಧನಂ ಜಯನೊಬ್ಬನು ಬಲ್ಲನು, ದೇವಕೀ ಪುತ್ರ ಕೃಷ್ಣನೊಬ್ಬನು ಬಲ್ಲನು. ಈ ಪಾಂಡು ಪುತ್ರನನ್ನು ಜಯಿಸಲಳವಲ್ಲ. ಈ ಮಹಾತ್ಮನ ಕಾರ್ಯ ಗಳು ಅಮಾನುಷವಾದುವು. ಸತ್ಯ ಸಂಪನ್ನನೂ ಯುದ್ಧ ಭೂಷಣನೂ ಶೂರನೂ ಆದ ಅವನ ಸಂಗಡ ಸಂಧಿಮಾಡಿಕೊ. ಮಹಾಬಾಹು ಕೃಷ್ಣನು ಕೋಪಿಸಿಕೊಳ್ಳುವುದಕ್ಕೆ ಮುಂಚೆಯೇ ಶೂರರಾದ ಪಾರ್ಥರ ಸಂಗಡ ಸಂಧಿ ಮಾಡಿಕೊ. ಸಮರದಲ್ಲಿ ಹತಶೇಷರಾಗಿರುವ ನಿನ್ನ ಸೋದರರು ಜೀವಸಹಿತವಿರುವಾಗಲೆ ಸಂಧಿಮಾಡಿಕೊ. ಯುಧಿಷ್ಠಿ ರನು ಕೆಂಡಗಣ್ಣನಾಗಿ ನಿನ್ನ ಸೈನ್ಯವನ್ನು ನೋಡಿ ಸುಡುವುದಕ್ಕೆ ಮುಂಚೆಯೇ ಸಂಧಿಯಾಗಲಿ. ಭೀಮಸೇನ ನಕುಲ ಸಹದೇವರು

ನಿನ್ನ ಸೈನ್ಯವನ್ನು ನಾಶಮಾಡುವುದಕ್ಕೆ ಮುಂಚೆಯೇ ಪಾಂಡವ ವೀರರಿಗೂ ನಿನಗೂ ಸೌಹಾರ್ದವುಂಟಾಗುವುದು ಕ್ಷೇಮತರ. ಎಲೈ! ಅನಘನೇ! ನಾನಾಡುವ ಮಾತನ್ನು ಗ್ರಹಿಸು. ಅದರಿಂದ ನೀನು ಮಾತ್ರವೇ ಅಲ್ಲ, ನಿನ್ನ ಕುಲವೂ ಉಳಿಯುವುದು. ನನ್ನ ಅಂತವೇ ಯುದ್ಧಾಂತವಾಗಲಿ. ಇದುವರೆಗೂ ಅರ್ಜುನನು ಮಾಡಿದುದೇ ಸಾಕು; ಉಳಿದಿರುವವರಾದರೂ ಉಳಿಯಲಿ; ಮನಸ್ಸು ಮಾಡು. ಅರ್ಧ ರಾಜ್ಯ ವನ್ನು ಪಾಂಡವರಿಗೆ ಕೊಡು. ಯುಧಿಷ್ಠಿರನು ಇಂದ್ರಪ್ರಸ್ಥಕ್ಕೆ ಹೋಗಲಿ. ಕೌರವೇಂದ್ರ! ರಾಜನ್ಯರಲ್ಲಿ ನೀನು ನೀಚನೂ ಮನೆ ಮುರುಕನೂ ಎಂಬ ಅಪಖ್ಯಾತಿಗೆ ಗುರಿಯಾಗಬೇಡ. ಪಾಂಡವರೂ ನೀವೂ ಒಬ್ಬರನ್ನೊಬ್ಬರು ಪ್ರೀತಿಸುತ್ತ ಕಲೆತಿರಿ. ತಂದೆಯು ಮಗ ನನ್ನೂ ಸೋದರಳಿಯನು ಸೋದರಮಾವನನ್ನೂ ಸೇರಲಿ. ಸಕಾಲ ದಲ್ಲಿ ನಾನಾಡಿರುವ ಈ ಮಾತುಗಳನ್ನು ಮೋಹವಶದಿಂದ ಬುದ್ಧಿ ಶೂನ್ಯನಾಗಿ ಉಪೇಕ್ಷಿಸಿದರೆ ಮುಂದೆ ನೀನು ವ್ಯಥೆಪಡಬೇಕಾಗುವುದು. ಜೋಕೆ! ನಾನಾಡುವುದೆಲ್ಲವೂ ದಿಟ. ಈಗಲಾದರೂ ಯುದ್ಧವನ್ನು ಬಿಡು. ನನ್ನ ಸಾವೇ ಈ ಯುದ್ಧಕ್ಕೆ ಕಡೆಯಾಗಲಿ.''

ಇಂತೆಂದು ನುಡಿದು ಭೀಷ್ಮನು ಸುಮ್ಮನಾದನು. ಈ ಹಿತ ವಚನವು ದುರ್ಯೋಧನನಿಗೆ ರುಚಿಸಲಿಲ್ಲ. ರಾಜರೆಲ್ಲರೂ ತಂತಮ್ಮ ಆಲಯಕ್ಕೆ ಹೊರಟು ಹೋದರು.

ಭೀಷ್ಮನು ವಿರಥನಾದನೆಂದು ಕೇಳಿ, ಕರ್ಣನು ಹೆದರಿ ತ್ವರೆ ಯಾಗಿ ಬಂದು ಶರಶಯ್ಯೆಯಲ್ಲಿ ಕಣ್ಮುಚ್ಚಿ ಮಲಗಿದ್ದ ಆ ಮಹಾತ್ಮ ನನ್ನು ನೋಡಿ ಕಣ್ಣೀರ ಸುರಿಸುತ್ತ ಅವನ ಪಾದಕ್ಕೆ ಬಿದ್ದು— ''ಕುರು ಶ್ರೇಷ್ಠನೇ! ನಾನು ರಾಧೇಯ, ಯಾರನ್ನು ಕಂಡಾಗಲೆಲ್ಲ ನೀನು ದ್ವೇಷಿಸುತ್ತಿದ್ದೆಯೊ ಆ ರಾಧೇಯ'' ಎಂದನು.

ಹಾಗೆನ್ನುತ್ತಲೆ ಕುರುವೃದ್ಧನು ಮೆಲ್ಲಗೆ ಕಣ್ದೆರೆದು ತಂದೆಯು ಮಗನನ್ನು ಅಪ್ಪಿಕೊಳ್ಳುವಂತೆ ಒಂದು ಕೈಯಿಂದ ಅವನನ್ನು ಕಟ್ಟಿ ಕೊಂಡು ಪ್ರೀತಿಪೂರ್ವಕವಾಗಿಂತೆಂದನು:—''ಬಾರಯ್ಯ! ಬಾ! ನೀನು ನನಗೆ ಸಮುಗೈಯೆಂದು ನನ್ನ ಸಂಗಡ ಸ್ಪರ್ಧಿಸುತ್ತಿದ್ದವ

ನಲ್ಲವೆ? ನೀನು ನನ್ನ ಬಳಿ ಬಾರದೆಹೋಗಿದ್ದರೆ ನಿನಗೆ ಒಳ್ಳೆಯದಾಗು ತ್ತಿರಲಿಲ್ಲ. ಮಗನೇ! ನಿನ್ನಲ್ಲಿ ನನಗೆ ದಿಟವಾಗಿಯೂ ದ್ವೇಷವಿಲ್ಲ. ನಿನಗೆ ತೇಜೋವಧೆಯನ್ನು ಮಾಡಲೆಳಸಿ ನಿನ್ನ ಗರ್ವವನ್ನು ಮುರಿಯ ಬೇಕೆಂದು ನಾನು ಕಠಿನೋಕ್ತಿಯನ್ನಾಡಿದೆನು. ನೀನು ನಿಷ್ಕಾರಣ ವಾಗಿ ಪಾಂಡವರನ್ನು ದ್ವೇಷಿಸುತ್ತೀಯೆ. ನೀಚರ ಆಶ್ರಯದಲ್ಲಿರುತ್ತ ಮತ್ಸರದಿಂದ ಗುಣವಂತರನ್ನು ಕೂಡ ದ್ವೇಷಿಸುತ್ತೀಯೆ. ಆದುದ ರಿಂದಲೇ ನಾನು ಕೌರವರ ಮುಂದೆ ನಿನ್ನನ್ನು ಕುರಿತು ನಿಷ್ಠುರವಾದ ಮಾತುಗಳನ್ನಾಡಿದೆನು. ರಣದಲ್ಲಿ ಶತ್ರುಗಳಿಗೆ ದುಃಸಹವಾದ ನಿನ್ನ ವೀರ್ಯವನ್ನು ಬಲ್ಲೆನು. ಬ್ರಾಹ್ಮಣರಲ್ಲಿ ನಿನಗಿರುವ ಭಕ್ತಿ, ನಿನ್ನ ಶೌರ್ಯ, ನಿನ್ನ ದಾನಶೀಲತೆ—ಇವೆಲ್ಲವನ್ನೂ ಬಲ್ಲೆನು. ನಿನ್ನ ನಡೆವಳಿಕೆ ಯಿಂದ ಕುಲದಲ್ಲಿ ಕಲಹವು ಹುಟ್ಟುವುದೆಂದು ಅಂಜಿ ನಾನು ನಿನ್ನನ್ನು ಬಯ್ಯುತ್ತಿದ್ದೆನು. ಅಸ್ತ್ರವಿದ್ಯೆಯಲ್ಲಿ ನೀನು ಅರ್ಜುನನಿಗಾಗಲಿ ಕೃಷ್ಣ ನಿಗಾಗಲಿ ಕಡಿಮೆಯಲ್ಲ. ನೀನು ಧರ್ಮದಿಂದ ಯುದ್ಧಮಾಡುವವನು. ಹಿಂದೆ ನಿನ್ನ ಮೇಲೆ ನನಗಿದ್ದ ಕ್ರೋಧವು ಇಂದು ಹರಿಯಿತು. ಪುರುಷ ಪ್ರಯತ್ನದಿಂದ ವಿಧಿಯನ್ನು ವಿಾರಲು ಸಾಧ್ಯವಲ್ಲ. ಪಾಂಡವರು ನಿನ್ನ ಸೋದರರು; ನನ್ನ ಇಷ್ಟವನ್ನು ನೀನು ಪೂರೈಸುವವನಾದರೆ ಸೋದರ ರಾದ ಪಾಂಡವರೊಡಗೂಡು. ನನ್ನೊಂದಿಗೆ ನಿಮ್ಮ ವೈರವು ಹೋಗಲಿ. ಈ ಹೊತ್ತು ಭೂಪತಿಗಳ ಪೀಡೆಗಳೆಲ್ಲವೂ ತೊಲಗಿ ಹೋಗಲಿ."

ಕರ್ಣನು ಇಂತೆಂದನು :—"ಮಹಾ ಬಾಹುವೇ! ನೀನು ಹೇಳು ವುದೆಲ್ಲವೂ ಯಥಾರ್ಥವೇ. ಆದರೆ ಬಹು ಕಾಲ ದುರ್ಯೋಧನನ ಐಶ್ವರ್ಯವನ್ನು ಭೋಗಿಸಿ ಈಗ ಅದನ್ನು ಹುಸಿಯೆನಿಸೆನು. ವಸು ದೇವ ಸುತನು ಪಾಂಡವರ ಪಕ್ಷದಲ್ಲಿ ಹೇಗೆ ದೃಢವ್ರತನಾಗಿರುವನೋ ಹಾಗೆ ನಾನು ದುರ್ಯೋಧನನ ಪರವಾಗಿ ನಿಂತು ಧನವನ್ನೂ ತನು ವನ್ನೂ ಸತಿ ಸುತರನ್ನೂ ಯಶಸ್ಸನ್ನೂ—ಅಷ್ಟೇಕೆ? ಸರ್ವಸ್ವವನ್ನೂ ದುರ್ಯೋಧನನಿಗೋಸ್ಕರ ತ್ಯಜಿಸಲು ಸಿದ್ಧನಾಗಿರುವೆನು. ದುರ್ಯೋ ಧನನನ್ನು ಆಶ್ರಯಿಸಿ ನಾನು ನಿತ್ಯವೂ ಪಾಂಡವರ ಮನಸ್ಸನ್ನು ನೋಯಿಸುತ್ತಿದ್ದೆನು. ಯಾವುದು ಅನಿವಾರ್ಯವೋ ಅದು ಆಗಿಯೇ

ತೀರುವುದು. ಪಾಂಡುಪುತ್ರರನ್ನೂ ವಾಸುದೇವನನ್ನೂ ಯಾರೂ ಜಯಿಸಲಾರರು. ಇದನ್ನು ನಾನು ಬಲ್ಲೆನು. ಆದರೂ ಅವರ ಸಂಗಡ ನಾನು ಯುದ್ಧಮಾಡಿಯೇ ತೀರುವೆನು. ಪಾಂಡವರ ಮೇಲೆ ನನಗಿರುವ ಈ ದಾರುಣ ವೈರವನ್ನು ಬಿಡುವುದು ನನಗೆ ಶಕ್ಯವಲ್ಲ. ಸ್ವಧರ್ಮಕ್ಕನುಸಾರವಾಗಿ ಸಂತೋಷದಿಂದ ಧನಂಜಯನ ಸಂಗಡ ಯುದ್ಧಮಾಡುತ್ತೇನೆ. ತಾತ! ನನಗೆ ಸುಮುಖನಾಗು. ಯುದ್ಧಕ್ಕೆ ಅನುಜ್ಞೆಕೊಡು. ಕ್ರೋಧದಿಂದಲೋ ಚಪಲದಿಂದಲೋ ನಾನಾಡಿದ ದುರುಕ್ತಿಯನ್ನೂ ಮಾಡಿದ ಅಕೃತ್ಯವನ್ನೂ ಮನ್ನಿಸು.''

ಭೀಷ್ಮನು—''ಹಾಗಾದರೆ ಅನುಜ್ಞೆಯನ್ನು ಕೊಡುತ್ತೇನೆ. ಸ್ವರ್ಗಾಪೇಕ್ಷೆಯಿಂದ ಯುದ್ಧಮಾಡು. ಕೋಪ ತಾಪಗಳನ್ನು ಬಿಟ್ಟು ಸಜ್ಜನ ವರ್ತನವನ್ನು ಅನುಸರಿಸಿ ನಿರಹಂಕಾರಿಯಾಗಿ ಯುದ್ಧಮಾಡು. ಧನಂಜಯನು ನಿನಗೆ ವೀರ ಸ್ವರ್ಗವನ್ನು ಕಾಣಿಸುವನು. ಸಂಧಿಗಾಗಿ ನಾನು ಮಾಡಿದ ಪ್ರಯತ್ನವು ಸಾಗದೆ ಹೋಯಿತು; ಚಿಂತೆಯಿಲ್ಲ. ಎಲ್ಲಿ ಧರ್ಮವೋ ಅಲ್ಲಿ ಜಯವು ಸಿದ್ಧವಾಗಿರುವುದು'' ಎಂದನು.

ಕರ್ಣನು ಭೀಷ್ಮನ ಮನ್ನಣೆಯನ್ನೂ ಸುಮುಖತೆಯನ್ನೂ ಕೈಕೊಂಡು ಪ್ರಣಾಮವನ್ನು ಮಾಡಿ ರಥವನ್ನೇರಿ ದುರ್ಯೋಧನನ ಬಳಿಗೆ ಹಿಂದಿರುಗಿದನು.

ಭೀಷ್ಮನು ಹತ್ತು ದಿನಗಳು ಯುದ್ಧಮಾಡಿ ಅರ್ಜುನನ ಶರಘಾತದಿಂದ ವಿರಥನಾಗಿ ಉತ್ತರಾಯಣವನ್ನು ನಿರೀಕ್ಷಿಸುತ್ತ ಶರಶಯ್ಯೆಯಲ್ಲಿ ಮಲಗಿರಲು ಯುದ್ಧದ ಪಾಡಿಗೆ ಯುದ್ಧವು ನಡೆಯುತ್ತಿದ್ದಿತು. ಭೀಷ್ಮನ ತರುವಾಯ ದುರ್ಯೋಧನನು ದ್ರೋಣಾಚಾರ್ಯನಿಗೆ ವೀರಪಟ್ಟವನ್ನು ಕಟ್ಟಿದನು. ವೃದ್ಧನಾದ ಆಚಾರ್ಯನು ಧೃಷ್ಟದ್ಯುಮ್ನನ ಸಂಗಡ ಐದು ದಿನಗಳು ಯುದ್ಧಮಾಡಿ ಬಳಲಿ ಆ ದ್ರುಪದನಂದನನಿಂದ ಹತನಾದನು. ದ್ರೋಣಾಚಾರ್ಯನ ವಧೆಯು ದೆಸೆಯಿಂದ ಕುರುಸೇನೆಯು ನಿತ್ರಾಣಗೆಟ್ಟರೂ, ಜಯದಾಶೆಯು ದೂರವಾದರೂ, ದುರ್ಯೋಧನನು ಕಲಿ ಕರ್ಣನನ್ನು ಸೇನಾಪತಿಯನ್ನಾಗಿಟ್ಟು ಮತ್ತೆ ಕದನಕ್ಕೆ ಹೊರಟನು.

ಕರ್ಣಾರ್ಜುನರ ಭೀಷಣ ಯುದ್ಧವಾರಂಭವಾಯಿತು. ಅರ್ಜುನನು ದ್ರೋಣಾಚಾರ್ಯನ ಶಿಷ್ಯನಾದರೆ, ಕರ್ಣನು ದ್ರೋಣಾಚಾರ್ಯನ ಗುರುವಾದ ಪರಶುರಾಮನ ಶಿಷ್ಯ; ಅರ್ಜುನನ ಧನುಸ್ಸು ಗಾಂಡೀವವಾದರೆ, ಕರ್ಣನ ಧನುಸ್ಸು ಅದಕ್ಕಿಂತ ಉತ್ಕೃಷ್ಟವಾದ ವಿಜಯ; ಕೃಷ್ಣನು ಅರ್ಜುನನ ಸಾರಥಿಯಾದರೆ, ಮಹಾವೀರ ಶಲ್ಯನು ಕರ್ಣನ ಸಾರಥಿ. ಇಬ್ಬರೂ ಅಸ್ತ್ರವಿದ್ಯೆಯಲ್ಲಿ ಸಮಾನರು. ಇಬ್ಬರೂ ಒಬ್ಬರನ್ನೊಬ್ಬರು ಕೊಲ್ಲಲು ಬಹು ದಿನಗಳಿಂದ ಪ್ರತಿಜ್ಞೆ ಮಾಡಿದ್ದರು. ಅರ್ಜುನನು ಭೀಷ್ಮ ದ್ರೋಣರ ವಧೆಯ ವಿಷಯದಲ್ಲಿ ಉದ್ಯಮಶೀಲನಾಗಿರಲಿಲ್ಲ; ಕರ್ಣನನ್ನು ಕೊಲ್ಲುವ ವಿಷಯದಲ್ಲಿ ಮಾತ್ರ ದೃಢಯತ್ನ ಮಾಡಿದನು. ಕುಂತಿಯು ಕರ್ಣನಿಗೆ ಅವನ ಜನ್ಮ ವೃತ್ತಾಂತವನ್ನು ತಿಳಿಸಿ ತನ್ನ ಐವರ ಮಕ್ಕಳ ಪ್ರಾಣ ಭಿಕ್ಷೆಯನ್ನು ಕೇಳಿದಳು. ಕರ್ಣನು ತಾಯಿಗೆ ಯುಧಿಷ್ಠಿರ, ಭೀಮ, ನಕುಲ ಸಹದೇವರ ಪ್ರಾಣ ಭಿಕ್ಷೆಯನ್ನು ಕೊಟ್ಟು ಅರ್ಜುನನ ಪ್ರಾಣ ಭಿಕ್ಷೆಯನ್ನು ಕೊಡಲೊಪ್ಪದೆ, "ಅವನನ್ನು ಕೊಲ್ಲುವೆನು, ಇಲ್ಲವೆ, ಅವನಿಂದ ಕೊಲ್ಲಿಸಿಕೊಳ್ಳುವೆನು" ಎಂದು ಹೇಳಿಬಿಟ್ಟನು. ಕಡೆಗೆ, ಈ ಧನುರ್ಧರರಿಗೆ ನಡೆದ ಮಹಾಯುದ್ಧದಲ್ಲಿ ಅರ್ಜುನನ ಬಾಣದಿಂದ ಕರ್ಣನು ಹತನಾದನು. ಕರ್ಣನ ಮರಣಾನಂತರ ದುರ್ಯೋಧನನು ಶೋಕದಲ್ಲಿ ಮುಳುಗಿ ಎತ್ತನೋಡಿದರೂ ಆಶಾ ಲೇಶವನ್ನೂ ಕಾಣದೆಹೋದರೂ ಯುದ್ಧವನ್ನು ಮಾತ್ರ ಬಿಡಲಿಷ್ಟಪಡಲಿಲ್ಲ; ದೈವವು ಪ್ರಬಲವಾದುದೆಂದೆಣಿಸಿ ಪ್ರಭಾತವಾಗುತ್ತಲೆ ಯುದ್ಧಮಾಡುವುದೇ ಸರಿಯೆಂದು ನಿಶ್ಚಯಿಸಿ, ಶಲ್ಯನನ್ನು ಸೇನಾಪತಿಯನ್ನಾಗಿ ನೇಮಿಸಿ ಹತಶಿಷ್ಟವಾದ ಸೇನೆಯೊಡನೆ ಯುದ್ಧಕ್ಕೆ ಹೊರಟನು. ಆ ಯುದ್ಧದಲ್ಲಿ ಶಲ್ಯನು ಪಾಂಡವರ ಸೈನ್ಯವನ್ನು ಕೊಂದು ತನ್ನ ಸೈನ್ಯವನ್ನು ಕೊಲ್ಲಿಸಿಕೊಂಡು ಮಧ್ಯಾಹ್ನದಲ್ಲಿ ಯುಧಿಷ್ಠಿರನಿಂದ ಹತನಾದನು. ಒಡನೆಯೇ ದುರ್ಯೋಧನನು ಬಂಧುಗಳನ್ನು ನೀಗಿಕೊಂಡು ಶತ್ರು ಭಯದಿಂದ ರಣರಂಗವನ್ನು ಬಿಟ್ಟೋಡಿ ಹೋಗಿ ಒಂದು ಘೋರ ಸರೋವರವನ್ನು ಪ್ರವೇಶಮಾಡಿದನು. ಅಪರಾಹ್ಣದಲ್ಲಿ ಭೀಮಸೇನನು ಅವನನ್ನು ರೇಗಿಸಿ ಸರೋವರದಿಂದ

ಹೊರಗೆ ಬರುವಂತೆ ಮಾಡಿ ಗದಾಯುದ್ಧದಲ್ಲಿ ಅವನ ತೊಡೆಗಳನ್ನು ಸೀಳಿ ಕೆಡವಿದನು. ಆ ಸ್ಥಿತಿಯಲ್ಲಿ ದುರ್ಯೋಧನನು ಅಶ್ವತ್ಥಾಮನನ್ನು ಸೇನಾಪತಿಯನ್ನಾಗಿ ವರಿಸಿದನು. ಅಶ್ವತ್ಥಾಮನು ಮಹಾರಥರಾದ ಕೃಪ ಕೃತವರ್ಮರೊಡನೆ ಕಾಳರಾತ್ರಿಯಲ್ಲಿ ಪಾಂಡವರ ಶಿಬಿರವನ್ನು ಹೊಕ್ಕು ದ್ರೌಪದಿಯ ಐವರು ಮಕ್ಕಳನ್ನು ಕೊಂದನು. ಅಶ್ವತ್ಥಾಮಾದಿಗಳಿಗೂ ಪಾಂಚಾಲರಿಗೂ ನಡೆದ ಕದನದಲ್ಲಿ ಧೃಷ್ಟದ್ಯುಮ್ನ ಶಿಖಂಡಿ ಮೊದಲಾದ ಪಾಂಚಾಲ ವೀರರೆಲ್ಲರೂ ಹತರಾದರು. ಪಾಂಡವರ ಕಡೆಯಲ್ಲಿ ಯುಧಿಷ್ಠಿರಾದಿ ಐವರೂ ಕೃಷ್ಣನೂ ಸಾತ್ಯಕಿಯೂ ಉಳಿದರು. ಈ ಕೊಲೆಯಾದ ಒಡನೆಯೇ ಅಶ್ವತ್ಥಾಮಾದಿ ಅಮಾತ್ಯರು ದುರ್ಯೋಧನನು ಬಿದ್ದಿದ್ದೆಡೆಗೆ ಹೋಗಿ ಕೊಲೆಯ ಸುದ್ದಿಯನ್ನು ಅವನಿಗೆ ತಿಳಿಸಿದರು. ದುರ್ಯೋಧನನು ಆ ವಾರ್ತೆಯನ್ನು ಕೇಳಿ—"ನನಗೆ ಯಾರೂ ಮಾಡದ ಉಪಕಾರವನ್ನು ನೀನು ಮಾಡಿದೆ; ಪಾಂಡವರ ಸೇನಾಪತಿಯಾದ ಆ ನೀಚ ಧೃಷ್ಟದ್ಯುಮ್ನನನ್ನೂ ಶಿಖಂಡಿಯನ್ನೂ ಬಡಿದುಹಾಕಿದೆ; ನಿಮ್ಮೆಲ್ಲರಿಗೂ ಶುಭವಾಗಲಿ. ನಾವು ಮತ್ತೆ ಸ್ವರ್ಗದಲ್ಲಿ ಒಬ್ಬರನ್ನೊಬ್ಬರು ಕಾಣೋಣ" ಎಂದು ನುಡಿದು ಪ್ರಾಣಬಿಟ್ಟನು.

ಶೋಕಸಂತಪ್ತರಾದ ಧೃತರಾಷ್ಟ್ರನೂ ಗಾಂಧಾರಿಯೂ ಅಂತಃಪುರದ ಸ್ತ್ರೀಯರೊಡನೆ ಹಸ್ತಿನಾಪುರದಿಂದ ರಣರಂಗಕ್ಕೆ ಹೊರಟರು. ಹತಶೇಷರಾದ ಆ ಕೌರವರೂ ಯುಧಿಷ್ಠಿರಾದಿ ಪಾಂಡವರೂ ಕುಂತಿಯೂ ದ್ರೌಪದಿಯೂ ರಣರಂಗದಲ್ಲಿ ಸತ್ತುಬಿದ್ದಿದ್ದ ಮಕ್ಕಳು, ಸೋದರರು, ಗಂಡಂದಿರು ಮೊದಲಾದ ಪ್ರಿಯ ಬಂಧುಗಳನ್ನು ನೋಡಿ ನೋಡಿ ಹಂಬಲಿಸಿದರು; ಒಬ್ಬರನ್ನೊಬ್ಬರು ಸಂತೈಸಿದರು; ತಮ್ಮ ಆರ್ತ ಸ್ವರವನ್ನು ದಿಕ್ತಟಕ್ಕೆ ಮುಟ್ಟಿಸಿದರು. ಈ ರೋದನ ಮಧ್ಯದಲ್ಲಿ ಪ್ರಾಜ್ಞನಾದ ಯುಧಿಷ್ಠಿರನು ಮರಣವೇ ವೈರಕ್ಕೆ ಕಡೆಯೆಂದೆಣಿಸಿ ಉದಾರಭಾವವನ್ನುಳ್ಳವನಾಗಿ ಸಮಸ್ತ ಬಂಧು ಮಿತ್ರ ಜ್ಞಾತಿ ಭಟರ ಮೃತದೇಹಗಳನ್ನೂ ದಹನ ಮಾಡಿಸಿದನು. ಎಲ್ಲರೂ ಗಂಗಾತೀರಕ್ಕೆ

ಹೋಗಿ ಸತ್ತವರಿಗೆ ಜಲಪ್ರದಾನ ಮಾಡಿ ಒಂದು ತಿಂಗಳಕಾಲ ಅಲ್ಲಿಯೇ ವಾಸಮಾಡುತ್ತಿದ್ದರು.

ಲೋಕ ಭಯಂಕರವಾದ ಕುರುಪಾಂಡವರ ಯುದ್ಧವು ಈ ತೆರದಲ್ಲಿ ಕೊನೆಮುಟ್ಟಿತು; ಹದಿನೆಂಟು ಅಕ್ಷೌಹಿಣೀ ಸೇನೆಯು ನಾಶವಾಯಿತು.

---

## ಹದಿಮೂರನೆಯ ಅಧ್ಯಾಯ

### ಯುದ್ಧಶೇಷ, ಯುಧಿಷ್ಠಿರನ ವಿಷಾದ, ವಿಷಾದವನ್ನು ಕುರಿತ ಸಂವಾದ, ರಾಜ್ಯಾಭಿಷೇಕ.

ಯುದ್ಧಾರಂಭದಲ್ಲಿ, ಮಹಾ ಧನುರ್ಧರನಾದ ಅರ್ಜುನನು ರಣರಂಗದಲ್ಲಿ ನಿಂತು ಗುರುಜನರನ್ನೂ ಸ್ವಜನರನ್ನೂ ನೋಡುತ್ತಲೆ ಕೃಪಾಪರವಶನಾಗಿ ಯುದ್ಧಮಾಡಲೊಲ್ಲೆನೆಂದು ಸಾರಥಿಯಾದ ಶ್ರೀ ಕೃಷ್ಣನ ಸಂಗಡ ವಾದಿಸಿದಂತೆಯೇ ಯುದ್ಧಾಂತದಲ್ಲಿ ಕುರು ಕುಲ ಚೂಡಾಮಣಿಯಾದ ಯುಧಿಷ್ಠಿರನು ಘೋರ ಸಮರದಿಂದ ವಿಮುಕ್ತನಾಗಿ ನಿಷ್ಕಂಟಕ ರಾಜ್ಯವನ್ನು ಸಂಪಾದಿಸಿಯೂ ರಾಜ್ಯಭಾರವನ್ನು ವಹಿಸದೆ ರಣರಂಗದಲ್ಲಿ ಮಡಿದು ಬಿದ್ದಿದ್ದ ಜ್ಞಾತಿಗಳನ್ನು ನೋಡಿ, ಅದರೊಳಗೂ ಏಕೋದರನಾದ ಕರ್ಣನನ್ನು ನೋಡಿ, ಶೋಕಸಂತಪ್ತನಾಗಿ ಪಾಪ ಶಂಕೆಯಿಂದ ಪಶ್ಚಾತ್ತಾಪ ಪಡುತ್ತ ವೈರಾಗ್ಯವನ್ನು ತಾಳಿ ಅರ್ಜುನನ ಸಂಗಡ ಇಂತೆಂದನು :—

"ನಾವು ಭಿಕ್ಷಾವೃತ್ತಿಯನ್ನು ಅವಲಂಬಿಸಿದ್ದಿದ್ದರೆ ಜ್ಞಾತಿಗಳನ್ನು ನಿರ್ಮೂಲಮಾಡಿ ಈ ದುರ್ಗತಿಗೆ ಬರುತ್ತಿರಲಿಲ್ಲ. ಹೇಯವಾದ ನಮ್ಮ ವೃತ್ತಿ, ನಮ್ಮ ಬಾಹುಬಲ, ನಮ್ಮ ರಾಜ್ಯ ಲೋಭ—ಇವೇ ನಮ್ಮ ದುರ್ಗತಿಗೆ ಮೂಲ. ಕ್ಷಮಾಶೀಲರೂ ಅಹಿಂಸಾಪರರೂ ಸತ್ಯ ವಚನ ನಿರತರೂ ಆದ ವನಚಾರಿಗಳು ಎಂತಹ ಪುಣ್ಯಾತ್ಮರೊ! ನಾವಾದರೊ, ಲೋಭ ಮೋಹ ದಂಭ ಪರವಶರಾಗಿ ಜ್ಞಾತಿಗಳನ್ನು ಕೊಂದು ಮಾಡಬಾರದ ಪಾಪವನ್ನು ಮಾಡಿದೆವು. ಸುಖವಾದರೂ ಉಂಟೇ ಎಂದರೆ—ಬಂಧುಗಳು ಹೋದ ಬಳಿಕ ತ್ರೈಲೋಕ್ಯಾಧಿಪತ್ಯವು ಬಂದರೂ ಸುಖವೆಲ್ಲಿಯದು? ನಮ್ಮ ಸರ್ವಸ್ವವೂ ಹೋಗಿದ್ದರೂ ಬಂಧುಗಳನ್ನು ನಿಗ್ರಹಿಸಬಾರದಾಗಿದ್ದಿತು. ತಪಸ್ಸು ಮಾಡಿ ಎಷ್ಟೋ ವ್ರತೋಪವಾಸಗಳನ್ನು ಆಚರಿಸಿ ಮಕ್ಕಳನ್ನು ಪಡೆದು, ಪಡೆದ ಮಕ್ಕಳು ಬದುಕು

ವರೆ? ಬದುಕಿದವರು ಬಲಿಷ್ಠರಾಗುವರೆ? ಬಲಿಷ್ಠರು ಸಂಭಾವಿತ ರಾಗುವರೆ? ತಮ್ಮ ಇಹಪರ ಸುಖಕ್ಕೆ ಅನುಕೂಲರಾಗುವರೆ? ಎಂದೀ ಬಗೆಯಲ್ಲಿ ಫಲದಾಶೆಯಿಂದ ಚಿಂತಿಸುತ್ತಿದ್ದ ತಾಯಿತಂದೆಗಳ ಮನೋ ರಥಗಳೆಲ್ಲವೂ ನಮ್ಮಿಂದ ಭಗ್ನವಾದುವು. ಆ ನಿರ್ಭಾಗ್ಯರಾದ ಧಾರ್ತ ರಾಷ್ಟ್ರರೂ ಕೃತಾರ್ಥರಾಗಲಿಲ್ಲ, ನಾವೂ ಕೃತಾರ್ಥರಾಗಲಿಲ್ಲ. ಧೃತ ರಾಷ್ಟ್ರನು ಪುತ್ರಸ್ನೇಹಕ್ಕೊಳಗಾಗಿ ದುರ್ನೀತಿ ಪರಾಯಣನಾದ ಮಗನನ್ನು ರಾಷ್ಟ್ರೇಶ್ವರನನ್ನಾಗಿ ಮಾಡಿದನು. ಪಾಪಿ ದುರ್ಯೋ ಧನನ ದುರ್ಬುದ್ಧಿಯಿಂದಲೇ ಈ ನಮ್ಮ ಕುಲವು ನಿಪಾತವಾಯಿತು. ಅವನ ದುರಾಗ್ರಹದಿಂದ ನಾವೂ ಕ್ರೋಧವಶರಾದೆವು. ಧನಂಜಯನೇ! ಶತ್ರುವಧೆಯಿಂದ ನಮ್ಮ ಕ್ರೋಧವೇನೋ ಶಾಂತವಾಯಿತು; ಈಗ ನನ್ನನ್ನು ಶೋಕವು ದಹಿಸುತ್ತಿದೆ. ರಾಜ್ಯವನ್ನೂ ಅನಿತ್ಯವಾದ ಸಂಸಾರ ಸುಖವನ್ನೂ ಬಯಸಿ ಜ್ಞಾತಿಗಳನ್ನು ಕೊಲ್ಲಿಸಿ ಪಾಪವನ್ನು ಕಟ್ಟಿಕೊಂಡೆನು. ಈ ಪಾಪ ಪರಿಹಾರಕ್ಕೆ ತ್ಯಾಗವೇ ಉತ್ತಮೋ ಪಾಯವೆಂದು ಪ್ರಾಜ್ಞರು ನುಡಿದಿರುವರು. ಆದುದರಿಂದ ನಾನು ರಾಜ್ಯವನ್ನೂ ಗೃಹಸ್ಥಾಶ್ರಮವನ್ನೂ ಪರಿತ್ಯಾಗಮಾಡಿ ಫಲಮೂಲ ಗಳನ್ನು ತಿಂದುಕೊಂಡು ವನವಾಸಿಯಾಗಿಯೋ ಸರ್ವ ಕರ್ಮಗಳನ್ನೂ ಪರಿತ್ಯಾಗಮಾಡಿ ಭಿಕ್ಷಾನ್ನವನ್ನು ತಿಂದುಕೊಂಡು ಸಂನ್ಯಾಸಿಯಾ ಗಿಯೋ ಇರುವೆನು. ನೀನು ಈ ನಮ್ಮ ನಿಷ್ಕಂಟಕ ರಾಜ್ಯವನ್ನಾಳು.''

ವಾದದಲ್ಲಿ ಕುಶಲನಾದ ಅರ್ಜುನನು ಹಿರಿಯಣ್ಣನ ಮಾತಿಗೆ ರೇಗಿ—''ಅಯ್ಯೋ ದುಃಖವೆ! ಹಗೆಯನ್ನು ಕೊಂದು ಸ್ವಧರ್ಮದಿಂದ ಸಂಪಾದಿಸಿದ ರಾಜ್ಯವನ್ನು ಬುದ್ಧಿಲಾಘವದಿಂದ ಬಿಡುವರುಂಟೆ? ಈ ಭಾಗ್ಯಕ್ಕೆ ಈ ಮಹೀಪಾಲರೆಲ್ಲರನ್ನೂ ಕ್ರೋಧದಿಂದ ಏಕೆ ಕೊಲ್ಲಿಸಿದೆ? ಕ್ಷತ್ರಿಯ ಕುಲದಲ್ಲಿ ಹುಟ್ಟಿ ಕ್ಷಾತ್ರಬಲದಿಂದ ರಾಜ್ಯವನ್ನು ಗೆದ್ದು ಈಗ ಕ್ಷತ್ರಿಯ ವೃತ್ತಿಯನ್ನು ಜರಿದು ಧರ್ಮಾರ್ಥಗಳನ್ನು ತೊರೆದು ಕಾಡಿಗೆ ಹೋಗುವುದು ಮರುಳುತನವಲ್ಲವೆ? ಧರ್ಮಾಚರಣೆಗೆ ಅರ್ಥವೇ ಸಾಧನವಲ್ಲವೆ? ಧನದಿಂದ ದಾನ ಧರ್ಮಗಳು, ಧನದಿಂದ ಸ್ವರ್ಗ, ಧನ ದಿಂದ ಕುಲ, ಧನದಿಂದ ಮಾನ, ಧನದಿಂದ ಪ್ರಾಣಯಾತ್ರೆ, ಧನದಿಂದ

ಸರ್ವವೂ ಸಾಧ್ಯವಾಗುವುದು. ಧನಹೀನನಿಗೆ ಇಹವೂ ಇಲ್ಲ, ಪರವೂ ಇಲ್ಲ. ಯಾವನು ನಮ್ಮ ಧನವನ್ನು ಅಪಹರಿಸುವನೋ ಅವನು ನಮ್ಮ ಧರ್ಮವನ್ನೂ ಅಪಹರಿಸುವನು. ಅಂತಹವನಿಗೆ ಕ್ಷಮೆಯನ್ನು ತೋರಿಸುವುದು ಧರ್ಮವೆ? ಅವನನ್ನು ದಂಡಿಸುವುದು ಅಧರ್ಮವೆ? ಮಹಾರಾಜನೇ! ರಾಜ್ಯವು ನಿನ್ನದಾಗಿದೆ. ರಾಜ್ಯವನ್ನು ಪರಿಪಾಲಿಸು. ಹಾಗೆ ಮಾಡೆನೆಂದರೆ ರಾಜ್ಯಪಾಪವೆಲ್ಲವೂ ನಿನಗೆ ಬರುವುದು '' ಎಂದು ನುಡಿದನು.

ತರುವಾಯ ಭೀಮಸೇನನಿಂತೆಂದನು :—'' ಮಹಾರಾಜನೇ! ನೀನು ಅರ್ಥಜ್ಞಾನವಿಲ್ಲದ ವೇದಪಾಠಕನೇ ಹೊರತು ತತ್ತ್ವಜ್ಞಾನವುಳ್ಳವನಲ್ಲ. ರಾಜಧರ್ಮವನ್ನು ಹೇಯವೆಂದೆಣಿಸಿ ಕರ್ತವ್ಯ ಕರ್ಮಗಳನ್ನು ಬಿಟ್ಟು ಅಲಸನಾಗಿರಬೇಕೆಂದಿದ್ದ ಪಕ್ಷದಲ್ಲಿ ಧಾರ್ತರಾಷ್ಟ್ರರನ್ನು ವಿನಾಶ ಮಾಡಿದುದಕ್ಕೇನು ಫಲ? ಘಾಸಿಗೊಂಡು ಬಾವಿಯನ್ನು ತೋಡಿ ಬಳಲಿದುದಕ್ಕೆ ಮೈ ಕೆಸರಾದುದೇ ಫಲವೆ? ಭರತಕುಲ ಶ್ರೇಷ್ಠನೇ! ಕ್ಷತ್ರಿಯರೊಳಗೆ ಕ್ಷಮಾವಂತನು, ಅಹಿಂಸಾತ್ಮನು, ಕರುಣಾಳು ಆದವನು ನೀನೊಬ್ಬನೇಯೆ? ಈ ನಿನ್ನ ಅಗಾಧ ಬುದ್ಧಿ ಮೊದಲೇ ತಿಳಿದಿದ್ದ ಪಕ್ಷದಲ್ಲಿ ನಾವು ಶಸ್ತ್ರವನ್ನು ಹಿಡಿಯುತ್ತಿರಲಿಲ್ಲ. ಈ ಘೋರ ಪ್ರಾಣಿಹತ್ಯವೂ ಆಗುತ್ತಿರಲಿಲ್ಲ. ನಮ್ಮ ರಾಜ್ಯವನ್ನು ನಾವು ತೆಗೆದುಕೊಳ್ಳುವುದಕ್ಕಾಗಿ ಶತ್ರುಗಳನ್ನು ಕೊಂದೆವು; ಇದು ತಪ್ಪೆ? ನಾವು ಗತಿಹೀನರಿಗೆ ಗತಿಯೆನಿಸಿಕೊಂಡು ನಮ್ಮ ಒಡವೆಯನ್ನು ನಾವು ತೆಗೆದುಕೊಳ್ಳದೆ ಬಿಟ್ಟಿದ್ದರೆ ಜನರೇನೆನ್ನುತ್ತಿದ್ದರು? ಕ್ಷತ್ರಿಯರಿಗೆ ಸಂನ್ಯಾಸವು ಸಲ್ಲದು. ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಿದವನು. ಅವರವರ ವರ್ಣಾಶ್ರಮ ಧರ್ಮದಿಂದ ಅವರವರಿಗೆ ಸಿದ್ಧಿಯಾಗುವುದು ನಿಶ್ಚಯವೆನ್ನುವ ಪಕ್ಷದಲ್ಲಿ ನಿನ್ನ ಕುಲ ಧರ್ಮವಾದ ಪ್ರಜಾ ಪಾಲನೆಯನ್ನು ಮಾಡುವುದರಿಂದ ನಿನಗೆ ಸಿದ್ಧಿಯಾಗುವುದೇ ಹೊರತು ಬಿಡುವುದರಿಂದಾಗದು. ನಾನು ಸಂನ್ಯಾಸಿ, ನಾನು ಯಾರನ್ನೂ ಕಾಡೆನು ಎಂದು ಹೇಳಿಕೊಂಡು, ವಿಹಿತ ಕರ್ಮವನ್ನು ಬಿಟ್ಟು, ಕಂದಮೂಲಗಳಿಂದಲೋ ಭಿಕ್ಷಾನ್ನದಿಂದಲೋ ತನ್ನ ಒಂದು ಹೊಟ್ಟೆಯನ್ನು ಹೊರೆದುಕೊಂಡ ಮಾತ್ರಕ್ಕೇ ಯಾವ

ನೊಬ್ಬನೂ ಸದ್ಗತಿಯನ್ನು ಹೊಂದನು. ಕರ್ಮವು ಅವಶ್ಯ ಕರ್ತವ್ಯವು. ನೋಡು, ಜಗತ್ತೆಲ್ಲವೂ ಕರ್ಮನಿರತವಾಗಿರುವುದು.''

ಪ್ರಾಜ್ಞನಾದ ನಕುಲನು ಅಣ್ಣನ ಶೋಕವನ್ನೂ ಶೋಕದಿಂದುಂಟಾದ ವೈರಾಗ್ಯವನ್ನೂ ಚಿಂತಿಸುತ್ತ—''ಮಹಾರಾಜನೇ! ಯಜ್ಞವನ್ನು ಮಾಡಿ ಧರ್ಮಲಬ್ಧವಾದ ವಿತ್ತದಿಂದ ಭೂರಿದಕ್ಷಿಣೆಯನ್ನು ಕೊಟ್ಟು ಜಿತೇಂದ್ರಿಯನಾಗಿರುವವನೇ ಯಥಾರ್ಥ ತ್ಯಾಗಿ. ಆಶ್ರಮಗಳೊಳಗೆ ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ಪ್ರಾಜ್ಞರು ಹೇಳುವರು. ಗೃಹಸ್ಥಾಶ್ರಮದಲ್ಲಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗವನ್ನೂ ಸಂಪಾದಿಸಬಹುದು. ರಾಜನು ಪ್ರಮಾದದಿಂದ ತನ್ನ ಕರ್ತವ್ಯದಲ್ಲಿ ಉದಾಸೀನನಾದರೆ ದುಷ್ಟರು ಮಲೆತು ಪ್ರಜೆಗಳನ್ನು ಕಾಡಿಸರೆ? ಪ್ರಜಾರಕ್ಷಕನೂ ಅಲ್ಲದೆ ದಾತೃವೂ ಅಲ್ಲದೆ ಇರುವ ರಾಜನು ಧರ್ಮಭ್ರಷ್ಟನಾಗದೆ ಹೋಗನು. ವನವಾಸಿಯಾದ ಮಾತ್ರಕ್ಕೇ ಯಾವನೂ ತ್ಯಾಗಿಯೆನಿಸಿಕೊಳ್ಳನು. ಕುಟುಂಬ ಧರ್ಮಿಯಾಗಿ, ವಿಷಯ ರಾಶಿಗಳ ನಡುವೆ ಇದ್ದು ವಿಷಯಾಭಿಲಾಷೆಯನ್ನು ತೊರೆಯಬಲ್ಲವನೇ ತ್ಯಾಗಿ. ಹಿಂದೆ ನಿನ್ನ ಈ ಕ್ಷತ್ರಿಯ ಧರ್ಮವನ್ನು ಶಿಷ್ಟರು ಆಚರಿಸಿದರು, ನಿನ್ನ ಪೂರ್ವಿಕರು ಗೌರವಿಸಿದರು. ನೀನೂ ಅವರ ಹೆಜ್ಜೆಯನ್ನು ಹಿಡಿದು ನಡೆ'' ಎಂದನು.

ಆ ಬಳಿಕ ಸಹದೇವನಿಂತೆಂದನು:—''ರಾಜ್ಯವನ್ನೂ ರಾಜ್ಯೈಶ್ವರ್ಯವನ್ನೂ ಬಿಟ್ಟುಹೋದ ಮಾತ್ರಕ್ಕೇ ಸಿದ್ಧಿಯಾಗುವುದೆ? ನರಾಧಿಪನೇ! 'ಈ ರಾಜ್ಯವನ್ನು ನಾನು ಗೆದ್ದೆನು' ಎಂಬ ಅಹಂಕಾರವೂ, 'ಈ ರಾಜ್ಯವು ನನ್ನದು, ನನ್ನ ಮತ್ತು ನನ್ನವರ ಸುಖಕ್ಕಾಗಿರುವುದು' ಎಂಬ ಮಮಕಾರವೂ ನಮ್ಮ ದುಃಖಕ್ಕೆ ಮೂಲ. ಅಹಂಕಾರ ಮಮಕಾರಗಳನ್ನು ಬಿಟ್ಟಲ್ಲದೆ ದುಃಖವು ತೊಲಗದು. ಬಾಹ್ಯ ವಸ್ತುಗಳನ್ನು ಕಣ್ಣೆತ್ತಿ ನೋಡದೆ ಇಂದ್ರಿಯ ವ್ಯಾಪಾರಗಳನ್ನು ತಡೆದು ಮನಸ್ಸಿನಲ್ಲಿ ಮಾತ್ರ ವಿಷಯ ಸುಖವನ್ನು ನೆನೆನೆನೆದು ಬಯಸುತ್ತಿದ್ದರೆ ಅದು ತ್ಯಾಗವೆನಿಸದು; ಅದು ಸಂನ್ಯಾಸವೂ ಅಲ್ಲ, ಧರ್ಮವೂ ಅಲ್ಲ; ಆದರಿಂದ

ಸುಖವೂ ಇಲ್ಲ, ಸಿದ್ಧಿಯೂ ಇಲ್ಲ. ಬಲ ವಿಕ್ರಮಗಳಿಂದ ರಾಜ್ಯವನ್ನು ಸಂಪಾದಿಸಿ ಅದನ್ನು ಪಾಲಿಸದಿರುವರುಂಟೆ? ನೀನು ಹಿರಿಯನು, ಬಲ್ಲ ವನು; ನಾನು ಕಿರಿಯನು, ಆರ್ತನು; ತಪ್ಪಾಗಲಿ, ಒಪ್ಪಾಗಲಿ, ಈ ನನ್ನ ದುಃಖ ಪ್ರಲಾಪವನ್ನು ಮನ್ನಿಸು.''

ತರುವಾಯ, ಅಭಿಜನ ಸಂಪನ್ನೆಯಾದ ದ್ರೌಪದಿಯು ದುಃಖ ಪಡುತ್ತ—''ಪಾರ್ಥಿವನೇ! ಜಯೈಷಿಯಾಗಿ ಸಮರಕ್ಕೆ ಹೊರಟು ದುರ್ಯೋಧನನನ್ನೂ ಅವನ ಚತುರಂಗ ಬಲವನ್ನೂ ಮರ್ದನ ಮಾಡಿ ರಾಜ್ಯವನ್ನು ವಶಮಾಡಿಕೊಂಡು ಬ್ರಾಹ್ಮಣೋತ್ತಮರಿಗೆ ಭೂರಿದಕ್ಷಿಣೆ ಯನ್ನು ಕೊಟ್ಟು ನಮ್ಮ ಇಷ್ಟಾರ್ಥಗಳೆಲ್ಲವನ್ನೂ ಭೋಗಿಸುವೆವು ಎಂದು ನೀನು ಯುದ್ಧಕ್ಕೆ ಮುಂಚೆ ಹೇಳಲಿಲ್ಲವೆ? ಈಗ ನೀನು ಹಂಬ ಲಿಸುವುದೇಕೆ? ಬ್ರಹ್ಮನು ಲೋಕ ರಕ್ಷಣಾರ್ಥವಾಗಿಯೇ ಕ್ಷತ್ರಿಯ ರಾಜರನ್ನು ನಿರ್ಮಾಣ ಮಾಡಿರುವನು. ದುಷ್ಟರನ್ನು ದಂಡಿಸದೆ ಲೋಕ ವನ್ನು ರಕ್ಷಿಸಲಾಗುವುದೆ? ಮಹಾಪ್ರಭುವೇ! ಸತ್ಕುಲದಲ್ಲಿ ಹುಟ್ಟಿ ಮಹಾಕಾಯನೂ ಮಹಾವೀರ್ಯನೂ ಎನಿಸಿಕೊಂಡು ಸಚ್ಚರಿತ್ರನಾಗಿ ಆಯಾ ಸ್ಥಾನದಲ್ಲಿ, ಆಯಾ ಕಾಲದಲ್ಲಿ, ಕ್ಷಮೆಯನ್ನೂ ಕ್ರೋಧವನ್ನೂ ನಿಗ್ರಹಾನುಗ್ರಹಶಕ್ತಿಗಳನ್ನೂ ತೋರಿಸಬಲ್ಲವನೇ ಧರ್ಮಜ್ಞನೆನಿಸಿ ಕೊಳ್ಳುವನು; ಅವನೇ ವರ್ಣಾಶ್ರಮ ಧರ್ಮಗಳಿಗೆ ಪ್ರಭು, ರಕ್ಷಕನು. ಲೋಕಪಾಲಕರೂ ಮಹಾತ್ಮರೂ ಆದ ಪಾಂಡವರು, ಧರ್ಮಭ್ರಷ್ಟರೂ ದುರಾತ್ಮರೂ ಆದ ಕೌರವರನ್ನು ಧರ್ಮದಿಂದಲೋ ಛಲದಿಂದಲೋ ಬಲ ದಿಂದಲೋ ನಾಶಮಾಡಿದುದು ಪಾಪವಲ್ಲ. ಜಗತ್ಪತೇ! ಭೂತದಯೆ, ದಾನ, ಅಧ್ಯಯನ, ತಪ—ಇವು ಬ್ರಾಹ್ಮಣರ ಪ್ರಧಾನ ಧರ್ಮಗಳು. ದುಷ್ಟನಿಗ್ರಹ, ಶಿಷ್ಟಪರಿಪಾಲನೆ, ರಣವಿಕ್ರಮ-ಇವು ಕ್ಷತ್ರಿಯರ ಮುಖ್ಯ ಧರ್ಮಗಳು. ನೀನು ಅಧ್ಯಯನ ಮಾಡಿ ರಾಜ್ಯವನ್ನು ಸಂಪಾದಿಸಿದೆಯಾ? ಯಾಚನೆಮಾಡಿ ಸಂಪಾದಿಸಿದೆಯಾ? ದಾನವನ್ನಾಗಿ ಪರಿಗ್ರಹಿಸಿದೆಯಾ? ಇಲ್ಲ, ಸಾಮೋಪಾಯದಿಂದಲೆ? ಹೇಳು. ದ್ರೋಣ, ಕರ್ಣ, ಅಶ್ವತ್ಥಾಮ, ಕೃಪಾದಿ ಶಾರ್ದೂಲಗಳಿಂದ ಅಭಿರಕ್ಷಿತವಾದ ಅದ್ಭುತ ಚತುರಂಗ ಬಲ ವನ್ನು ಕ್ಷಾತ್ರತೇಜದಿಂದ ಮರ್ದನ ಮಾಡಿಯಲ್ಲವೆ ನೀನು ರಾಜ್ಯವನ್ನು

ಜಯಿಸಿದೆ? ಅದಕ್ಕೆ ಶೋಕವೇಕೆ? ನೀನ್ನೈವರೂ ಅಸಹಾಯ ಶೂರರು; ಐವರೊಳಗೊಬ್ಬನನ್ನು ಕೈಹಿಡಿದಿದ್ದರೂ ನಾನು ಸುಖದಿಂದಿರಬಹು ದಾಗಿದ್ದಿತು. ಐವರನ್ನು ಮದುವೆಯಾದರೂ ನನಗೆ ಈ ಪಾಡು ಬರಬಹುದೆ? ಐವರು ಮಕ್ಕಳನ್ನು ನೀಗಿಕೊಂಡೆನು; ಆದರೂ ನಾನು ಸಾಯಲಿಲ್ಲವಲ್ಲಾ! ಸ್ತ್ರೀಜಾತಿಯಲ್ಲಿ ನನ್ನಂತಹ ಅಧಮೆಯುಂಟೆ? ಜನಾಧಿಪನೇ! ಫಲಕ್ಕೆ ಬಂದ ಸಮಯದಲ್ಲಿ ನಿನ್ನ ಸಾಹಸ ಕಾರ್ಯ ಗಳೆಲ್ಲವನ್ನೂ ವ್ಯರ್ಥಗೊಳಿಸುತ್ತೀಯಲ್ಲಾ! ನಿನ್ನಂತಹ ಹುಚ್ಚರುಂಟೆ? ನೀನು ಜ್ಯೇಷ್ಠನೆಂದು ನಿನ್ನನ್ನು ನೋಡಿ ನಿನ್ನಂತೆಯೇ ನಿನ್ನ ತಮ್ಮಂ ದಿರೂ ಉನ್ಮತ್ತರಾಗಿದ್ದಾರೆ. ಅವರು ಬುದ್ಧಿವಂತರಾಗಿದ್ದಿದ್ದರೆ ನಿನ್ನನ್ನು ಕಟ್ಟಿಹಾಕಿ ಅವರೇ ರಾಜ್ಯಭಾರವನ್ನು ವಹಿಸುತ್ತಿದ್ದರು. ರಾಜವರ್ಯನೇ! ದಮ್ಮಯ್ಯ! ನೀನು ರಾಜ್ಯವನ್ನು ತ್ಯಜಿಸಬೇಡ, ಪೃಥ್ವೀದೇವಿಯನ್ನು ಸ್ವೀಕಾರ ಮಾಡು, ಪ್ರಜೆಗಳನ್ನು ಧರ್ಮದಿಂದ ಪಾಲಿಸು, ದ್ವಿಜೋ ತ್ತಮರಿಗೆ ಧನ ವಸನಗಳನ್ನು ದಾನಮಾಡು'' ಎಂದು ಮೊರೆಯಿಟ್ಟಳು.

ಅರ್ಜುನನು ದ್ರೌಪದಿಯ ಮಾತನ್ನೇ ಸಮರ್ಥಿಸುತ್ತ ಮತ್ತಿಂ ತೆಂದನು:-''ಪ್ರಾಜ್ಞನೇ! ದಂಡ ವಿಧಾನದಿಂದ ಧನ ಧಾನ್ಯಗಳೂ ಪ್ರಾಣ ಮಾನಗಳೂ ಸುರಕ್ಷಿತವಾಗಿರುವುವು. ಲೋಕದಲ್ಲಿ ಯಮದಂಡಕ್ಕೆ ಅಂಜಿ ಕೆಲವರು, ರಾಜದಂಡಕ್ಕೆ ಅಂಜಿ ಕೆಲವರು, ಪರಲೋಕ ಭಯದಿಂದ ಕೆಲವರು, ಸಮಾಜ ಭಯದಿಂದ ಕೆಲವರು, ಅಪರಾಧವನ್ನು ಮಾಡಲು ಹೆದರುವರು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ—ಇವ ರೆಲ್ಲರೂ ದಂಡಭಯದಿಂದ ತಂತಮ್ಮ ಧರ್ಮದಲ್ಲಿರುವರು. ದುಷ್ಟರ ಬಾಧೆ ನಿವಾರಿಸುವುದಕ್ಕೋಸ್ಕರವೇ ದಂಡವಿಧಾನವು ಹುಟ್ಟಿರು ವುದು. ದುಷ್ಟರನ್ನು ಶಿಷ್ಟರನ್ನಾಗಿ ಮಾಡುವುದಕ್ಕೋಸ್ಕರವೇ ಧರ್ಮ ಪ್ರವಚನವು ಏರ್ಪಟ್ಟಿರುವುದು. ಯಥಾ ನ್ಯಾಯವಾಗಿ ದಂಡವನ್ನು ಪ್ರಯೋಗ ಮಾಡದಿದ್ದರೆ ಬಲಿಷ್ಠರು ಕಾಮ ಕ್ರೋಧಗಳ ವಶರಾಗಿ ದುರ್ಬಲರನ್ನೂ ಸಜ್ಜನರನ್ನೂ ತುಳಿದು ಮುಕ್ಕಿಬಿಡರೆ? ಲೋಕ ವನ್ನೇ ಮುಳುಗಿಸರೆ? ಸರ್ವ ಕಾರ್ಯಗಳಲ್ಲಿಯೂ ಧರ್ಮಾಧರ್ಮಗಳು ಸಂಕಲಿತವಾಗಿರುವುವು. ದಂಡವಿಧಾನವು ಹಿಂಸಾತ್ಮಕವೆಂಬುದೇನೋ

ಸತ್ಯ. ಹಾಗೆಂದು ಲೋಕ ಕಂಟಕರನ್ನು ದಂಡಿಸದೆ ಬಿಟ್ಟರೆ ಪ್ರಪಂಚವೇ ದುಷ್ಟರ ಪಾಲಾಗದೆ? ಹಿಂಸಾಪ್ರವೃತ್ತಿ ಹೆಚ್ಚದೆ? ಧರ್ಮಕ್ಕೆ ಹಾನಿಯುಂಟಾಗದೆ? ಶಸ್ತ್ರವನ್ನು ಹಿಡಿದು ಅನ್ಯಾಯವಾಗಿ ಕೊಲ್ಲಬಂದ ಆತತಾಯಿಯನ್ನು ಆತ್ಮರಕ್ಷಣಾರ್ಥವಾಗಿ ಕೊಲ್ಲುವುದು ಪಾಪವಲ್ಲ. ಧರ್ಮಜ್ಞನೇ! ಪುಣ್ಯ ಪಾಪ ಮಿಶ್ರವಾದ ಈ ಪ್ರಪಂಚದಲ್ಲಿ ಪುರಾತನ ಧರ್ಮವನ್ನು ಆಚರಿಸು ಮಹಾಪ್ರಭುವೇ!''

ಈ ಹಲವು ಬಗೆಯಲ್ಲಿ ಭೀಮಾರ್ಜುನರು ರಾಜ್ಯಭಾರವನ್ನು ವಹಿಸೆಂದು ಯುಧಿಷ್ಠಿರನನ್ನು ಬೇಡಿದರೂ ಕೇಳದೆ—''ಅರ್ಜುನ! ಕರ್ಮವನ್ನು ಮಾಡು, ಕರ್ಮವನ್ನು ಬಿಡು—ಎಂಬೀ ಎರಡೂ ವೇದವಚನಗಳೆಂಬುದನ್ನು ನಾನು ಬಲ್ಲೆನು. ನೀನು ಕೇವಲ ಶಸ್ತ್ರಜ್ಞ, ಶಾಸ್ತ್ರಜ್ಞನಲ್ಲ; ರಣದಲ್ಲಿ ಕಾದಬಲ್ಲವನಾದರೂ ತತ್ತ್ವವನ್ನರಿಯಲು ಸಮರ್ಥನಲ್ಲ. ನನಗೆ ತತ್ತ್ವೋಪದೇಶವನ್ನು ಮಾಡಬಾರದು. ಆದರೆ ಭ್ರಾತೃಸ್ನೇಹದಿಂದ ನೀನಾಡಿದ ಮಾತೇನೋ ನ್ಯಾಯವೆ; ಅದಕ್ಕೆ ನಾನು ಸಂತೋಷಪಡುತ್ತೇನೆ'' ಎಂದು ಅರ್ಜುನನಿಗೂ—''ಭೀಮ! ನೀನು ಅಸಂತುಷ್ಟನು; ಮಹೀಪತಿಗೂ ಒಂದೇ ಹೊಟ್ಟೆಯಲ್ಲವೆ? ಅದಕ್ಕಾಗಿ ಇಂತಹ ಪ್ರಾಣಿಹತ್ಯವನ್ನು ಮಾಡಬಹುದೆ? ಆಶೆಯನ್ನು ಬಿಟ್ಟು ಮಾತಾಡು'' ಎಂದು ಭೀಮನಿಗೂ ಉತ್ತರವನ್ನು ಕೊಟ್ಟನೇ ಹೊರತು ರಾಜ್ಯವಾಳುವ ಸುದ್ದಿಯನ್ನೇ ಎತ್ತಲಿಲ್ಲ. ಅಷ್ಟು ಮಾತ್ರವಲ್ಲದೆ, ''ರಾಜ್ಯಕಾರ್ಯಗಳಲ್ಲಿ ತೊಡಗುವುದರಿಂದ ಧರ್ಮವನ್ನು ಮಾತ್ರವೇ ಅಲ್ಲ, ಅಧರ್ಮವನ್ನು ಕೂಡ ಮಾಡಬೇಕಾಗುವುದು; ಪುಣ್ಯವನ್ನು ಮಾತ್ರವೇ ಅಲ್ಲ, ಪಾಪವನ್ನೂ ಕಟ್ಟಿಕೊಳ್ಳಬೇಕಾಗುವುದು; ಮತ್ತೆ ಮತ್ತೆ ಜನ್ಮವೆತ್ತಬೇಕಾಗುವುದು. ಆದುದರಿಂದ ಸರ್ವ ಕರ್ಮಗಳನ್ನೂ ಪರಿತ್ಯಾಗ ಮಾಡುವೆನು'' ಎಂದು ನಿಶ್ಚಯಿಸಿ, ಕಡೆಗೆ ಪ್ರಾಣಪರಿತ್ಯಾಗ ಮಾಡುವೆನೆಂದು ಸಂಕಲ್ಪ ಮಾಡಿ, ವ್ಯಾಸರ ಮುಂದೆ ಇಂತೆಂದು ಹಂಬಲಿಸಿದನು:—

''ನಾನು ಜ್ಞಾತಿಘಾತುಕನು. ರಾಜ್ಯಕಾಮುಕನಾಗಿ ಸ್ವವಂಶವನ್ನು ಉಚ್ಛೇದನ ಮಾಡಿದೆನು. ಶೈಶವದಲ್ಲಿ ಯಾವನ ತೊಡೆಯ

ಮೇಲೆ ಆಡಿಕೊಂಡಿದ್ದೆನೋ, ಬಾಲ್ಯದಲ್ಲಿ ನನ್ನನ್ನು ಯಾವನು ಸಾಕಿ ಸಲಹಿದನೋ ಆ ಗಾಂಗೇಯನನ್ನು ನಾನು ರಾಜ್ಯಾಕಾಂಕ್ಷೆಯಿಂದ ರಣದಲ್ಲಿ ಕೆಡವಿಸಿದೆನು. ಯಾವ ವೀರನು ಕುರುಕ್ಷೇತ್ರದಲ್ಲಿ ನಿಂತು ಪರಶುರಾಮನ ಸಂಗಡ ಕಾದಿ ಸೈಯೆನಿಸಿಕೊಂಡನೋ ಆ ವೀರನನ್ನು ಪಾಪಿಯಾದ ನಾನು ಅಲ್ಪ ಕಾಲ ಸುಖಕ್ಕೋಸ್ಕರ, ಅಸ್ಥಿರವಾದ ರಾಜ್ಯ ಕ್ಕೋಸ್ಕರ, ಕೊಲ್ಲಿಸಿದೆನು. ಅಶ್ವತ್ಥಾಮನು ಸತ್ತನೆಂದು ಬಗುಳಿ, ಧನುರ್ಧರ ಶ್ರೇಷ್ಠನೂ ಸರ್ವ ರಾಜ ಪೂಜಿತನೂ ಆದ ಆಚಾರ್ಯನನ್ನು ವಂಚಿಸಿದೆನು. ಗುರುದ್ರೋಹಿಯಾದ ನಾನು ಯಾವ ಲೋಕಕ್ಕೆ ಹೋಗುವೆನೊ! ಜ್ಯೇಷ್ಠ ಭ್ರಾತೃ ಕರ್ಣನನ್ನು—ಯಾವ ಧೀರನು ರಣ ದಿಂದ ಹಿಂಜರಿಯದೆ ಕಾದುತ್ತಿದ್ದನೋ ಆ ಧೀರನನ್ನು—ಕೊಲ್ಲಿಸಿ ಭ್ರಾತೃದ್ರೋಹಿಯಾದೆನು. ಅಭಿಮನ್ಯುವನ್ನು—ಬಾಲನನ್ನು! ದ್ರೋಣಾ ಚಾರ್ಯನಿಂದ ಪಾಲಿತವಾದ ವಾಹಿನಿಯನ್ನು ಪ್ರವೇಶ ಮಾಡೆಂದು ಹೇಳಿ, ಕೊಲ್ಲಿಸಿದೆನು. ಅಂದು ಮೊದಲು ನಾನು ಶಿಶುಹತ್ಯ ಮಾಡಿದವ ನಂತೆ ಲಜ್ಜೆಯಿಂದ ತಲೆಬಾಗಿ, ಕೃಷ್ಣಾರ್ಜುನರಿಗೆ ಮೋರೆ ತೋರಿಸ ಲಾರದಿದ್ದೇನಲ್ಲ! ಐವರು ಮುದ್ದು ಮಕ್ಕಳನ್ನು ಕಳೆದುಕೊಂಡು ದುಃಖಿಸುತ್ತಿರುವ ದ್ರೌಪದಿಯನ್ನು ನೋಡಿ ಸಹಿಸಬಹುದೆ? ನಾನು ಅಪರಾಧಿ, ಪಾಪಿ, ಪೃಥ್ವೀನಾಶಕನು; ಈ ಸ್ಥಳವನ್ನು ಬಿಟ್ಟೇಳೆನು, ಅನ್ನ ವನ್ನು ತಿನ್ನೆನು, ಜಲಪಾನ ಮಾಡೆನು; ಪ್ರಾಯೋಪವೇಶ ಮಾಡಿ ಪ್ರಾಣವನ್ನು ಬಿಡುವೆನು. ತಪೋಧನನೇ! ನಾನು ಕುಲಾಂತಕನು, ಗುರುಘಾತುಕನು. ಈ ನನ್ನ ಕಳೇಬರವನ್ನು ತ್ಯಜಿಸುವೆನು, ಅಪ್ಪಣೆ ಕೊಡು; ಕೊಟ್ಟು ಇಷ್ಟ ಬಂದ ಕಡೆಗೆ ಹೋಗು. ತಾವೆಲ್ಲರೂ ನನಗೆ ಅನುಜ್ಞೆಯನ್ನು ಕೊಡಿರಿ.''

ಹೀಗೆ ಯುಧಿಷ್ಠಿರನು ಶೋಕಾಧಿಕ್ಯದಿಂದ ಪ್ರಾಣತ್ಯಾಗ ಮಾಡ ಬಿಚ್ಛಿಸಿ ಎಲ್ಲರ ಅನುಜ್ಞೆಯನ್ನೂ ಬೇಡಿದನು. ವ್ಯಾಸರು ಯುಧಿಷ್ಠಿರ ನನ್ನು ಸಮಾಧಾನಗೊಳಿಸಲು ಯತ್ನಿಸಿ—'' ಹುಟ್ಟುವುದೂ ಸಾಯು ವುದೂ ಪ್ರಪಂಚ ಧರ್ಮ. ಸತ್ತವರಿಗೆ ಶೋಕಪಡುತ್ತ ಕರ್ತವ್ಯ ಕರ್ಮ ವನ್ನು ಬಿಡುವುದು ಯುಕ್ತವಲ್ಲ. ಲೋಕ ರಕ್ಷಣೆಯು ಕ್ಷತ್ರಿಯರ

ಕರ್ತವ್ಯ, ಅವರ ಸ್ವಧರ್ಮ; ಶುಭಾಶುಭಗಳಿಗೆ ಮೂಲವಾದ ಸ್ವಧರ್ಮ ವನ್ನು ಬಿಡುವುದು ಯಾರಿಗೂ ಶ್ರೇಯಸ್ಕರವಲ್ಲ. ದುರ್ಯೋಧನಾದಿ ಗಳು ಧರ್ಮ ಘಾತುಕರು. ಯಾರು ಪಾಪಬುದ್ಧಿಯಿಂದ ಪಾಪ ಮಾಡಿ, ಮಾಡಿದ ಮೇಲೆಯೂ ಆ ಬುದ್ಧಿಯನ್ನು ಬಿಡದೆ ಲಜ್ಜೆಗೆಟ್ಟು ಪಾಪವನ್ನು ಮಾಡುತ್ತಿರುವರೋ, ದಯಾದಾಕ್ಷಿಣ್ಯ ಲೇಶವೂ ಇಲ್ಲದೆಯೇ ಕಂಟಕ ರಾಗಿ ವರ್ತಿಸುವರೋ, ಅವರು ಕ್ಷಮಾರ್ಹರಲ್ಲ, ವಧಾರ್ಹರು. ಮಹಾ ರಾಜನೇ! ನೀನು ಸತ್ಕುಲದಲ್ಲಿ ಹುಟ್ಟಿದವನು, ರುಚಿಪೂರ್ವಕವಾಗಿ ನರ ಹಿಂಸೆ ಮಾಡಿದವನಲ್ಲ. ಇಚ್ಛೆಯಿಲ್ಲದವನಾದರೂ ಕೌರವರ ಅಪರಾಧ ಗಳ ದೆಸೆಯಿಂದ ಅವರನ್ನು ನಿಗ್ರಹಿಸಿದೆ; ನಿಗ್ರಹಿಸಿ, ಪಾಪವಲ್ಲದಿದ್ದರೂ ಅದಕ್ಕಾಗಿ ಪರಿತಾಪಪಡುತ್ತಿದ್ದೀಯೆ ; ಅವರನ್ನು ಕೊಂದವನು ನೀನಲ್ಲ, ಭೀಮನಲ್ಲ, ಅರ್ಜುನನಲ್ಲ. ಅವರ ಅಪರಾಧಗಳಿಂದಲೇ ಅವರು ಹತ ರಾದರು. ಅವರ ವಿನಾಶಕಾಲ ಬಂದಿತು, ಅವರು ಸತ್ತರು. ನೀನು ಶೋಕಪಡುವುದೇಕೆ? ಕ್ಷತ್ರಿಯ ವೃತ್ತಿಯು ಹಿಂಸಾತ್ಮಕವಾದುದ ರಿಂದ ನೀನು ನಿಂದ್ಯವೆಂದರೂ ನೀನು ಉದ್ದೇಶಿಸಿರುವ ಪ್ರಾಣತ್ಯಾಗವು ಶ್ಲಾಘ್ಯವಲ್ಲ; ಬದುಕಿದ್ದರೆ ಪ್ರಾಯಶ್ಚಿತ್ತವನ್ನಾದರೂ ಮಾಡಿಕೊಳ್ಳ ಬಹುದು. ಮಹಾರಾಜನೇ! ಅಶ್ವಮೇಧ ಯಾಗವನ್ನು ಮಾಡಿ ನಿನ್ನ ಪಾಪಶಂಕೆಯನ್ನು ಹರಿಸಿಕೊ? ಇನ್ನೇಳು; ರಣದಲ್ಲಿ ಸತ್ತ ಮಹೀ ಪಾಲರ ರಾಷ್ಟ್ರಗಳಿಗೆ ಹೋಗಿ ಅವರವರ ಸೋದರರು, ಪುತ್ರರು, ಪೌತ್ರರು—ಯಾರಿದ್ದರೆ ಅವರಿಗೆ ಯಥಾ ನ್ಯಾಯವಾಗಿ ರಾಜ್ಯಾಭಿಷೇಕ ಮಾಡು. ಗರ್ಭಸ್ಥರಾದ ಬಾಲರೂ ನಿನ್ನ ದಯೆಗೆ ಪಾತ್ರರೇ; ಅವ ರನ್ನು ಮರೆಯಬೇಡ. ಕುಮಾರರು ಇಲ್ಲದೆಡೆಯಲ್ಲಿ ಕನ್ನೆಯರಿಗೆ ಪಟ್ಟವನ್ನು ಕಟ್ಟು. ಹಾಗೆ ಮಾಡುವುದರಿಂದ ಸ್ತ್ರೀಯರು ತಮ್ಮ ಕಷ್ಟ ನಷ್ಟಗಳನ್ನು ಮರೆತು ಶೋಕವನ್ನು ಕಳೆದು ಹರ್ಷಚಿತ್ತರಾಗು ವರು. ಈ ವಿಧದಲ್ಲಿ ಸಕಲ ರಾಷ್ಟ್ರಗಳನ್ನೂ ಸಂತೈಸಿ ಶೋಕವನ್ನು ಬಿಟ್ಟು ಸ್ವಧರ್ಮವನ್ನು ಸಲಹು.''

ಇನ್ನೂ ಯುಧಿಷ್ಠಿರನ ಮನೋವ್ಯಾಧಿಯು ಹರಿಯಲಿಲ್ಲ. ವನ ವಾಸ, ಸಂನ್ಯಾಸ, ಪ್ರಾಯೋಪವೇಶ, ಇವಾವುದೂ ತನಗೆ ವಿಧೇಯವಲ್ಲ

ದಿರುವ ಪಕ್ಷಕ್ಕೆ ತಾನು ಪುನೀತನಾಗುವುದು ಹೇಗೆ? ತನಗೇನು ಗತಿ— ಎಂದು ಕಳವಳಿಸುತ್ತ ಯಾವ ಯಾವ ಕರ್ಮಗಳಿಗೆ ಯಾವ ಯಾವ ಪ್ರಾಯಶ್ಚಿತ್ತವು ವಿಹಿತವಾಗಿದೆ ಎಂದು ಪ್ರಶ್ನೆಮಾಡಿ ವ್ಯಾಸರಿಂದ ತಿಳಿದು ಕೊಂಡು, "ಮಹಾಮುನಿಯೇ! ಈ ನಿನ್ನ ಉಪದೇಶದಿಂದ ಹರ್ಷ ಚಿತ್ತನಾದೆನು. ದ್ವಿಜಶ್ರೇಷ್ಠನೇ! ಧರ್ಮವನ್ನು ಆಚರಿಸುವುದೂ, ರಾಜ್ಯ ಕಾರ್ಯವನ್ನು ನಿರ್ವಹಿಸುವುದೂ—ಇವೆರಡೂ ಒಂದಕ್ಕೊಂದು ವಿರುದ್ಧ ವ್ಯಾಪಾರವಾಗಿರುವುವು. ಈ ವಿರೋಧವನ್ನು ಸಮಂಜಸಮಾಡಲರಿ ಯದೆ ನಿತ್ಯವೂ ಕಳವಳಪಡುತ್ತಿದ್ದೇನೆ. ರಾಜಧರ್ಮ, ಚಾತುರ್ವರ್ಣ್ಯ ಧರ್ಮ, ಆಪದ್ಧರ್ಮ—ಎಂಬೀ ಧರ್ಮಗಳನ್ನೂ, ಧರ್ಮವನ್ನು ಅವ ಲಂಬಿಸಿ ಪೃಥ್ವಿಯನ್ನು ಜಯಿಸುವ ಹದನವನ್ನೂ ನಿನ್ನಿಂದ ಕೇಳಿ ತಿಳಿಯ ಲಪೇಕ್ಷಿಸುತ್ತೇನೆ ತಪೋನಿಧಿಯೇ!" ಎಂದು ನುಡಿದನು.

ಅದಕ್ಕೆ ವ್ಯಾಸರು—"ಮಹಾರಾಜನೇ! ಸಕಲ ಧರ್ಮಗಳನ್ನೂ ವಿಸ್ತಾರವಾಗಿ ತಿಳಿಯಬೇಕೆಂಬ ಕುತೂಹಲವಿದ್ದರೆ, ವೃದ್ಧ ಪಿತಾಮಹ ನಾದ ಭೀಷ್ಮನನ್ನು ಕೇಳು. ಅವನು ಧರ್ಮಗಳೆಲ್ಲವನ್ನು ಬಲ್ಲವನು; ಧರ್ಮ ರಹಸ್ಯವನ್ನು ಕುರಿತು ನೀನು ಪಡುವ ಸಂಶಯಗಳನ್ನು ಬಗೆ ಹರಿಸುವುದಕ್ಕೆ ಅವನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ" ಎಂದರು.

ಆ ಮಾತನ್ನು ಕೇಳಿ ಯುಧಿಷ್ಠಿರನು—"ಜ್ಞಾತಿಗಳನ್ನು ಹಾಳು ಮಾಡಿ ಲೋಕಕ್ಕೇ ಅಪರಾಧಿಯಾಗಿ ನಾನು ಅಜೇಯನಾದ ಆ ಯೋಧ ನನ್ನು ಮೋಸದಿಂದ ಕೆಡವಿಸಿ ಅವನಿಗೆ ನನ್ನ ಮೋರೆಯನ್ನು ಹೇಗೆ ತೋರಿಸಲಿ" ಎಂದು ಉತ್ತರ ಕೊಟ್ಟನು.

ಆ ಮಾತನ್ನು ಕೇಳಿ ಯದುಶ್ರೇಷ್ಠನಾದ ಶ್ರೀಕೃಷ್ಣನು ಚಾತು ರ್ವರ್ಣ್ಯದ ಹಿತವನ್ನು ಚಿಂತಿಸುತ್ತ, ಯುಧಿಷ್ಠಿರನನ್ನು ಸಂಬೋಧಿಸಿ ಇಂತೆಂದು ನುಡಿದನು:—

"ನೃಪೋತ್ತಮನೇ! ನೀನು ಹೀಗೆ ಬಿಡದೆ ವ್ಯಥೆಪಡುತ್ತಿರುವುದು ಸರಿಯಲ್ಲ; ಭಗವಾನ್ ವ್ಯಾಸನು ಹೇಳಿದಂತೆ ಮಾಡು. ಮಹಾತ್ಮ ರಾದ ಬ್ರಾಹ್ಮಣರೂ ಬಲವೀರ್ಯಸಂಪನ್ನರಾದ ಸೋದರರೂ ನಿನ್ನನ್ನು

ಯಾಚಿಸುತ್ತ ನಿಂತಿರುವರು. ಹತಶೇಷರಾದ ರಾಜರೂ, ರಾಜ್ಯದ ನಾಲ್ಕು ವರ್ಣಗಳ ಪ್ರಜಾಪ್ರಮುಖರೂ ಇಲ್ಲಿ ನೆರೆದಿರುವರು. ದ್ರೌಪದಿಯೂ ನಿನ್ನನ್ನು ಬೇಡುತ್ತಿದ್ದಾಳೆ. ನಿನ್ನ ಹಿತೈಷಿಗಳಾದ ನಮ್ಮೆಲ್ಲರ ಪ್ರಾರ್ಥನೆಯನ್ನೂ ನೆರವೇರಿಸಿ ಲೋಕವನ್ನುದ್ಧಾರಮಾಡು.''

ಯುಧಿಷ್ಠಿರನು ಶ್ರೀಕೃಷ್ಣನ ಮಾತನ್ನು ಕೇಳಿದೊಡನೆಯೇ, ಯಾವ ವಿಚಾರವನ್ನೂ ಮಾಡದೆ, ಪ್ರಾಯೋಪವೇಶ ಮಾಡುವೆನೆಂದು ನಿಶ್ಚಯಿಸಿ ಕುಳಿತಿದ್ದ ಸ್ಥಳವನ್ನು ಬಿಟ್ಟು ಕುಟುಂಬ ಪರಿವಾರ ಸಮೇತನಾಗಿ ಧೃತರಾಷ್ಟ್ರನನ್ನು ಮುಂದುಮಾಡಿಕೊಂಡು ಕುರುನಗರಕ್ಕೆ ಹೊರಟು ಸರ್ವಾಲಂಕಾರಭೂಷಿತವಾಗಿದ್ದ ಅರಮನೆಯನ್ನು ಹೊಕ್ಕನು. ಅಲ್ಲಿ ಶ್ರೀಕೃಷ್ಣನು ಸಕಲ ಬಂಧು ಮಿತ್ರರ, ಪುರಜನ ರಾಷ್ಟ್ರಜನರ ಸಮಕ್ಷದಲ್ಲಿ ಸರ್ವತೋಭದ್ರಾಸನವೆಂಬ ಪೀಠದ ಮೇಲೆ ದ್ರೌಪದೀ ಸಮೇತ ಯುಧಿಷ್ಠಿರನನ್ನು ಕುಳ್ಳಿರಿಸಿ ಸಕಲ ವೈಭವದೊಂದಿಗೆ ಶಾಸ್ತ್ರೋಕ್ತವಾಗಿ ಪೂರ್ಣ ಪಾಂಚಜನ್ಯದಿಂದ ಆತನಿಗೆ ರಾಜ್ಯಾಭಿಷೇಕ ಮಾಡಿದನು. ಶ್ರೀಕೃಷ್ಣನ ಅನುಜ್ಞೆಯಿಂದ ರಾಜರ್ಷಿ ಧೃತರಾಷ್ಟ್ರನೂ ನೆರೆದಿದ್ದ ・ಪ್ರಜೆಗಳೂ ಯುಧಿಷ್ಠಿರನಿಗೆ ಅಭಿಷೇಕ ಮಾಡಿದರು.

ಇಂತು, ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿ ಮಾನುಷ ದೇಹವನ್ನು ತಾಳಿದ ಶ್ರೀಕೃಷ್ಣನು ಕುಂತೀಪುತ್ರನಿಗೆ ರಾಜ್ಯಾಭಿಷೇಕವನ್ನು ಮಾಡಿ ನಿಷ್ಕಂಟಕ ಧರ್ಮಸಾಮ್ರಾಜ್ಯವನ್ನು ಸಂಸ್ಥಾಪನೆ ಮಾಡಿದನು.

ಅಭಿಷಿಕ್ತನಾದ ಕೂಡಲೆ ಯುಧಿಷ್ಠಿರನು ಭೀಮಸೇನನಿಗೆ ಯುವರಾಜ ಪಟ್ಟವನ್ನು ಕಟ್ಟಿ ಅರ್ಜುನ ನಕುಲ ಸಹದೇವರನ್ನೂ, ನೀತಿಜ್ಞನಾದ ವಿದುರ, ಸರ್ವಗುಣ ಸಂಪನ್ನನಾದ ವೃದ್ಧ ಸಂಜಯ, ಧೌಮ್ಯ, ಯುಯುತ್ಸು ಪ್ರಭೃತಿಗಳನ್ನೂ ಅವರವರ ಯೋಗ್ಯತಾನುಗುಣವಾದ ಉದ್ಯೋಗಗಳಲ್ಲಿಟ್ಟು—''ಧೃತರಾಷ್ಟ್ರನು ಸಮಸ್ತ ರಾಜ್ಯಕ್ಕೂ ನಿಮಗೂ ನನಗೂ ನಾಥನು; ಅವನ ಇಷ್ಟಾನುಸಾರವಾಗಿ ಸರ್ವರೂ ನಡೆಯುವುದು '' ಎಂದು ಆಜ್ಞೆಮಾಡಿದನು.

ಆ ಬಳಿಕ, ಉದಾರ ಬುದ್ಧಿಯುಳ್ಳ ಮಹಾರಾಜನು, ಯುದ್ಧದಲ್ಲಿ ಸತ್ತ ಜ್ಞಾತಿ ಪ್ರಭೃತಿಗಳಿಗೂ ಬಂಧು ಮಿತ್ರರಲ್ಲದ ರಾಜರಿಗೂ ಶ್ರಾದ್ಧವನ್ನು ಮಾಡಿ, ಸಹಧರ್ಮಿಣಿಯಾದ ದ್ರೌಪದಿಯೊಡನೆ ಕೂಡಿ ದ್ರೋಣ, ಕರ್ಣ, ಧೃಷ್ಟದ್ಯುಮ್ನ, ಅಭಿಮನ್ಯು, ಘಟೋತ್ಕಚ, ವಿರಾಟ, ದ್ರುಪದ ಪ್ರಭೃತಿಗಳನ್ನೂ, ದ್ರೌಪದಿಯ ಪಂಚಪುತ್ರರನ್ನೂ ಉದ್ದೇಶಿಸಿ ಬ್ರಾಹ್ಮಣರಿಗೆ ಧನ ರತ್ನ ಗೋವುಗಳನ್ನು ದಾನಮಾಡಿ, ಯುದ್ಧದಲ್ಲಿ ಸತ್ತ ವೀರರ ಮಡದಿ ಮಕ್ಕಳಿಗೆ ಜೀವನೋಪಾಯಗಳನ್ನು ಕಲ್ಪಿಸಿ ಸಲಹಿದನು. ಈ ರೀತಿಯಲ್ಲಿ ದಯಾಳುವಾದ ಯುಧಿಷ್ಠಿರನು ಶತ್ರು ಮಿತ್ರರ ಋಣವನ್ನು ತೀರಿಸಿ ಕೃತಕೃತ್ಯನಾದನು.

---

# ಹದಿನಾಲ್ಕನೆಯ ಅಧ್ಯಾಯ

## ಯುಧಿಷ್ಠಿರನಿಗೆ ಧರ್ಮೋಪದೇಶ, ಭೀಷ್ಮನ ಸ್ವರ್ಗಾರೋಹಣ.

ಯುಧಿಷ್ಠಿರನು ಬೇಡವೆಂದರೂ ಶ್ರೀಕೃಷ್ಣನು ಅವನಿಗೆ ಪಟ್ಟಾಭಿಷೇಕವನ್ನು ಮಾಡಿದನು. ದುಷ್ಟ ದುರ್ಯೋಧನನ ಸ್ವಾರ್ಥಪರತೆಯಿಂದ, ಕುರುಕುಲಕ್ಕೇ ಅಲ್ಲ, ಲೋಕಕ್ಕೇ ಎಷ್ಟು ಅನಿಷ್ಟವುಂಟಾಯಿತೋ, ಪ್ರಕೃತದಲ್ಲಿ ಯುಧಿಷ್ಠಿರನ ಸ್ವಾರ್ಥವೈರಾಗ್ಯದಿಂದ ಲೋಕಕ್ಕೆ ಅಷ್ಟು ಅನಿಷ್ಟವು ಪ್ರಾಪ್ತವಾಗುವ ಸಂಭವವು ಕಂಡಿತು. ಯುಧಿಷ್ಠಿರನು ಅಹಿಂಸಾಪರನು, ಕ್ಷಮಾಶೀಲನು, ಸತ್ಯವ್ರತನು, ಕರುಣಾಳು ; ಆದರೆ ಬಂಧು ವಿಯೋಗದ ದೆಸೆಯಿಂದ ಸ್ವಧರ್ಮ ವಿಮುಖನು. ರಾಜ್ಯಭಾರವನ್ನು ಕೈಕೊಂಡರೆ ತಾನು ಧರ್ಮದ ಜೊತೆಗೆ ಹಿಂಸಾದಿ ಅಧರ್ಮಗಳನ್ನೂ ಮಾಡಬೇಕಾಗುವುದೆಂಬ ಭಯದಿಂದ ರಾಜ್ಯವನ್ನೂ ರಾಜ್ಯ ಸುಖವನ್ನೂ ತೊರೆದು ಸಂನ್ಯಾಸಿಯಾಗುವ ಆಲೋಚನೆ ಮಾಡುತ್ತಿದ್ದನು. ಜ್ಯೇಷ್ಠನ ದೃಷ್ಟಾಂತವನ್ನು ಅನುಸರಿಸಿ ಅರ್ಜುನಾದಿಗಳೂ ವೈರಾಗ್ಯವನ್ನು ತಾಳುವವರಾಗಿದ್ದಿದ್ದ ಪಕ್ಷದಲ್ಲಿ ಕುರುರಾಜ್ಯವು ಅರಾಜಕವಾಗುತ್ತಿದ್ದಿತು; ಇಲ್ಲವೆ, ಅಪರ ದುರ್ಯೋಧನನ ಕರ ಕವಳವಾಗುತ್ತಿದ್ದಿತು. ಅಹಿಂಸೆ, ಕ್ಷಮಾಶೀಲತೆ, ಸತ್ಯವಚನ—ಇವು ಧರ್ಮಲಕ್ಷಣಗಳಾದರೂ, ಯುಧಿಷ್ಠಿರನ ಸ್ವಭಾವಸಿದ್ಧವಾದ ಗುಣಗಳಾದರೂ, ತನ್ನ ಬಂಧುಗಳು ಹತವಾಗುವುದಕ್ಕೆ ಮುಂಚೆ, ಆ ಧರ್ಮಗಳಿಗೆ ಅಪವಾದಗಳುಂಟೆಂದು ಒಪ್ಪಿಯೇ, ಸಾಮಾನ್ಯ ಕಾಲದಲ್ಲಿ ನಿತ್ಯಧರ್ಮವನ್ನು ಆಚರಿಸದವರೂ, ನಿತ್ಯ ಧರ್ಮಕ್ಕೆ ವಿರುದ್ಧವಾದರೂ ಸಂಕಟ ಕಾಲದಲ್ಲಿ ಆಪದ್ಧರ್ಮವನ್ನು ಆಚರಿಸದವರೂ, ಇಬ್ಬರೂ ಮೂರ್ಖರೇ ಎಂದು ಹೇಳಿದವನು, ಯುದ್ಧವು ಆಪದ್ಧರ್ಮವಾದರೂ, ಆತ್ಮರಕ್ಷಣೆ, ಸ್ವಜನ ರಕ್ಷಣೆ, ದೇಶರಕ್ಷಣೆ—ಇವುಗಳಿಗೆ ಉಪಾಯಾಂತರವಿಲ್ಲದೆ ಅನನ್ಯೋಪಾಯವಾಗಿದ್ದರೂ, ಅದು ಸಂಪೂರ್ಣವಾಗಿ ಅಧರ್ಮ

ವೆಂದೇ ಭಾವಿಸಿದನು. ಯುಧಿಷ್ಠಿರನು ಕೃಷ್ಣಭಕ್ತ; ಕೃಷ್ಣನು ಕಾಮ ಕ್ರೋಧವಿಲ್ಲದವನು, ಸರ್ವಜ್ಞನು, ಧರ್ಮೈಕಪರನು ಎಂದು ಯುಧಿಷ್ಠಿರನು ಸಂಪೂರ್ಣವಾಗಿ ನಂಬಿದ್ದನು; ಅಂತಹ ಕೃಷ್ಣನು ಪಾಪ ನಿವಾರಣೆಗಾಗಿಯೂ ಲೋಕ ಹಿತಾರ್ಥವಾಗಿಯೂ ನಿರ್ಮಿಸಿದ ಚಾತುರ್ವರ್ಣ್ಯ ವಿಭಾಗದಿಂದ ತನ್ನ ಪಾಲಿಗೆ ಬಂದ ಕ್ಷತ್ರಿಯ ಧರ್ಮ ವನ್ನು ಶೋಕ ಮೋಹ ಪರವಶನಾಗಿ ಹೇಯವೆಂದೆಣಿಸಿ, ಸ್ವಧರ್ಮ ಪರಿತ್ಯಾಗ ಮಾಡುವುದೂ, ಪರಧರ್ಮ ಸ್ವೀಕಾರಮಾಡುವುದೂ, ಆಶ್ರಿತ ರನ್ನು ರಕ್ಷಿಸದಿರುವುದೂ, ಭೃತ್ಯರನ್ನು ಸಲಹದಿರುವುದೂ, ಶರಣಾಗತ ರನ್ನು ತ್ಯಜಿಸುವುದೂ ಅಧರ್ಮಗಳಾದರೂ, ತನ್ನ ಮುಖ್ಯ ಕರ್ತವ್ಯ ಗಳಾದ ದುಷ್ಟನಿಗ್ರಹ ಶಿಷ್ಟಪರಿಪಾಲನೆಯನ್ನು ಬಿಡುವ ಆಲೋಚನೆ ಯನ್ನೇ ಮಾಡುತ್ತಿದ್ದನು. ಯುಧಿಷ್ಠಿರನಿಗೆ ಧರ್ಮೋಪದೇಶವನ್ನು ಮಾಡಿ ಅವನ ಶೋಕ ಮೋಹವನ್ನು ಹೋಗಲಾಡಿಸುವುದಕ್ಕೆ ತಾನು ಶಕ್ತನಾದರೂ ರಾಜನೀತಿಜ್ಞನಾದ ಕೃಷ್ಣನು ಆ ಕಾರ್ಯವನ್ನು ಭೀಷ್ಮ ನಿಂದ ಮಾಡಿಸಿದರೆ ತನ್ನ ಉದ್ದೇಶವು ನೆರವೇರುವುದೆಂದು ಭಾವಿಸಿ ಯುಧಿಷ್ಠಿರನ ಸಂಗಡ ಭೀಷ್ಮನ ಬಳಿಗೆ ಹೊರಟನು.

ಭರತ ಪಿತಾಮಹನಾದ ಭೀಷ್ಮನು ಓಘವತೀ ತೀರದಲ್ಲಿ ಋಷಿ ಗಳಿಂದ ಪರಿವೃತನಾಗಿ ಶರಶಯ್ಯೆಯಲ್ಲಿ ಮಲಗಿ, ದಿವಾಕರನು ಉತ್ತರಾ ಯಣವನ್ನು ಪ್ರವೇಶಮಾಡಿದುದನ್ನರಿತು, ಶುಚಿರ್ಭೂತನಾಗಿ ಏಕಾಗ್ರ ಚಿತ್ತದಿಂದ ಅಂಜಲಿಬದ್ಧನಾಗಿ—"ಕೃಷ್ಣಾ! ಸತ್ಯವು ಹೇಗೆ ವಿಷ್ಣು ಮಯವೋ, ಸರ್ವವೂ ಹೇಗೆ ವಿಷ್ಣುಮಯವೋ, ಹಾಗೆ ನನ್ನ ಮನಸ್ಸೂ ವಿಷ್ಣುಮಯವಾಗಲಿ; ನನ್ನ ಪಾಪಗಳೆಲ್ಲವೂ ನಾಶವಾಗಲಿ. ನಾನು ನಿನ್ನ ಭಕ್ತ, ನಿನ್ನ ಶರಣಾಗತ, ನನಗೆ ಸದ್ಗತಿಯನ್ನು ನೀಡು. ದೇವೋ ತ್ತಮನೇ! ನನಗೆ ಯಾವುದು ಶ್ರೇಯಸ್ಸೋ ಅದನ್ನು ದಯೆಮಾಡು" ಎಂದು ಪ್ರಾರ್ಥಿಸುತ್ತ ಕೃಷ್ಣನಲ್ಲಿಯೇ ಮನಸ್ಸಿಟ್ಟು 'ಕೃಷ್ಣಾಯ ನಮಃ' ಎಂದು ಪ್ರಣಾಮ ಮಾಡಿದನು.

ಅದನ್ನರಿತು ಭಕ್ತವತ್ಸಲನಾದ ಕೃಷ್ಣನು ಯುಧಿಷ್ಠಿರಾದಿಗಳ ನ್ನೊಡಗೊಂಡು ಓಘವತೀ ತೀರಕ್ಕೆ ಹೊರಟನು. ಸಾಯಂ ಸೂರ್ಯನ

ಸಮುಪ್ರಭೆಯುಳ್ಳ ಭೀಷ್ಮನನ್ನು ದೂರದಿಂದ ನೋಡಿ ಎಲ್ಲರೂ ರಥದಿಂ ದಿಳಿದು ಅಲ್ಲಿ ನೆರೆದಿದ್ದ ಮುನಿವೃಂದಕ್ಕೆ ಅಭಿವಂದಿಸಿದ ಬಳಿಕ ಯದು ಪುಂಗವನೂ ಕೌರವರೂ ತಪೋವೃದ್ಧನಾದ ಭೀಷ್ಮನ ಸುತ್ತಲೂ ಕುಳಿತರು. ನಂದಿಹೋಗುತ್ತಿರುವ ಅಗ್ನಿಜ್ವಾಲೆಯಂತೆ ಬೆಳಗುತ್ತಿದ್ದ ಭೀಷ್ಮನನ್ನು ನೋಡಿ ದೀನಮನಸ್ಸುಳ್ಳವನಾಗಿ ಕೃಷ್ಣನು—"ಮಹಾ ಬಾಹುವೇ ! ಜ್ಞಾನೇಂದ್ರಿಯಗಳು ಪ್ರಸನ್ನವಾಗಿವೆಯೋ ? ಬುದ್ಧಿಯು ವ್ಯಾಕುಲವಿಲ್ಲದೆ ಇದೆಯೋ ? ನೋವು ವಾಸಿಯೇ ? ಮನಃಕ್ಲೇಶ ವನ್ನು ಅನುಭವಿಸುವುದಕ್ಕಿಂತ ಶರೀರ ಕ್ಲೇಶವನ್ನು ಅನುಭವಿಸುವುದು ಕಷ್ಟ. ಸಣ್ಣದಾದ ಸಿಗುರು ಹೊಕ್ಕರೂ ಮೈಯ ನೋವನ್ನು ತಾಳಿ ಕೊಳ್ಳುವುದು ಶ್ರಮ ; ಇನ್ನು, ನೂರಾರು ಬಾಣಗಳು ಮೈಯಲ್ಲಿ ನಾಟಿರುವಾಗ ಯಾತನೆಯನ್ನು ಅನುಭವಿಸುವುದು ಶ್ರಮವೆಂದು ಹೇಳಬೇಕೆ ?" ಎಂದು ಕುಶಲಪ್ರಶ್ನೆ ಮಾಡಿ—"ಭೀಷ್ಮ! ನೀನು ಪ್ರಾಜ್ಞ, ಧರ್ಮಜ್ಞ, ಧರ್ಮೈಕ ತತ್ಪರನು, ಸತ್ಯವಂತನು, ಶೂರನು ; ಮೃತ್ಯುವು ಕೂಡ ನಿನ್ನ ಆಜ್ಞೆಯಲ್ಲಿರುವುದು. ನೀನು ಭೂಲೋಕವನ್ನು ಬಿಟ್ಟತರುವಾಯ ನಿನ್ನ ಜ್ಞಾನವೆಲ್ಲವೂ ನಿನ್ನ ಸಂಗಡಲೇ ಹೋಗಿಬಿಡು ವುದು. ನಿನ್ನಿಂದ ಧರ್ಮವೃತ್ತಾಂತವನ್ನು ಕೇಳಬೇಕೆಂದೇ ಇವರೆಲ್ಲರೂ ಬಂದಿರುವರು. ಯುಧಿಷ್ಠಿರನು ಬಹುಶ್ರುತನಾದರೂ ಜ್ಞಾತಿ ವಿಯೋಗ ದಿಂದ ಕಳವಳಪಡುತ್ತಿದ್ದಾನೆ. ಧರ್ಮಾರ್ಥ ಯುಕ್ತವಾದ ನಿನ್ನ ಸತ್ಯ ವಾಕ್ಕಿನಿಂದ ಅವನ ಶೋಕವನ್ನು ಶಮನಮಾಡು " ಎಂದನು.

ಆಗ ಭೀಷ್ಮನು ಕೃತಾಂಜಲಿಯಾಗಿ, "ಲೋಕನಾಥನೇ ! ನಿನ್ನ ಮಾತನ್ನು ಕೇಳಿ ನಾನು ಹರ್ಷಚಿತ್ತನಾದೆನು. ವಾಕ್ಪತಿಯೇ ! ಹೇಳ ತಕ್ಕುದೆಲ್ಲವೂ ನಿನ್ನ ವಾಕ್ಕಿನಲ್ಲಿಯೇ ಅಡಗಿರಲಾಗಿ ನಿನ್ನ ಸನ್ನಿಧಿಯಲ್ಲಿ ನಾನು ಹೇಳತಕ್ಕುದೇನಿದೆ ? ಕೃಷ್ಣಾ ! ಶರತಾಪದಿಂದ ನನ್ನ ಶರೀರವು ದುರ್ಬಲವಾಗಿದೆ; ಮಾತಾಡುವುದಕ್ಕೆ ಶಕ್ತಿ ಸಾಲದು ; ಪ್ರಾಣವಾಯು ಗಳು ಹೊರಡಲು ತ್ವರೆಮಾಡುತ್ತಿವೆ; ಬುದ್ಧಿ ಭ್ರಮಿಸುತ್ತಿದೆ. ಈ ಅವಸ್ಥೆಯಲ್ಲಿ ನಾನು ಉಪದೇಶ ಮಾಡುವುದು ಹೇಗೆ ? ಕೃಷ್ಣ ! ನನಗೆ ದಿಕ್ಕುಗಳೂ ಭೂಮ್ಯಾಕಾಶಗಳೂ—ಒಂದೂ ಕಾಣುವುದಿಲ್ಲ;

ಕೇವಲ ನಿನ್ನ ಪ್ರಭಾವದಿಂದ ಪ್ರಾಣವನ್ನಿಟ್ಟುಕೊಂಡಿದ್ದೇನೆ. ನೀನು ಸಕಲವನ್ನೂ ಬಲ್ಲವನು; ಧರ್ಮಕರ್ಮಗಳೆಲ್ಲಕ್ಕೂ ನೀನೇ ಮೂಲ. ನೀನೇ ಯುಧಿಷ್ಠಿರನಿಗೆ ಉಪದೇಶವನ್ನು ಮಾಡು. ನೀನಿರುವಲ್ಲಿ ನಾನು ಉಪದೇಶಮಾಡುವುದೆಂದರೇನು? ಗುರುವಿನ ಮುಂದೆ ಶಿಷ್ಯನೆ?'' ಎಂದನು.

ಕೃಷ್ಣನು—''ಕೌರವ ಧುರಂಧರನೇ! ನಿನ್ನಮಾತು ನಿನಗೊಪ್ಪುವುದು. ನೀನು ಮಹಾತ್ಮನು, ಶಾಸ್ತ್ರಾರ್ಥವನ್ನು ಬಲ್ಲವನು, ಕ್ಷಮಾಶೀಲನು; ನನ್ನ ವರವನ್ನು ಹಿಡಿ, ನಿನ್ನ ನೋವೂ ಬಳಲಿಕೆಯೂ ಹೋಗುವುವು; ನಿನ್ನ ಬುದ್ಧಿಯು ತಿಳಿಯಾಗುವುದು; ನೀನು ಬಲ್ಲ ತತ್ತ್ವಗಳೆಲ್ಲವೂ ಸ್ಫೂರ್ತಿಗೆ ಬರುವುವು; ಸಮಸ್ತ ಭೂತ ಭವಿಷ್ಯತ್ತೂ ನಿನಗೆ ಕರತಲಾಮಲಕವಾಗುವುದು'' ಎಂದನು.

ತರುವಾಯ ಎಲ್ಲರೂ ಭೀಷ್ಮನಿಗೆ ನಮಸ್ಕಾರಮಾಡಿ ತಂತಮ್ಮ ಮನೆಗಳಿಗೆ ಹೊರಟುಹೋದರು.

ಮರುದಿವಸ ಎಲ್ಲರೂ ಬಂದು ಭೀಷ್ಮನನ್ನು ಬಳಸಿ ಕುಳಿತರು. ಕೃಷ್ಣನು, ''ರಾಜಸತ್ತಮನೇ! ರಾತ್ರಿ ಸುಖವಾಗಿ ನಿದ್ದೆಹೋದೆಯಾ? ಬುದ್ಧಿಯು ತಿಳಿಯಾಗಿದೆಯೆ? ಮೈಯು ನೋವಿಲ್ಲವಲ್ಲವೆ? ಮನಸ್ಸಿನಲ್ಲಿ ವ್ಯಾಕುಲವಿಲ್ಲವಲ್ಲವೆ?'' ಇಂತೆಂದು ಕುಶಲಪ್ರಶ್ನೆಮಾಡಲಾಗಿ ಭೀಷ್ಮನು—''ಕೃಷ್ಣ! ನಿನ್ನ ಅನುಗ್ರಹದಿಂದ ನನ್ನ ದಾಹ ಮೋಹ ಶ್ರಮಗಳೆಲ್ಲವೂ ಹೋದುವು; ನನಗೆ ಯಾವ ವಿಧವಾದ ಯಾತನೆಯೂ ಇಲ್ಲ, ನೆಮ್ಮದಿಯಾಗಿದ್ದೇನೆ. ನಿನ್ನ ಪ್ರಸಾದ ಬಲದಿಂದ ಶಿಷ್ಟಪ್ರೋಕ್ತವಾದ ದೇಶ ಜಾತಿ ಕುಲಶ್ರೇಣೀ ಧರ್ಮಗಳೆಲ್ಲವೂ ನನ್ನ ಹೃದಯದಲ್ಲಿ ಬಂದು ನಿಂತಿವೆ; ಬುದ್ಧಿ ನಿರ್ಮಲವಾಗಿರುವುದು; ನಿನ್ನ ಧ್ಯಾನಮಾತ್ರದಿಂದ ನಾನು ಯೌವನಸಂಪನ್ನನಂತೆ ದೃಢಕಾಯನಾಗಿರುವೆನು; ಈಗ ಲೋಕಹಿತಾರ್ಥವಾಗಿ ಯುಧಿಷ್ಠಿರನಿಗೆ ಸಮಸ್ತ ಧರ್ಮಗಳನ್ನೂ ಉಪದೇಶಮಾಡಬಲ್ಲೆನು. ಆದರೂ ಯುಧಿಷ್ಠಿರನಿಗೆ ನೀನೇ ಏಕೆ ಉಪದೇಶವನ್ನು ಮಾಡೆ?'' ಎಂದು ಕೇಳಿದನು.

ಅದಕ್ಕೆ ಕೃಷ್ಣನು—"ಕೌರವನೇ! ಸಮಸ್ತ ಹಿತಾಹಿತಕ್ಕೂ ನಾನೇ ಮೂಲವೆಂಬುದನ್ನು ನೀನು ಕಾಣೆಯಾ? ನಾನು ಪೂರ್ಣ ಯಶಸ್ಸುಳ್ಳವನೆಂದರೆ ಯಾರೂ ವಿಸ್ಮಯಬಡರು. ನಿನ್ನ ಯಶಸ್ಸು ಲೋಕದಲ್ಲಿ ಪಸರಿಸಿ ಶಾಶ್ವತವಾಗಿ ನೆಲಸಬೇಕೆಂಬುದೇ ನನ್ನ ಸಂಕಲ್ಪ. ನಿನ್ನ ಉಪದೇಶವು ವೇದವಾಕ್ಯದಂತೆ ಸರ್ವಕಾಲಕ್ಕೂ ಪ್ರಮಾಣವಾಗಿರುವುದು. ಅಲ್ಲದೆ, ನೀನು ವಯೋವೃದ್ಧನು; ನಿನ್ನ ನಡೆ ನುಡಿಗಳು ಶ್ರುತಿಗನುಸಾರವಾಗಿರುವುವು; ಜನ್ಮಪ್ರಭೃತಿ ನೀನು ಪಾಪ ಲೇಶವನ್ನೂ ಮಾಡಿದವನಲ್ಲ. ಧರ್ಮೋಪದೇಶವನ್ನು ಬಯಸುವವರಿಗೆ ಉಪದೇಶ ಮಾಡುವುದು ಜ್ಞಾನಿಗಳ ಕರ್ತವ್ಯ. ನೀನು ಸಕಲ ಧರ್ಮ ವೇತ್ತೃವೆಂದು ರಾಜರೆಲ್ಲರೂ ಹೊಗಳುವರು. ತಂದೆಯೋಪಾದಿಯಲ್ಲಿ ನೀನು ಈ ಭೂಪಾಲನಿಗೆ ನೀತಿಯನ್ನು ಬೋಧಿಸು" ಎಂದನು.

ಆ ಮಾತನ್ನು ಕೇಳಿ ಭೀಷ್ಮನು ಪ್ರಫುಲ್ಲಚಿತ್ತನಾಗಿ ಉಪದೇಶ ಮಾಡಲೊಪ್ಪಿ, "ಧರ್ಮಾತ್ಮನೂ ಸದಾಚಾರ ಸಂಪನ್ನನೂ ಆದ ಯುಧಿಷ್ಠಿರನು ಧರ್ಮ ಕರ್ಮಗಳನ್ನು ಕುರಿತು ಪ್ರಶ್ನೆಮಾಡಲಿ, ನಾನು ಧರ್ಮಗಳನ್ನು ಹೇಳುವೆನು" ಎಂದನು.

ಆ ಭೂಪಾಲನು ಪೂಜ್ಯರಾದ ಗುರುಹಿರಿಯರನ್ನೂ ಜ್ಞಾತಿಗಳನ್ನೂ ಮಿತ್ರರನ್ನೂ ಕೊಂದು ತಾನು ಅಪರಿಮಿತ ನರಹತ್ಯ ಮಾಡಿದೆನೆಂದು ನಿನ್ನಿದಿರಿಗೆ ಬರಲು ನಾಚುತ್ತಾನೆ ಎಂದು ಕೃಷ್ಣನು ಹೇಳಿದನು.

ಆ ಮಾತಿಗೆ ಭೀಷ್ಮನು—"ಅಧ್ಯಯನ ದಾನ ತಪಸ್ಸುಗಳನ್ನು ಮಾಡುವುದು ಹೇಗೆ ಬ್ರಾಹ್ಮಣರ ಧರ್ಮವೋ ಹಾಗೆ ಯುದ್ಧಮಾಡಿ ರಣರಂಗದಲ್ಲಿ ದೇಹವನ್ನು ತ್ಯಜಿಸುವುದು ಕ್ಷತ್ರಿಯರ ಧರ್ಮ. ಅನ್ಯಾಯವಾದ ಯುದ್ಧದಲ್ಲಿ ಪ್ರವರ್ತಿಸುವವರು ತಂದೆಯಾಗಲಿ, ತಾತನಾಗಲಿ, ಗುರುವಾಗಲಿ, ಬಂಧುವಾಗಲಿ–ಅವರನ್ನು ಕ್ಷತ್ರಿಯರಾದವರು ಕೊಲ್ಲುವುದು ಅಧರ್ಮವಲ್ಲ; ಅದು ಅವರ ವಿಹಿತ ಕರ್ಮ. ಯಮ ನಿಯಮಗಳನ್ನು ತಿರಸ್ಕರಿಸಿ ಸನಾತನ ಧರ್ಮ ಸೇತುವನ್ನುಲ್ಲಂಘಿಸುವ ಪಾಪಿಷ್ಠರು ಯಾರೇ ಆಗಲಿ ಅವರನ್ನು ಯುದ್ಧದಲ್ಲಿ ನಿಗ್ರಹಿಸುವ

ಕ್ಷತ್ರಿಯನು ಧರ್ಮಜ್ಞನೆನಿಸಿಕೊಳ್ಳುವನು. ಅವನಿಗೆ ಇಹದಲ್ಲಿ ಕೀರ್ತಿಯೂ ಪರದಲ್ಲಿ ಸ್ವರ್ಗವೂ ಲಭಿಸುವುದು'' ಎಂದನು.

ಭೀಷ್ಮನು ಹಾಗೆನ್ನುತ್ತಲೆ ಯುಧಿಷ್ಠಿರನು ವಿನಯ ಭಾವದಿಂದ ಭೀಷ್ಮನ ಮುಂದೆ ಹೋಗಿ ಅವನ ಪಾದಗಳೆರಡನ್ನೂ ಹಿಡಿದು ನಮಸ್ಕಾರ ಮಾಡಿ ಕೈಜೋಡಿಸಿಕೊಂಡು ನಿಂತನು. ವೃದ್ಧ ಪಿತಾಮಹನು ಪ್ರೀತಿ ಯಿಂದ ಯುಧಿಷ್ಠಿರನ ಮಂಡೆಯನ್ನಾಘ್ರಾಣಿಸಿ, ''ಕುಳಿತುಕೊ, ಪ್ರಶ್ನೆಮಾಡು, ಹೆದರಬೇಡ'' ಎಂದನು.

ಯುಧಿಷ್ಠಿರನು ಕೃಷ್ಣನಿಗೆ ಪ್ರಣಾಮಮಾಡಿ ಪಿತಾಮಹನನ್ನು ಅಭಿವಂದಿಸಿ ಅಲ್ಲಿ ಕುಳಿತಿದ್ದ ಗುರುಜನರ ಅನುಜ್ಞೆಯನ್ನು ಪಡೆದು ತಾತನಿಗೆ ಇಂತೆಂದು ಪ್ರಶ್ನೆಗಳನ್ನು ಹಾಕತೊಡಗಿದನು:—

''ಧರ್ಮವೇತ್ತೃಗಳು ರಾಜಧರ್ಮವು ಪರಮ ಧರ್ಮವೆಂದು ಹೇಳುವರು. ಈ ಧರ್ಮವನ್ನು ನಿರ್ವಹಿಸುವುದು ಸುಲಭವಲ್ಲವೆಂ ದೆಣಿಸುತ್ತೇನೆ. ಸಮಸ್ತ ಜೀವಲೋಕಕ್ಕೆ ರಾಜಧರ್ಮವೇ ಆಶ್ರಯ ವಾಗಿರುವುದು. ಧರ್ಮಾರ್ಥ ಕಾಮಗಳೆಂಬ ತ್ರಿವರ್ಗಕ್ಕೂ ಅದೇ ಆಧಾರ; ಮೋಕ್ಷಕ್ಕೂ ಅದೇ ಸಾಧನ; ಲೋಕ ನಿಯಂತ್ರಣಕ್ಕೂ ಅದೇ ಉಪಾಯ. ಆದುದರಿಂದಲೇ ರಾಜರ್ಷಿಗಳು ಆ ಧರ್ಮವನ್ನು ಆಚರಿ ಸುವರು. ರಾಜರು ಆ ಧರ್ಮವನ್ನು ಅರಿಯದಿದ್ದರೆ ಲೋಕವು ಕೆಟ್ಟು ಅವ್ಯವಸ್ಥೆಗೆ ಬರುವುದು; ಸಕಲವಾದ ಅಮಂಗಳಗಳೂ ಆ ಧರ್ಮದಿಂದ ತೊಲಗುವುವು. ನೀನು ಜ್ಞಾನಿಗಳಲ್ಲಿ ಶ್ರೇಷ್ಠನೆಂದು ವಾಸುದೇವನು ಹೇಳುತ್ತಾನೆ. ಮೊದಲು ನನಗೆ ರಾಜಧರ್ಮವನ್ನು ಹೇಳು'' ಎಂದು ಯುಧಿಷ್ಠಿರನು ಪಿತಾಮಹನನ್ನು ಬೇಡಿಕೊಂಡನು.

ಭೀಷ್ಮನು, ''ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ಬ್ರಾಹ್ಮಣೇಭ್ಯೋ ನಮಃ'' ಎಂದು ವಂದನಾಪೂರ್ವಕವಾಗಿ ಧರ್ಮೋಪದೇಶವನ್ನು ಉಪಕ್ರಮಿಸಿದನು:—

''ಯುಧಿಷ್ಠಿರನೇ! ಪ್ರಜಾರಂಜನವನ್ನು ಬಯಸುವ ರಾಜರು ದೇವದ್ವಿಜರನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಅದರಿಂದ ಅವರು

ಧರ್ಮದ ಋಣವನ್ನು ತೀರಿಸುವರಲ್ಲದೆ ಪ್ರಜೆಗಳ ಭಕ್ತಿ ವಿಶ್ವಾಸಕ್ಕೂ ಪಾತ್ರರಾಗುವರು. ರಾಜರು ತಮ್ಮ ಇಷ್ಟಾರ್ಥಗಳನ್ನು ಕೇವಲ ದೈವದಿಂದಲೇ ಪಡೆಯರು. ಇಷ್ಟಸಿದ್ಧಿಗೆ ಪುರುಷ ಪ್ರಯತ್ನವೂ ಅತ್ಯಾವಶ್ಯಕವು. ಗುಣವಂತನೂ ಶೀಲವಂತನೂ ಜಿತೇಂದ್ರಿಯನೂ ಆದ ರಾಜನು ಸರ್ವದಾ ಶ್ರೀಮಂತನಾಗಿರುವನು. ಸಹಧರ್ಮಚಾರಿಣಿಯಾದ ಗರ್ಭಿಣಿಯು ತನಗೆ ಪ್ರಿಯವಾದುದನ್ನು ವರ್ಜಮಾಡಿ ಗರ್ಭದಲ್ಲಿರುವ ಮಗುವಿನ ಹಿತವನ್ನು ಸಾಧಿಸುವಂತೆ ಧರ್ಮಾನುವರ್ತಿಯಾದ ರಾಜನು ಆತ್ಮಸುಖವನ್ನು ಪರಿತ್ಯಜಿಸಿ ಪ್ರಜೆಗಳ ಹಿತವನ್ನು ಸಾಧಿಸುವನು. ದುರ್ಗಗಳಲ್ಲಿ ನರದುರ್ಗವೇ ಶ್ರೇಷ್ಠವಾದುದು. ಆದುದರಿಂದ ಪ್ರಾಜ್ಞರಾದ ರಾಜರು ನಾಲ್ಕು ವರ್ಣದವರ ಪ್ರೀತಿ ವಿಶ್ವಾಸವನ್ನು ಸಂಪಾದಿಸಬೇಕು. ಪಾಂಡವನೇ! ಸಂಕಟ ಕಾಲದಲ್ಲಿ ಧೈರ್ಯವನ್ನು ಬಿಡದಿರು. ಧೀರನಾದ ರಾಜನ ಆಜ್ಞೆಯನ್ನು ಉಲ್ಲಂಘಿಸಲು ಎಲ್ಲರೂ ಹೆದರುವರು. ನೀನು ನಿತ್ಯವೂ ಉದ್ಯೋಗ ರತನಾಗಿರು; ಉದ್ಯೋಗವು ಪುರುಷ ಲಕ್ಷಣವು. ಉದ್ಯಮಶೀಲನಲ್ಲದ ರಾಜನು ಅಪ್ರಯೋಜಕನೆಂದೆನಿಸಿಕೊಳ್ಳುವನು.

"ಅಧ್ಯಯನ ವಿಮುಖರಾದ ಬ್ರಾಹ್ಮಣರೂ ಯುದ್ಧ ವಿಮುಖರಾದ ಕ್ಷತ್ರಿಯರೂ ಲೋಕದಲ್ಲಿ ಬಾಳರು. ಪ್ರಜಾಪಾಲನೆ, ಸತ್ಯ ರಕ್ಷಣೆ, ವ್ಯವಹಾರದಲ್ಲಿ ಋಜುತ್ವ, ಪರವಿತ್ತವನ್ನು ಆಶಿಸದಿರುವುದು, ಕೊಡತಕ್ಕುದನ್ನು ಸಕಾಲದಲ್ಲಿ ಕೊಡುವುದು, ವಿಕ್ರಾಂತನಾಗಿರುವುದು—ಇವು ರಾಜನ ಅವಶ್ಯ ಧರ್ಮಗಳು. ರಾಜರು ದ್ಯೂತ ಮದ್ಯಪಾನಾದಿ ದುರಾಚಾರಗಳಲ್ಲಿ ಆಸಕ್ತರಾಗಿರಬಾರದು. ಯುಧಿಷ್ಠಿರನೇ! ಸಜ್ಜನರ ವರ್ತನವನ್ನು ಆಚರಿಸು, ವರ್ಣಾಶ್ರಮ ಧರ್ಮಗಳನ್ನು ರಕ್ಷಿಸು, ಸತ್ಯಭಾಷಿಯಾಗಿರು, ದಂಡಿಸುವಲ್ಲಿಯಾಗಲಿ ಕ್ಷಮಿಸುವಲ್ಲಿಯಾಗಲಿ ಪಾತ್ರಾಪಾತ್ರವನ್ನು ವಿವೇಚನೆ ಮಾಡದಿರಬೇಡ; ತಿಳಿವಳಿಕೆಯಿಲ್ಲದೆ ಪ್ರಹಾರ ಮಾಡಬೇಡ; ಹಗೆಗಳನ್ನು ನಿಗ್ರಹಿಸಿ ಶೋಕಪಡಬೇಡ; ನಿಷ್ಕಾರಣವಾಗಿ ಕ್ರೋಧ ಮಾಡಬೇಡ; ಅಪಕಾರಿಗಳಿಗೆ ಮೃದುವಾಗಿರಬೇಡ. ಪಣ್ಯದ್ರವ್ಯಗಳನ್ನು ಕೊಂಡು ಮಾರುವ ಸಲುವಾಗಿ ಊರೂರುಗಳಲ್ಲಿ

ಅಲೆಯುವ ವರ್ತಕರಿಗೆ ಹೆಚ್ಚು ತೆರಿಗೆಗಳನ್ನು ಹಾಕಿ ಪೀಡಿಸದಿರು. ಬೇಸಾಯ ಮಾಡುವವರು ಪೀಡಿತರಾಗಿ ನಿನ್ನ ರಾಜ್ಯವನ್ನು ಬಿಟ್ಟು ಹೋಗದಂತೆ ನೋಡಿಕೊ. ರಾಜರ ಭಾರವನ್ನು ಹೊತ್ತಿರುವವರೇ ಪ್ರಜೆಗಳ ಭಾರವನ್ನು ಕೂಡ ಹೊತ್ತಿರುವರು. ಕಾಮಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳಲ್ಲಿ ಲೋಭಿಗಳನ್ನೂ ಮೂರ್ಖರನ್ನೂ ಇಡಬೇಡ. ಅಪ್ರಯೋಜಕರೂ ಕಾಮಕ್ರೋಧ ಪರತಂತ್ರರೂ ಆದವರನ್ನು ಅಧಿಕಾರದಲ್ಲಿಟ್ಟರೆ ಪ್ರಜೆಗಳು ಕ್ಲೇಶಪಡುವರು.

"ರಾಜರು ಯುದ್ಧವಿಲ್ಲದೆಯೇ ವಿಜಯವನ್ನು ಪಡೆಯಬೇಕು. ಯುದ್ಧದಿಂದ ಗಳಿಸಿದ ವಿಜಯವು ನಿಂದ್ಯವು. ಮೂಲವು ದೃಢವಾಗಿಲ್ಲದಿರುವಲ್ಲಿ ಹೊಸ ರಾಜ್ಯವನ್ನು ಜಯಿಸ ಹೋಗುವ ರಾಜನಿಗೆ ಏಳಿಗೆಯಾಗದು. ಯಾವ ರಾಜನ ರಾಷ್ಟ್ರವು ವಿಶಾಲವಾಗಿಯೂ ಧನಧಾನ್ಯ ಸಮೃದ್ಧವಾಗಿಯೂ, ಸಚಿವರೂ ಯೋಧರೂ ಸಂತುಷ್ಟರಾಗಿಯೂ ಇರುವರೋ ಆ ರಾಜನು ದೃಢಮೂಲನೆನ್ನಬಹುದು. ಭೂಪಾಲರು ಅಧರ್ಮದಿಂದ ರಾಜ್ಯವನ್ನು ಗೆಲ್ಲಲು ಆಶಿಸಬಾರದು. ಅಧರ್ಮದಿಂದ ಸಂಪಾದಿಸಿದ ರಾಜ್ಯವು ಸ್ಥಿರವಲ್ಲ; ಅದು ರಾಜನಿಗೂ ರಾಜ್ಯಕ್ಕೂ ಕೂಡ ಅನಿಷ್ಟಕಾರಿ. ಧರ್ಮಲಬ್ಧ ವಿಜಯಕ್ಕೆ ಅಧಿಕವಾದ ಲಾಭವು ಯಾವುದೂ ಇಲ್ಲ.

"ಪ್ರಜಾ ರಕ್ಷಣೆಯೇ ರಾಜಧರ್ಮದ ಸಾರ. ಇನ್ನು ಯಾವ ಧರ್ಮವೂ ಅವರಿಗೆ ಅಷ್ಟು ಪ್ರಶಸ್ತವಲ್ಲ. ಕ್ಷತ್ರಿಯ ರಾಜರು ಇರುವುದೇ ಲೋಕ ರಕ್ಷಣೆಗೆ. ದಂಡವಿಧಾನವಿಲ್ಲದೆ ಲೋಕರಕ್ಷಣೆ ಸಾಧ್ಯವಲ್ಲ. ಆದಿಯಲ್ಲಿ ರಾಜ್ಯವೂ ಇರಲಿಲ್ಲ, ರಾಜನೂ ಇರಲಿಲ್ಲ; ದಂಡವಾಗಲಿ, ದಂಡನೀತಿಯಾಗಲಿ ದಂಡಾಧಿಕಾರಿಯಾಗಲಿ ಇರಲಿಲ್ಲ; ಜನರು ಒಬ್ಬರನ್ನೊಬ್ಬರು ಬಾಧಿಸದೆ ಒಬ್ಬರ ಯೋಗಕ್ಷೇಮವನ್ನೊಬ್ಬರು ವಹಿಸುತ್ತಿದ್ದರು. ಕಾಲಕ್ರಮದಲ್ಲಿ ಜನರು ಕಾಮಕ್ರೋಧ ಪರತಂತ್ರರಾಗಿ ನ್ಯಾಯಾನ್ಯಾಯವನ್ನು ವಿವೇಚನೆ ಮಾಡದೆ ಸ್ವೇಚ್ಛೆಯಿಂದ ನಡೆಯಲಾರಂಭಿಸಿ ಒಬ್ಬರನ್ನೊಬ್ಬರು ಬಾಧಿಸತೊಡಗಿದರು; ಧರ್ಮವು ನಾಶವಾಯಿತು. ಆಗ ಲೋಕರಕ್ಷಣಾರ್ಥ

ವಾಗಿ ರಾಜನು ನಿರ್ಮಾಣವಾದನು: ಸಂಗಡಲೇ ರಾಜ್ಯ ರಾಜನೀತಿ ದಂಡನೀತಿ—ಇವೂ ನಿರ್ಮಾಣವಾದುವು. ನೀನು ದುಷ್ಟರನ್ನು ಬಿಡದೆ ಯಥಾ ನ್ಯಾಯವಾಗಿ ದಂಡಿಸು. ನೀನು ಕಾಮ ಕ್ರೋಧಗಳ ವಶ ನಾಗದೆ ಧರ್ಮಾರ್ಥಗಳನ್ನು ಸಂಪಾದಿಸು. ಯಾವ ರಾಜನು ಕಾಮ ಕ್ರೋಧಗಳ ಪರತಂತ್ರನಾಗಿ ಅರ್ಥವನ್ನು ಅನ್ವೇಷಣ ಮಾಡುವನೋ ಅವನು ಮೂರ್ಖನು; ಅವನು ಧರ್ಮಭ್ರಷ್ಟನೂ, ಕಡೆಗೆ ಅರ್ಥ ಹೀನನೂ ಆಗುವನು. ಆದುದರಿಂದ ಕ್ರೌರ್ಯವನ್ನು ಬಿಟ್ಟು ಅರ್ಥ ವನ್ನು ಗಳಿಸು, ಜಿತೇಂದ್ರಿಯನಾಗಿ ಕಾಮವನ್ನಾಚರಿಸು.''

ಪಿತಾಮಹನು ಹೇಳಿದುದೆಲ್ಲವನ್ನೂ ಕೇಳಿ ಕೊನೆಗೆ ಯುಧಿಷ್ಠಿರನು ''ನಾನು ರಾಜ್ಯಸುಖವನ್ನೂ ಬಯಸುವನಲ್ಲ, ರಾಜ್ಯವನ್ನೂ ಇಚ್ಛಿ ಸುವನಲ್ಲ. ಊಟವೇ ಬೇಡದಮೇಲೆ ಅಡಿಗೆ ಏಕೆ? ಧರ್ಮನಿಮಿತ್ತ ವಾಗಿ ರಾಜ್ಯವನ್ನು ಅಪೇಕ್ಷಿಸತಕ್ಕುದು. ಅದರಲ್ಲಿ ಅದೇ ಇಲ್ಲ. ರಾಜದಂಡವನ್ನು ಬಿಸುಟು ಪವಿತ್ರವಾದ ಅರಣ್ಯಕ್ಕೆ ಹೋಗಿ ಫಲ ಮೂಲವನ್ನು ತಿಂದುಕೊಂಡು ಜಿತೇಂದ್ರಿಯನಾಗಿ ಮುನಿವೃತ್ತಿ ಯನ್ನು ಅವಲಂಬಿಸಿ ಧರ್ಮಮಾರ್ಗದಲ್ಲಿರುವೆನು'' ಎಂದನು.

ಆ ಮಾತನ್ನು ಕೇಳುತ್ತಲೆ ಭೀಷ್ಮನು—''ಯುಧಿಷ್ಠಿರನೇ! ನಾನು ನಿನ್ನ ಬುದ್ಧಿಯ ನೆಲೆಯನ್ನು ಬಲ್ಲೆನು. ನಿನ್ನ ಸ್ವಭಾವವು ಅತಿ ಮೃದುವಾದುದು. ಆದರೆ ಯಾವಾಗಲೂ ಮೃದುತ್ವದಿಂದಲೇ ರಾಜ್ಯ ವಾಳುವುದು ಸಾಧ್ಯವಲ್ಲ. ನೀನು ಅತಿ ಮೃದು ಮನಸ್ಸುಳ್ಳವನು, ಅತ್ಯಾರ್ಯನು, ಅತಿ ಧಾರ್ಮಿಕನು; ಆದರೆ ದುರ್ಬಲನು. ಆದುದ ರಿಂದಲೇ ಯಾರೂ ನಿನ್ನನ್ನು ಸಡ್ಡೆಮಾಡರು. ಶೌರ್ಯ, ಬಲ, ಸತ್ಯ—ಈ ಗುಣಗಳು ನಿನಗಿರಲೆಂದು ನಿಮ್ಮ ತಂದೆ ಪ್ರಾರ್ಥಿಸು ತ್ತಿದ್ದನು; ಮಹತ್ವ, ಬಲ, ಔದಾರ್ಯ—ಈ ಗುಣಗಳಿರಲೆಂದು ನಿಮ್ಮ ತಾಯಿಯು ಪ್ರಾರ್ಥಿಸುತ್ತಿದ್ದಾಳೆ. ದೇವತೆಗಳೂ ಪಿತೃಗಳೂ ತಮ್ಮ ಹವಿರ್ಭಾಗಕ್ಕೆ ಕಾದಿರುವರು. ದಾನ, ಅಧ್ಯಯನ, ಯಜ್ಞ, ಪ್ರಜಾ ಪರಿ ಪಾಲನೆ—ಈ ಕರ್ಮಗಳು ಧರ್ಮವಾಗಲಿ, ಅಧರ್ಮವಾಗಲಿ, ಅವನ್ನು ಮಾಡುವುದಕ್ಕೇ ನೀನು ಹುಟ್ಟಿರುವುದು. ಅವುಗಳಿಂದಲೇ ನಿನ್ನ ನರ

ಜನ್ಮವು ಈಡೇರುವುದು. ಗೃಹಿಯಾಗಲಿ ಬ್ರಹ್ಮಚಾರಿಯಾಗಲಿ ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ, ಯಾವನೇ ಆಗಲಿ ಸ್ವಧರ್ಮ ಮಾರ್ಗದಲ್ಲಿ ನಡೆಯುತ್ತಿರುವಲ್ಲಿ ಎಡವದೆ ಇರನು. ಗುಣಾಂಶವು ಅಧಿಕವಾಗಿಯೂ ದೋಷವು ಅಲ್ಪವಾಗಿಯೂ ಇರುವ ಉದಾರ ಕರ್ಮ ವನ್ನು ಬಿಡುವುದಕ್ಕಿಂತ ಮಾಡುವುದೇ ಶ್ರೇಯಸ್ಕರವು; ಅದು ಪಾಪವಲ್ಲ. ದುರ್ಜನರನ್ನು ಶಿಕ್ಷಿಸು, ಸಜ್ಜನರನ್ನು ರಕ್ಷಿಸು; ಸಾಧು ಗಳಿಗೂ ಸುಹೃದಯರಿಗೂ ನೀನು ನೆಳಲಾಗಿರು'' ಎಂದನು.

ಅಹಿಂಸೆ, ಸತ್ಯ, ಅಕ್ರೋಧ, ಕ್ಷಮೆ—ಇವೇ ಧರ್ಮ ಲಕ್ಷಣ ಗಳು; ಲೋಕ ವ್ಯವಹಾರದಲ್ಲಿ ದೇಶ ಕಾಲ ಭೇದದಿಂದ ಹಿಂಸೆ, ಅನೃತ, ಕ್ರೋಧ—ಇವನ್ನೇ ರಾಜರು ಧರ್ಮಗಳನ್ನಾಗಿ ಅಂಗೀಕರಿಸುವುದ ರಿಂದ, ತಾನು ಲೋಕಕ್ಕೆ ಹೊರಚ್ಚಾಗಿರಬೇಕೆಂದು ಯುಧಿಷ್ಠಿರನು ಅರಣ್ಯವಾಸವನ್ನು ಬಯಸುತ್ತಿದ್ದನು. ಆ ಭ್ರಮೆಯನ್ನು ಹೋಗ ಲಾಡಿಸುವ ಸಲುವಾಗಿ ಭೀಷ್ಮನು ಇಂತೆಂದು ರಾಜ ಧರ್ಮದ ಮಾಹಾತ್ಮ್ಯವನ್ನು ಹೇಳಿದನು :—

''ರಾಜ್ಯವಿರುವುದು ಧರ್ಮ ಪಾಲನೆಗೆ, ರಾಜನ ಸ್ವೇಚ್ಛಾಪೂರ್ತಿ ಗಲ್ಲ. ಸರ್ವ ಪ್ರಾಣಿಗಳೂ ಧರ್ಮದ ಆಶ್ರಯದಿಂದ ಸುರಕ್ಷಿತವಾಗಿರು ವುವು. ಧರ್ಮವು ರಾಜನ ಆಶ್ರಯದಿಂದ ಸುರಕ್ಷಿತವಾಗಿರುವುದು. ಭೂತ ದಯೆಯೂ ಭೂತ ರಕ್ಷಣೆಯೂ ಪರಮ ಧರ್ಮಗಳಾದುದ ರಿಂದ, ಕ್ಷತ್ರಿಯ ಧರ್ಮವು ನಿಂದ್ಯವಲ್ಲ. ಯಾವುದರಿಂದ ಭೂಭಾರವು ಕಳೆಯುವುದೋ ಲೋಕಕ್ಕೆ ಹಿತವಾಗುವುದೋ ಲೋಕ ಸಂಗ್ರಹವು ಸಾಧ್ಯವಾಗುವುದೋ ಅದನ್ನೇ ಪ್ರಾಜ್ಞರು ಧರ್ಮವೆನ್ನುವರು. ಇಹ ಪರ ಲೋಕಗಳನ್ನು ಪರಿಭಾವಿಸಿಯೇ ಋಷಿಗಳು ಲೋಕ ಹಿತಾರ್ಥ ವಾಗಿ ದಂಡನೀತಿಯನ್ನು ನಿರ್ಮಿಸಿದರು. ದುಷ್ಟರನ್ನು ನಿಗ್ರಹಿಸಿ ಪ್ರಜೆಗಳನ್ನು ಪಾಲಿಸುವುದು ಅಧರ್ಮವಲ್ಲ. ಪ್ರಾಜ್ಞನೇ! ಕ್ಷಮೆ ಯಿಂದಾಗಲಿ ಸತ್ಯದಿಂದಾಗಲಿ ಪ್ರಜಾ ಸಮೂಹದ ಯೋಗಕ್ಷೇಮಕ್ಕೆ ಹಾನಿ ಬರುವ ಸಂಭವದಲ್ಲಿ ಹಿಂಸೆಯೇ ಧರ್ಮವಾಗುವುದು, ಅನೃತವೂ ಗ್ರಾಹ್ಯವೆನಿಸಿಕೊಳ್ಳುವುದು. ಪಾಪವನ್ನು ನಿವಾರಿಸದಿದ್ದರೆ ಧರ್ಮವು

ಕ್ಷೀಣವಾಗುವುದು; ಲೋಕವು ಕೆಡುವುದು. ಮಹಾರಾಜನೇ! ನಿನ್ನ ಸ್ವಧರ್ಮವು ಶ್ರೇಷ್ಠವಾದುದು; ಅದನ್ನು ಪ್ರಯತ್ನಪೂರ್ವಕವಾಗಿ ಪಾಲಿಸು. ಹಿಂದೆ ಜನಕ ಮಹಾರಾಜನು 'ನನ್ನ ವಿತ್ತವು ಅನಂತ ವಾದುದು; ಆದರೂ ಅದರಲ್ಲಿ ಕಾಸುವೀಸವೂ ನನ್ನದಲ್ಲ. ಮಿಥಿಲಾ ನಗರವು ಬೆಂದುಹೋದರೂ ನನ್ನದೇನೂ ಹೋಗುವುದಿಲ್ಲ' ಎಂದು ಮಮಕಾರ ಶೂನ್ಯನಾಗಿ ರಾಜ್ಯೈಶ್ವರ್ಯವನ್ನು ಲೋಕ ಹಿತಾರ್ಥವಾಗಿ ವಿನಾಸಲುಕಟ್ಟಿ ರಾಜ್ಯವಾಳಿ ಸಿದ್ಧಿಯನ್ನು ಪಡೆದನು. ನೀನೂ ಆ ವಿದೇಹ ರಾಜನಂತೆ ಅಹಂಕಾರ ಮಮಕಾರಗಳನ್ನು ಬಿಟ್ಟು ನಿನ್ನ ರಾಜ್ಯವನ್ನು ಲೋಕಾನುಗ್ರಹಾರ್ಥವಾಗಿ ಪರಿಪಾಲಿಸು. ಅದರಿಂದ ನಿನ್ನನ್ನು ಪಾಪಲೇಶವೂ ಸೋಂಕದು; ಅಷ್ಟೇ ಅಲ್ಲ, ಉತ್ತಮ ಲೋಕವೂ ಪ್ರಾಪ್ತವಾಗುವುದು.''

ಈ ಪ್ರಕಾರವಾಗೆಲ್ಲ ಭೀಷ್ಮನು ಯುಧಿಷ್ಠಿರನಿಗೆ ರಾಜ ಧರ್ಮೋಪ ದೇಶವನ್ನು ಮಾಡಲುಪಕ್ರಮಿಸಿ, ಆಪದ್ಧರ್ಮ ಮೋಕ್ಷಧರ್ಮಗಳನ್ನು ವಿಸ್ತಾರವಾಗಿ ಬೋಧಿಸಿ, ಧರ್ಮಾರ್ಥ ದಾನಾದಿ ಸಕಲ ವಿಷಯ ಗಳಲ್ಲಿಯೂ ಅವನಿಗಿದ್ದ ಸಂದೇಹಗಳನ್ನು ಪರಿಹರಿಸಿ ಮೌನವನ್ನು ತಾಳಿದನು.

ಭೀಷ್ಮನು ಸುಮ್ಮನಾಗುತ್ತಲೆ ಅವನನ್ನು ಬಳಸಿ ಜ್ಞಾನಾರ್ಥಿ ಗಳಾಗಿ ಕುಳಿತಿದ್ದ ರಾಜರೆಲ್ಲರೂ ಸ್ವಲ್ಪ ಹೊತ್ತು ಸ್ತಿಮಿತರಾಗಿ ಕುಳಿತರು. ಆಗ ಯುಧಿಷ್ಠಿರನು ಧೀಮಂತನಾದ ಕೃಷ್ಣನ ಸಮೇತನಾಗಿ ಹೋಗಿ ಭೀಷ್ಮನ ಅಡಿಗೆರಗಿ ಹೋಗಿಬರಲು ಅನುಜ್ಞೆಯನ್ನು ಬೇಡಿದನು.

ಭೀಷ್ಮನು ಇಂತೆಂದು ಅನುಜ್ಞೆಯನ್ನು ಕೊಟ್ಟನು:—"ಹಸ್ತಿನಾ ಪುರಕ್ಕೆ ಹೊರಡು. ಇನ್ನು ನಿನ್ನ ಶೋಕವನ್ನು ಬಿಟ್ಟು ಮನಸ್ಸನ್ನು ಧರ್ಮದಲ್ಲಿ ನೆಲೆಯಾಗಿ ನಿಲ್ಲಿಸಿ ಶ್ರದ್ಧೆಯಿಂದ ಅನ್ನದಾನ ದ್ರವ್ಯದಾನ ಗಳನ್ನು ಮಾಡುತ್ತ ದೇವತೆಗಳನ್ನೂ ಪಿತೃಗಳನ್ನೂ ತೃಪ್ತಿಗೊಳಿಸು; ಅದರಿಂದ ನಿನಗೆ ಶ್ರೇಯಸ್ಸುಂಟು. ಪ್ರಜೆಗಳೆಲ್ಲರನ್ನೂ ರಂಜಿಸು. ಸುಹೃದಯರಿಗೆ ಆಶ್ರಯವನ್ನು ಕೊಟ್ಟು ಆದರಿಸು. ಪಾರ್ಥಿವನೇ!

ಇನ್ನು ಹೊರಡು. ನಾನು ಭೂಲೋಕವನ್ನು ಬಿಡುವ ಸಮಯಕ್ಕೆ ಸಿದ್ಧವಾಗಿ ಬಾ.''

ಕೌಂತೇಯನು ಪಿತಾಮಹನ ಪಾದಕ್ಕೆ ಬಿದ್ದು ಧೃತರಾಷ್ಟ್ರನನ್ನೂ ಗಾಂಧಾರಿಯನ್ನೂ ಮುಂದುಮಾಡಿಕೊಂಡು ಋಷಿಗಳು ಭ್ರಾತೃಗಳು ಮಂತ್ರಿಗಳು ಪುರಜನ ರಾಷ್ಟ್ರಜನರು— ಇವರೆಲ್ಲರ ಸಮೇತನಾಗಿ ಶ್ರೀಕೃಷ್ಣನನ್ನು ಒಡಗೊಂಡು ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ಪರಿವಾರವನ್ನೆಲ್ಲ ಯಥಾ ನ್ಯಾಯವಾಗಿ ಆದರಿಸಿ ಬೀಳ್ಕೊಟ್ಟನು. ತರುವಾಯ, ಪತಿ ಪುತ್ರರನ್ನು ಕಳೆದುಕೊಂಡ ಹೆಂಗಸರನ್ನು ಅರ್ಥದಾನ ಪೂರ್ವಕವಾಗಿ ಸಂತೈಸುತ್ತ, ದ್ವಿಜರು, ಯೋಧ ಪ್ರಮುಖರು, ಪುರವಾಸಿಗಳು, ಪ್ರಜಾಸಾಮಾನ್ಯರೂ ಹರಸುವಂತೆ ರಾಜ್ಯಕಾರ್ಯಗಳನ್ನು ಮಾಡುತ್ತ ಐವತ್ತು ದಿನಗಳು ಹಸ್ತಿನಾಪುರದಲ್ಲಿದ್ದನು. ಬಳಿಕ ಕೌರವ ವ್ಯಾಘ್ರನ ನಿರ್ಯಾಣ ಕಾಲವನ್ನು ಸ್ಮರಿಸಿಕೊಂಡು, ಆತನ ಸಂಸ್ಕಾರಕ್ಕೆ ಬೇಕಾದ ಸಂಭಾರವೆಲ್ಲವನ್ನೂ ತೆಗೆಯಿಸಿಕೊಂಡು ಕುಟುಂಬ ಪರಿವಾರ ಸಹಿತನಾಗಿ ಕೃಷ್ಣನ ಸಂಗಡ ತಾತನಿದ್ದೆಡೆಗೆ ಹೊರಟನು. ವ್ಯಾಸ ನಾರದಾದಿ ಋಷಿಗಳಿಂದಲೂ ರಾಜರಿಂದಲೂ ಪರಿವೃತನಾಗಿ ವೀರ ಶಯನದಲ್ಲಿ ಧ್ಯಾನಪರನಾಗಿ ಮಲಗಿದ್ದ ತಾತನ ಸಮೀಪಕ್ಕೆ ಸೋದರರೊಡಗೊಂಡು ಹೋಗಿ ಅಡಿಗೆರಗಿ—''ಜಾಹ್ನವೀ ಸುತನೇ! ನಮಸ್ಕಾರ ಮಾಡುತ್ತೇನೆ. ನಾನು ಯುಧಿಷ್ಠಿರ, ನಿನ್ನ ಅಪ್ಪಣೆಯಂತೆ ಅಗ್ನಿ ಸಹಿತವಾಗಿ ಬಂದಿದ್ದೇನೆ. ಆಚಾರ್ಯರೂ, ಋತ್ವಿಜರೂ, ಬ್ರಾಹ್ಮಣರೂ ಬಂದಿದ್ದಾರೆ. ನಿನ್ನ ಪುತ್ರ ಧೃತರಾಷ್ಟ್ರ ಮಹಾರಾಜನೂ ನನ್ನ ತಮ್ಮಂದಿರು, ಮಂತ್ರಿಗಳು, ರಾಜರು ಆದಿಯಾಗಿ ಸರ್ವರೂ ಬಂದು ನಿಂತಿದ್ದಾರೆ; ಕೃಷ್ಣನೂ ಇಲ್ಲಿಯೇ ಇದ್ದಾನೆ. ನಿನ್ನ ಅಪ್ಪಣೆಯಂತೆ ಎಲ್ಲವೂ ಸಿದ್ಧವಾಗಿದೆ'' ಎಂದನು.

ಆ ಮಾತನ್ನು ಕೇಳಿ ಭೀಷ್ಮನು ಮೆಲ್ಲಗೆ ಕಣ್ದೆರೆದು ತನ್ನ ಸುತ್ತಲಿದ್ದ ಭಾರತರೆಲ್ಲರನ್ನೂ ನೋಡಿ, ಯುಧಿಷ್ಠಿರನ ಕೈಯನ್ನು ಹಿಡಿದುಕೊಂಡು ಮೇಘ ಗಂಭೀರ ಸ್ವರದಿಂದ—''ಕೌಂತೇಯನೇ! ಅಮಾತ್ಯರೊಡನೆ ನೀನು ಸಕಾಲಕ್ಕೆ ಬಂದಿರುವುದು ನನ್ನ ಪುಣ್ಯವೇ ಸರಿ. ದಿವಾ

ಕರನು ಉತ್ತರಾಯಣವನ್ನು ಪ್ರವೇಶ ಮಾಡಿದ್ದಾನೆ. ನಾನು ಐವತ್ತೆಂಟು ರಾತ್ರಿಗಳು ಈ ಶರ ಶಯನದಲ್ಲಿ ಮಲಗಿದ್ದು ನೂರು ವರ್ಷಗಳನ್ನು ಕಳೆಗಂತೆ ಕಳೆದೆನು. ಇದು ಮಾಘಮಾಸ, ಶುಕ್ಲ ಪಕ್ಷ, ಅಷ್ಟಮಿ" ಎಂದು ನುಡಿದು ಆ ಯೋಗಿಯು ಧೃತರಾಷ್ಟ್ರನ ಕಡೆಗೆ ತಿರುಗಿ—

"ರಾಜನೇ! ನೀನು ಬಹುಶ್ರುತರಾದ ಬ್ರಾಹ್ಮಣರ ಉಪಾಸನೆ ಮಾಡಿದವನು; ವೇದಾದಿ ಸಕಲ ಶಾಸ್ತ್ರಗಳನ್ನೂ ಧರ್ಮಶಾಸ್ತ್ರಗಳನ್ನೂ ಬಲ್ಲವನು; ಶೋಕಿಸಬೇಡ; ಆಗುವುದಾಯಿತು. ದೇವ ರಹಸ್ಯಗಳೆಲ್ಲವನ್ನೂ ನೀನು ವ್ಯಾಸಾದಿಗಳಿಂದ ಕೇಳಿದ್ದೀಯೆ. ಯುಧಿಷ್ಠಿರಾದಿಗಳು ಪಾಂಡುವಿನ ಮಕ್ಕಳು ಹೇಗೊ ಹಾಗೆ ಧರ್ಮತಃ ನಿನ್ನ ಮಕ್ಕಳಾಗಿಯೂ ಇರುವರು. ಅವರು ಗುರು ಶುಶ್ರೂಷೆಯಲ್ಲಿ ನಿರತರು. ನೀನು ಅವರನ್ನು ಸಲಹು. ಧರ್ಮರಾಜನು ಶುದ್ಧಾತ್ಮನು, ನಿನ್ನಾಜ್ಞೆಯಲ್ಲಿರುವವನು, ಅಹಿಂಸಾಪರನು. ನಿನ್ನ ಮಕ್ಕಳು ದುರಾತ್ಮರು, ಕ್ರೋಧ ಲೋಭಪರರು; ಈರ್ಷ್ಯಾ ಪರತಂತ್ರರಾಗಿ ದುಷ್ಟ ಕಾರ್ಯಗಳನ್ನು ಮಾಡುತ್ತಿದ್ದರು; ಅವರನ್ನು ಕುರಿತು ನೀನು ಹಂಬಲಿಸಬೇಡ" ಎಂದು ಸಮಾಧಾನ ಹೇಳಿದನು.

ಆ ಬಳಿಕ ಕೌರವನು ಮಹಾ ಬಾಹುವಾದ ವಾಸುದೇವನನ್ನು ಸಂಬೋಧಿಸಿ—"ದೇವ ದೇವೇಶ! ನಮಸ್ಕಾರ! ಪುರುಷೋತ್ತಮನೇ! ನೀನು ಸರ್ವಲೋಕ ಶರಣ್ಯ; ನನ್ನನ್ನು ಸಲಹು. ಇಹಲೋಕದಿಂದ ಹೊರಡುವೆನು; ಅನುಜ್ಞೆಯನ್ನು ಕೊಡು. ಪಾಂಡವರಿಗೆ ನೀನೇ ದಿಕ್ಕು; ಅವರನ್ನು ರಕ್ಷಿಸು. ನಾನು ದುರ್ಯೋಧನನಿಗೆ—ಯತಃ ಕೃಷ್ಣಸ್ತತೋ ಧರ್ಮಃ ಯತೋ ಧರ್ಮಸ್ತತೋ ಜಯಃ—'ಎಲ್ಲಿ ಕೃಷ್ಣನೋ ಅಲ್ಲಿ ಧರ್ಮ; ಎಲ್ಲಿ ಧರ್ಮವೋ ಅಲ್ಲಿ ಜಯ' ಎಂದು ಅಡಿಗಡಿಗೂ ಹೇಳುತ್ತ, ವಾಸುದೇವನ ಸಮಾಶ್ರಯವನ್ನು ಸಂಪಾದಿಸಿ ಪಾಂಡವರ ಸಂಗಡ ಸಂಧಿಮಾಡಿಕೊ, ಇದು ಸಮಯ, ಇದು ಸಮಯ ಎಂದು ಸಾರಿ ಸಾರಿಗೂ ಮೊರೆಯಿಟ್ಟೆನು. ಆ ಮೂರ್ಖನು ನನ್ನ ಮಾತನ್ನು

ಕೇಳದೆ ಪೃಥ್ವಿಯನ್ನು ನಾಶಮಾಡಿದನು, ಕಡೆಗೆ ತಾನೂ ಹತನಾದನು" ಎಂದು ನುಡಿದನು.

ಬಳಿಕ ಗಂಗಾ ಸೂನು ಕೃಷ್ಣಂ।
ಗೊಲಿದು ಕೈಗಳ ಮುಗಿದು ಪೊಗಳಿದ।
ನೆಲೆ ! ಜನಾರ್ದನ ! ಭಕ್ತವತ್ಸಲ ! ಶಂಖ ಚಕ್ರ ಧರಾ ॥
ಲಲಿತ ಶಾಙ್ಗ್ಗಾಯುಧ ಲಸತ್ಕರ।
ತಳ ! ಕೃಪಾನ್ವಿತ ! ಕೃಷ್ಣ ! ಕೇಶವ !।
ಕಲುಷ ಹರ ! ಕರುಣಾಮಯುವ ದೃಷ್ಟಿಯಲಿ ನೋಡೆಂದ ॥

ನಿನಗೆ ನಾ ನಿಜ ಭಕ್ತ ನಿನ್ನಡಿ।
ವನಜಗಳನೇ ನಂಬಿದೆನು ತಾ।
ನೆನಿತು ಧನ್ಯನೊ ! ನಿನ್ನ ಮೂರ್ತಿಯ ಕಾದು ಫಲವಾಯ್ತು ॥
ಘನವೆನಿಪ ಕೃಪೆಯಲಿ ನಿರೀಕ್ಷಿಸು।
ವನಜಲೋಚನ ! ಭಕ್ತವತ್ಸಲ !।
ಜನನ ಮರಣ ವಿದೂರ ! ಜಯ ಜಯ ! ಎಂದನಾ ಭೀಷ್ಮ ॥

ಎನಲು ಕೃಪೆಯಲಿ ಕೃಷ್ಣನಾ ಭೀ।
ಷ್ಮನ ಮುಖವನಾದರದಲೀಕ್ಷಿಸಿ।
ಮನವೊಲಿದು ಮೈದಡವಿ ನಿನ್ನವೊಲಾರು ಸುಕೃತಿಗಳು ॥ (ಭಾರತ)

ಎಂದೀ ಪ್ರಕಾರವಾಗಿ ಕೃಷ್ಣನು ತನ್ನ ಭಕ್ತವಾತ್ಸಲ್ಯವನ್ನು ತೋರಿ, ಅವನು ಪಿತೃಭಕ್ತನು, ಶುದ್ಧಾತ್ಮನು, ಪಾಪಲೇಶವನ್ನೂ ಮಾಡಿದವನಲ್ಲ, ಅಪರ ಮಾರ್ಕಂಡೇಯನು, ತನ್ನ ಭಕ್ತರೊಳಗೆ ಅವನೇ ಅಧಿಕನು— ಎಂದು ಭೀಷ್ಮನನ್ನು ಮೆಚ್ಚಿ ಅನುಜ್ಞೆಕೊಟ್ಟನು.

ಇಂತು, ಶ್ರೀಕೃಷ್ಣನ ಅಭಿಮತವನ್ನು ಪಡೆದು ಭೀಷ್ಮನು ಧೃತರಾಷ್ಟ್ರನನ್ನೂ ಪಾಂಡವರನ್ನೂ ಅವರ ಬಂಧು ಮಿತ್ರರನ್ನೂ ಸಂಬೋಧಿಸಿ:—

"ನಾನು ಪ್ರಾಣಗಳನ್ನು ಬಿಡಲಿಚ್ಛಿಸುತ್ತೇನೆ; ಅನುಜ್ಞೆಯನ್ನು ಕೊಡಿರಿ. ಸರ್ವ ಪ್ರಯತ್ನದಿಂದಲೂ ಸತ್ಯವನ್ನು ಆಶ್ರಯಿಸಿರಿ, ಸತ್ಯವೇ

ಪರಮ ಬಲ. ಧರ್ಮಶೀಲರೂ ತಪೋನಿಷ್ಠರೂ ನಿಯತಾತ್ಮರೂ ಅಹಿಂಸಾಪರರೂ ಆದ ಬ್ರಾಹ್ಮಣರ ಸಹವಾಸದಲ್ಲಿರಿ; ಪ್ರಾಜ್ಞರಾದ ದ್ವಿಜರನ್ನೂ ಆಚಾರ್ಯರನ್ನೂ ಋತ್ವಿಜರನ್ನೂ ಆದರಿಸಿರಿ" ಎಂದು ಹೇಳಿ ಮತ್ತೆ ಶ್ರೀಕೃಷ್ಣನಿಗೆ ಕೈಮುಗಿದು ಕಣ್ಮುಚ್ಚಿ—

ಕಮಲ ನೇತ್ರನ ಧ್ಯಾನವನು ಹೃ।
ತ್ಕಮಲದೊಳು ನೆಲೆಗೊಳಿಸಿಯಿಂದ್ರಿಯ।
ಭ್ರಮೆಗಳನು ತೊಲಗಿಸುತ ಮೂಲಾನಿಲನ ರೇಚಿಸುತ॥
ಕ್ರಮದಿ ವಾಯುಗಳನು ನಿರೋಧಿಸಿ।
ವಿಮಲ ಬ್ರಹ್ಮಾನಂದ ವಸ್ತುವಿ।
ನಮಿತ ಯೋಗಾರೂಢನಾದನು ವರ ಸಮಾಧಿಯಲಿ॥

ಬಳಿಕ ನಡು ನೆತ್ತಿಯನು ಭೇದಿಸಿ।
ಲಲಿತ ತೇಜಃಪುಂಜ ದೆಸೆಗಳು।
ಬೆಳಗೆ ಹಾಯ್ದುದು ತರಣಿಮಂಡಲ ಮಧ್ಯ ಮಾರ್ಗದಲಿ॥
ನಳಿನ ನಾಭನು ಸಕಲ ಮುನಿಗಳು।
ಹೊಳೆವ ತೇಜೋಮಯವನೀಕ್ಷಿಸು।
ತಳುಕಿ ಕಣ್ಣೀರ್ಗೆಸೆ ಜಯ! ಜಯ! ಎಂದುದಖಿಳ ಜನ॥

ಸುರರು ಸುರುಚಿರ ಪುಷ್ಪವೃಷ್ಟಿಯ।
ಸುರಿದರಾ ಸಮಯದಲಿ ಭೋರೆನೆ।
ಮೆರೆಯೆ ಸುರದುಂದುಭಿಗಳಿಂದಾದ್ಯಖಿಳ ದಿಗಧಿಪರೂ॥
ಪರಮ ಹರುಷದಿ ಕೀರ್ತಿಸಿದರಾ।
ಹರಿಯ ಕೃಪೆಯನು ಧುನಿ ಕುಮಾರನ।
ಪರಮ ಭಕ್ತಿಯ ನೋಡಿ ಪೊಗಳಿದುದಖಿಳ ಭುವನಜನಾ॥ (ಭಾರತ)

ಮಂಗಳಮಸ್ತು

2553—26. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.

